# ನೆಲಮಂಗಲ ತಾಲ್ಲೂಕು : ಸಾಂಸ್ಕೃತಿಕ ಅಧ್ಯಯನ

ಚರಿತ್ರೆ ವಿಭಾಗದಲ್ಲಿ ಎಂ.ಫಿಲ್. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸುತ್ತಿರುವ ಸಂಪ್ರಬಂಧ

ಸಂಶೋಧಕಿ
ವಿಜಯಲಕ್ಷ್ಮಮ್ಮ ಜಿ.

ಮಾರ್ಗದರ್ಶಕರು
ಡಾ. ಎಸ್. ಚೆನ್ನಸ್ವಾಮಿ ಸೋಸಲೆ
ಪ್ರವಾಚಕರು





ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬



೨೦೦೭ - ೦೮

# ನೆಲಮಂಗಲ ತಾಲ್ಲೂಕು : ಸಾಂಸ್ಕೃತಿಕ ಅಧ್ಯಯನ

ಚರಿತ್ರೆ ವಿಭಾಗದಲ್ಲಿ ಎಂ.ಫಿಲ್. ಪದವಿಗಾಗಿ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ಸಂಪ್ರಬಂಧ



ಸಂಶೋಧಕಿ

ವಿಜಯಲಕ್ಷ್ಮಮ್ಮ ಜಿ.

ಮಾರ್ಗದರ್ಶಕರು

ಡಾ. ಎನ್. ಚಿನ್ನಸ್ವಾಮಿ ಸೋಸಲೆ

ಪ್ರವಾಚಕರು






ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೮

## ದೃಢೀಕರಣ ಪತ್ರ

"ನೆಲಮಂಗಲ ತಾಲ್ಲೂಕು: ಸಾಂಸ್ಕೃತಿಕ ಅಧ್ಯಯನ" ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ವಿಜಯಲಕ್ಷ್ಮಮ್ಮ.ಜಿ. ಅವರು ನನ್ನ ಮಾರ್ಗದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ಸಂಪ್ರಬಂಧದ ಮೂಲ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 15.10.08
ಸ್ಥಳ : ವಿದ್ಯಾರಣ್ಯ

ಮಾರ್ಗದರ್ಶಕರು
( ಡಾ. ಎನ್. ಚಿನ್ನಸ್ವಾಮಿ ಸೋಸಲೆ )
ಪ್ರವಾಚಕರು ಮತ್ತು ಮಾರ್ಗದರ್ಶಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

## ಪ್ರಮಾಣ ಪತ್ರ

**"ನೆಲಮಂಗಲ ತಾಲ್ಲೂಕು: ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಡಾ. ಎನ್. ಚಿನ್ನಸ್ವಾಮಿ ಸೋಸಲೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಸಂಪ್ರಬಂಧದ ಮೂಲ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ವಿಜಯಲಕ್ಷ್ಮಮ್ಮ.ಜಿ.

ದಿನಾಂಕ : 15/10/08
ಸ್ಥಳ : ವಿದ್ಯಾರಣ್ಯ


(ವಿಜಯಲಕ್ಷ್ಮಮ್ಮ ಜಿ.)
ಎಂ.ಫಿಲ್. ಸಂಶೋಧನಾ ವಿದ್ಯಾರ್ಥಿನಿ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

## ಪರಿವಿಡಿ

# ಅಧ್ಯಾಯ ಒಂದು

## ಪ್ರವೇಶ

೧.೧. ಅಧ್ಯಯನದ ಉದ್ದೇಶಗಳು

೧.೨. ಅಧ್ಯಯನದ ವಿದಿ ವಿಧಾನಗಳು ಮತ್ತು ವ್ಯಾಪ್ತಿ

೧.೩. ಅಧ್ಯಯನದ ಪ್ರಾಮುಖ್ಯತೆ ಮತ್ತು ಸ್ವರೂಪ

**ಚ**ರಿತ್ರೆಯುದ್ದಕ್ಕೂ ದೊಡ್ಡ ದೊಡ್ಡ ಸಾಮ್ರಾಜ್ಯಗಳ ಅಥವಾ ರಾಜಮನೆತನಗಳನ್ನು ಅಧ್ಯಯನ ಮಾಡುತ್ತಾ ಬಂದಿದ್ದೇವೆ. ಅದರೊಂದಿಗೆ ಪ್ರಾದೇಶಿಕ ಅಥವಾ ಸ್ಥಳೀಯ ಚರಿತ್ರೆಯ ಕಡೆ ನಿರ್ಲಕ್ಷ್ಯ ತಾಳಲಾಗಿತ್ತು. ಕೆಲವು ದಶಕಗಳಿಂದೀಚೆಗೆ ಚರಿತ್ರೆಯ ಅಧ್ಯಯನ ಅಥವಾ ಸಂಶೋದನೆಯ ಶಿಸ್ತು ಬದಲಾಗಿದೆ. ಸಾಮ್ರಾಜ್ಯ/ಸಂಸ್ಥಾನದ ಮೂಲಕ ಕಟ್ಟಿಕೊಡುವ ಚರಿತ್ರೆಗಿಂತ ಸ್ಥಳೀಯತೆಯ ಮೂಲಕ ಕಟ್ಟಿಕೊಡುವ ಚರಿತ್ರೆ ಇಂದು ಮಹತ್ವವನ್ನು ಪಡೆದುಕೊಂಡಿದೆ. ಸ್ಥಳೀಯ ಚರಿತ್ರೆಯು ಸಮಗ್ರ ಚರಿತ್ರೆಗೆ ಪೂರಕವಾಗಿ ಸೂಕ್ಷ್ಮ ಅಧ್ಯಯನದ ಮೂಲಕ ಸಮಗ್ರ ಅಧ್ಯಯನ ಮಾಡುವಲ್ಲಿ ಹೆಚ್ಚಿನ ಆಸಕ್ತಿ ತೋರಲಾಗುತ್ತಿದೆ. ಇತಿಹಾಸಕಾರರಿಂದಲೇ ಕಡೆಗಣಿಸಲ್ಪಟ್ಟಿದ್ದ ಸ್ಥಳೀಯ ಇತಿಹಾಸವು ಇಂದಿನ ಇತಿಹಾಸಶಾಸ್ತ್ರದ ಬೆಳವಣಿಗೆಯ ಪರಿಣಾಮವಾಗಿ ಚರಿತ್ರೆಯ ಅಧ್ಯಯನದಲ್ಲಿ ಒಂದು ವಿಶಿಷ್ಟ ಸ್ಥಾನ ಪಡೆದಿದ್ದು, ಹೆಚ್ಚಿನ ಮಹತ್ವವನ್ನು ದೊರಕಿಸಿಕೊಂಡಿದೆ.

"ಸ್ಥಳೀಯ ಚರಿತ್ರೆಯೆಂಬುದು ಒಂದು ನಿರ್ದಿಷ್ಟ ಭೌಗೋಳಿಕ ಪರಿಸರದಲ್ಲಿ ಹಿಂದೆ ಸಂಭವಿಸಿದ ಘಟನೆಗಳ ಅಥವಾ ಬದುಕಿಬಾಳಿದ ಜನಾಂಗಗಳ ಅಥವಾ ಸಮುದಾಯಗಳ ಅಧ್ಯಯನ."[೧] ಎಲ್ಲ ಕಾಲಘಟ್ಟಗಳಲ್ಲಿಯ ಮನುಷ್ಯನ ಸ್ಥಿತಿಗತಿಗಳ ಅಧ್ಯಯನ ಮಾಡಿ ಪುನರ್ ನಿರ್ಮಾಣ ಮಾಡಿದಾಗ ಅದು ಸ್ಥಳೀಯ ಚರಿತ್ರೆ ಎನಿಸುತ್ತದೆ. ಒಟ್ಟಾರೆ ಸ್ಥಳೀಯ ಚರಿತ್ರೆ ಎಂಬುದು ದೇಶೀಯತೆಯನ್ನು ಅನಾವರಣಗೊಳಿಸುವ ಚಾರಿತ್ರಿಕ ಅಧ್ಯಯನ ಕ್ರಮ. ಸ್ಥಳೀಯ ಚರಿತ್ರೆ ತನ್ನದೇ ಭೌಗೋಳಿಕ ಮಿತಿಗೊಳಪಟ್ಟರೂ ಸ್ಥಳೀಯ ಸಮುದಾಯಗಳ, ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಬೌದ್ಧಿಕ ಇತ್ಯಾದಿ ಸಂಗತಿಗಳ ವಿವರಗಳನ್ನು ಸಂಗ್ರಹಿಸಿ ಕೊಡುವ ವಿಪುಲ ಅವಕಾಶ ಅದಕ್ಕಿದೆ.

"ಒಂದು ಪ್ರದೇಶದ ವಿಶಿಷ್ಟ ಸಾಂಸ್ಕೃತಿಕ ಚರಿತ್ರೆಯನ್ನರಿಯುವ ಪ್ರಯತ್ನವಾಗಿ ಸ್ಥಳೀಯ ಚರಿತ್ರೆ ಒಂದು ಚೌಕಟ್ಟನ್ನು ಸೃಷ್ಟಿಸಿಕೊಡುತ್ತದೆ. ಚರಿತ್ರೆಗಾರನಿಗೆ ಮುಖ್ಯವೆನಿಸುವ ದಾಖಲೆಗಳು, ವಾಸ್ತುಶಿಲ್ಪ, ಉಡುಗೆ-ತೊಡುಗೆ, ಸ್ಥಳೀಯ ಉತ್ಪಾದನಾ ವಸ್ತುಗಳು, ಪರಿಸರ ಇವೆಲ್ಲವೂ ಸ್ಥಳೀಯ ಚರಿತ್ರೆಗೆ ಸಮೀಪವಾದವು. ಸ್ಥಳೀಯ ಚರಿತ್ರೆಯು ಒಂದು ಪ್ರದೇಶದ ಜನರು ಆರ್ಥಿಕವಾಗಿ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಎಷ್ಟರ ಮಟ್ಟಿಗೆ ಮುಂದುವರಿದಿದ್ದಾರೆ? ಅಲ್ಲಿಯ ಜೀವನ ವಿಧಾನ ಎಂತಹದು? ಯಾವ ಸಂಸ್ಕೃತಿಗಳು ನೆಲೆಗೊಂಡಿವೆ? ಎನ್ನುವ ಬಗೆಗೆ ಒಂದು ಸ್ಪಷ್ಟ ಚಿತ್ರವನ್ನು ನೀಡುವಂತಹುದಾಗಿರುತ್ತದೆ."[೨]

ಸ್ಥಳೀಯ ಇತಿಹಾಸ ಅಧ್ಯಯನಗೊಳ್ಳುವಾಗ ಸಾಂಸ್ಕೃತಿಕ ದೃಷ್ಟಿಯಿಂದ ಅದನ್ನು ಪರಿಶೀಲಿಸುವುದು ಅತ್ಯಂತ ಉಪಯುಕ್ತವಾದುದು. ರಾಜಕೀಯ ಚಟುವಟಿಕೆಯ ಅನ್ವೇಷಣೆ ಅನೇಕ ತೊಡಕುಗಳಿಂದ ಕೂಡಿದ್ದು, ಘಟನಾವಳಿಗಳಿಂದ ಹೊರಗೆ ನಿಂತು ಬರೆಯುವುದು ಬರಹಗಾರರಿಗೆ ಕಷ್ಟವಾಗುತ್ತದೆ. ಆದುದರಿಂದ ರಾಜಕೀಯ ಜೀವನದ ನಿರೂಪಣೆಗಿಂತ ಕಲಾ ಇತಿಹಾಸ ಬಹು ಸೂಕ್ತವಾದ ವಿಷಯವೆನಿಸುತ್ತದೆ. ಕಲೆ ಮತ್ತು ವಾಸ್ತುಶಿಲ್ಪ, ಸಂಗೀತ ಮತ್ತು ನೃತ್ಯ, ಸಾಹಿತ್ಯ, ಧರ್ಮ ಮೊದಲಾದ ವಿಷಯಗಳು ವಿಕಾಸ ನೀತಿಯನ್ನು ಅನುಸರಿಸುವುದರಿಂದ

ಅವು ಭೌಗೋಳಿಕ ಗಡಿಗಳನ್ನು ದಾಟಿ ಅನೇಕ ಕಡೆ ವ್ಯಾಪಿಸುತ್ತವೆ. ಈ ಹಂತದಲ್ಲಿ ಸಂಸ್ಕೃತಿ ಎಂಬುದು ಮಾನವನ ಬದುಕಿನಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ.

ಸ್ಥಳೀಯ ಚರಿತ್ರೆಯು ಬಿಡಿ ಬಿಡಿಯಾಗಿ ಒಂದು ಪ್ರದೇಶದ ಮಾಹಿತಿಗಳನ್ನು ನೀಡುವಂತಹದ್ದಾಗಿದ್ದು, ಈ ದೃಷ್ಟಿಯಿಂದ ವಿಪುಲವಾದ ಜ್ಞಾನ ಭಂಡಾರವನ್ನು ಪಡೆದುಕೊಳ್ಳಬಹುದಾಗಿದೆ. ಹಾಗಾಗಿ ಇಂದು ಕರ್ನಾಟಕದ ಜಿಲ್ಲೆಗಳ ಮಟ್ಟದಲ್ಲಿ ನಗರ, ಪಟ್ಟಣ, ಗ್ರಾಮಗಳು ಸ್ಥಳೀಯ ಚರಿತ್ರೆಯ ಸಂಶೋಧನೆಗೆ ಒಳಪಟ್ಟು ಹೊಸ ಹೊಸ ವಿಚಾರಗಳು ಹರಿದು ಬರುತ್ತಿವೆ. ಸಾಂಸ್ಕೃತಿಕ ಚರಿತ್ರೆಯನ್ನು ಮರುಜೋಡಣೆ ಮಾಡುವ ಕಾರ್ಯ ಸ್ಥಳೀಯ ಚರಿತ್ರೆಯಿಂದ ಆಗಬೇಕಾಗಿರುವುದು ಅನಿವಾರ್ಯ.

ಇಂದು ದೇಶದ ಸಾಂಸ್ಕೃತಿಕ ಚರಿತ್ರೆ ಸಮಗ್ರವಾಗಿ ಅಧ್ಯಯನವಾಗಬೇಕಾದರೆ ನಾಡಿನ ಸ್ಥಳೀಯ ಚರಿತ್ರೆಯು ತನ್ನ ಮಹತ್ವವನ್ನು ಹೆಚ್ಚಿಸಿಕೊಳ್ಳಬೇಕಾಗಿದೆ. ಈ ನಿಟ್ಟಿನಲ್ಲಿ ರಾಜ್ಯದ ರಾಜಧಾನಿಯಾಗಿ ಏಷ್ಯಾ ಖಂಡದಲ್ಲಿಯೇ ಮುಂಚೂಣಿ ನಗರವಾಗಿ ಮುನ್ನೆಡೆಯುತ್ತಿರುವ ಐತಿಹಾಸಿಕ ನಗರ ಬೆಂಗಳೂರಿಗೆ ಹೊಂದಿಕೊಂಡಿರುವ ನೆಲಮಂಗಲ ತಾಲ್ಲೂಕು ಇಲ್ಲಿ ಸಾಂಸ್ಕೃತಿಕ ಅಧ್ಯಯನಕ್ಕೆ ಒಳಗಾಗಿದೆ. ಚರಿತ್ರೆಯ ವಿವಿಧ ಮಜಲುಗಳನ್ನು ಹೊಂದಿರುವ ನೆಲಮಂಗಲವು ತಾಲ್ಲೂಕು ಕರ್ನಾಟಕ ಚರಿತ್ರೆ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ತನ್ನದೇ ಆದ ಒಂದು ವಿಶಿಷ್ಟವಾದ ಸ್ಥಾನವನ್ನು ಪಡೆದಿದೆ. ಶಾಸನಗಳಲ್ಲಿ ನೆಲಮಂಗಲದ ಕೆಲವು ಸ್ಥಳಗಳು ಕುಕ್ಕಲನಾಡು ಎಂದು ಕರೆಯಿಸಿಕೊಳ್ಳುವವು. ಕ್ರಿ.ಶ. ೬೫೦ ರ ಶ್ರೀವಿಕ್ರಮನ ಮೊದಲ ಶಾಸನವನ್ನೊಳಗೊಂಡ ಈ ಪ್ರದೇಶ ವಿವಿಧ ರಾಜಮನೆತನಗಳ ಆಳ್ವಿಕೆಗೆ ಒಳಗಾಗಿದೆ ಎಂಬುದನ್ನು ತಿಳಿಯಬಹುದು. ಪ್ರಾಗೈತಿಹಾಸಿಕ ಕಾಲದಿಂದಲೂ ಸಾಂಸ್ಕೃತಿಕ ಹಿರಿಮೆಯನ್ನು ಹೊಂದಿರುವ ನೆಲಮಂಗಲವು ಸಮಕಾಲೀನ ಇತಿಹಾಸದಲ್ಲಿ ತನ್ನ ಜೀವಂತಿಕೆಯನ್ನು ಉಳಿಸಿಕೊಂಡು ಬಂದಿದೆ. ಚರಿತ್ರೆಯ ಮಾಹಿತಿಯ ಕಣಜವಾಗಿದ್ದು, ಇತಿಹಾಸದ ಬೇರುಗಳ ಪಳಯುಳಿಕೆಗಳನ್ನು ತನ್ನ ಒಡಲಲ್ಲಿ ತುಂಬಿಕೊಂಡಿದೆ.

ಇಲ್ಲಿ ವಿವಿಧ ರಾಜಮನೆತನಗಳು ಆಳ್ವಿಕೆ ಮಾಡಿದ್ದು, ಅಪಾರವಾದ ಶಾಸನಗಳು, ಮಠಮಾನ್ಯಗಳು, ಯಾತ್ರಾಸ್ಥಳಗಳು, ಕಲೆ ಮತ್ತು ವಾಸ್ತುಶಿಲ್ಪ, ಮೂರ್ತಿಶಿಲ್ಪಗಳು ಕಂಡುಬರುವುದರೊಂದಿಗೆ ಇಲ್ಲಿನ ನಂಬಿಕೆ, ಆಚಾರ, ವಿಚಾರ, ಜಾತ್ರಾ ಉತ್ಸವಗಳು ಸಾಂಸ್ಕೃತಿಕ ಅಧ್ಯಯನಕ್ಕೆ ಪ್ರಮುಖ ಆಕರಗಳಾಗಿವೆ. ನೆಲಮಂಗಲ ತಾಲ್ಲೂಕು ಪ್ರಾಚೀನ ಕಾಲದಿಂದಲೂ ಇಂದಿನವರೆಗೂ ಆಡಳಿತ ಹಾಗೂ ಸಾಂಸ್ಕೃತಿಕ ಕೇಂದ್ರವಾಗಿದ್ದು, ಆಯಾಯ ಕಾಲದ ಐತಿಹಾಸಿಕ ಹೆಗ್ಗುರುತುಗಳನ್ನು ಸಂಸ್ಕೃತಿಯ ವೈವಿಧ್ಯತೆಗಳನ್ನು ಗರ್ಭೀಕರಿಸಿಕೊಂಡು ಬೆಳೆದು ಬಂದಿದೆ.

"ಸ್ಥಳೀಯ ಚರಿತ್ರೆಯ ನಿರ್ಮಿತಿ ಇಂದು ಹಲವು ಮಿತಿಗಳ ಒಂದು ತೊಡಕಿನ ಚಟುವಟಿಕೆಯಾಗಿದೆ. ಸ್ಥಳೀಯ ಚರಿತ್ರೆ ಎನ್ನುವುದು ಸಂಸ್ಕೃತೀಕರಣ, ಆಧುನೀಕರಣ, ಜಾಗತೀಕರಣದಿಂದ ಆಗಿರುವ ಸಾಂಸ್ಕೃತಿಕ ಮಿಶ್ರಣ. ಪಾರಂಪರಿಕವಾಗಿ ಸ್ಥಳೀಯ ಸಂಸ್ಕೃತಿಯ ಹಲವಾರು ಜಾತಿ ಜನಾಂಗಗಳ ಸಂಸ್ಕೃತಿಗಳ ರೂಢಿಕೆಯಾಗಿದೆ. ಆಧುನಿಕತೆ ತನ್ನ ಸಮಾನತೆಯ ಕಾರ್ಯಕ್ರಮದಲ್ಲಿ ವಸಾಹತುಪೂರ್ವದ ಸ್ಥಳೀಯತೆಯನ್ನು ಕರಗಿಸಿತು"[೩]. ಅದರಂತೆ ನವ ವಸಾಹತೀಕರಣದ ಹಿನ್ನೆಲೆಯಲ್ಲಿ ಜಾಗತೀಕರಣ ಪ್ರಕಿಯೆ ನಡೆಯುತ್ತದೆ.

"ಜಾಗತೀಕರಣದ ಪರಿಕಲ್ಪನೆ ಇಂದು ಹೆಮ್ಮರವಾಗಿ ಬೆಳೆದು ಎಲ್ಲ ಜ್ಞಾನಶಾಖೆಗಳನ್ನು ಪ್ರವೇಶಿಸತೊಡಗಿ ಇಂದಿನ ಸಾಂಪ್ರದಾಯಿಕ ನಂಬುಗೆ-ನಡವಳಿಕೆಗಳನ್ನು ಪರಿವರ್ತಿಸುವ, ಪರಿಷ್ಕರಿಸುವ ನಿಟ್ಟಿನಲ್ಲಿ ತೀವ್ರ ಪರಿಣಾಮ ಬೀರತೊಡಗಿರುವುದು ಸ್ಪಷ್ಟ"[೪]. ಇದರಿಂದ ಸ್ಥಳೀಯತೆಯ ಅನನ್ಯತೆಯನ್ನು ಮತ್ತೊಮ್ಮೆ ಪ್ರಶ್ನಿಸುವಂತಾಗಿರುವುದು. ನಿರ್ದಿಷ್ಟ ನೆಲಕ್ಕೆ ಅಥವಾ ಸ್ಥಳಕ್ಕೆ ಅಂಟಿಕೊಂಡಿರುವ ಯಾವುದೇ ಸಮುದಾಯ ತನ್ನದೇ ಸಂಸ್ಕೃತಿಯ ವೈಶಿಷ್ಟ್ಯಗಳನ್ನು

ಹೊಂದಿರುವುದು ಸಹಜವಾದರೂ ಜಗತ್ತಿನ ಇತರೆಡೆಗಳಲ್ಲಿ ಅದರ ರೂಪಾಂತರಗಳು ಕಂಡು ಬರುತ್ತವೆ. ಜಾಗತೀಕರಣವು ಏಕೀಕೃತ ಘಟಕ ವ್ಯವಸ್ಥೆಯನ್ನು ರೂಪಿಸುತ್ತಿದೆ. ಈ ಹಿನ್ನೆಲೆಯಲ್ಲಿ ಭಾಷೆ ಸಂಸ್ಕೃತಿಗಳು ನಾಶವಾಗುವುದರಲ್ಲಿ ಸಂಶಯವಿಲ್ಲ. ಈ ನಿಟ್ಟಿನಲ್ಲಿ ನಾವು ಯಾವುದನ್ನು ದೇಶಿ ಸಂಸ್ಕೃತಿ ಎಂದು ಕರೆದುಕೊಳ್ಳುತ್ತಿದ್ದೇವೆಯೋ ಅದು ನಮ್ಮಿಂದ ದಿನೇ ದಿನೇ ದೂರವಾಗುತ್ತಿದೆ. ಇಂತಹ ಸಂದರ್ಭದಲ್ಲಿ ದೇಶಿ ಸಂಸ್ಕೃತಿಯ ಮೌಲ್ಯವನ್ನು ಚರ್ಚಿಸಬೇಕಾದ ಅಗತ್ಯ ನಮ್ಮ ಮುಂದಿದೆ. ನೆಲಮಂಗಲ ಪ್ರದೇಶವು ಇಂದು ಜಾಗತೀಕರಣದ ಪ್ರಕ್ರಿಯೆಗೆ ಒಳಗಾಗುತ್ತಿದೆ. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ನೆಲಮಂಗಲ ತಾಲ್ಲೂಕಿನ ಸಂಸ್ಕೃತಿಯನ್ನು ಉಳಿಸಿಕೊಂಡು ಹೋಗುವುದು ಅತಿ ಅವಶ್ಯಕವಾಗಿದೆ.

ಆಧುನಿಕ ಜಗತ್ತಿನ ಜಾಗತೀಕರಣದ ಹಿನ್ನೆಲೆಯಲ್ಲಿ ಒಂದು ಪ್ರದೇಶದ ಜನಜೀವನವನ್ನು ಚಿತ್ರಿಸುವ ಸಾಂಸ್ಕೃತಿಕ ವಿವರಗಳು ಕ್ರಮೇಣವಾಗಿ ತಮ್ಮ ಮಹತ್ವವನ್ನು ಕಳೆದುಕೊಳ್ಳುತ್ತಿವೆ. ಆದರೂ ಅವುಗಳ ದಾಖಲೀಕರಣ ಈ ಸಂದರ್ಭದಲ್ಲಿ ಮಹತ್ವದ್ದು. ಏಕೆಂದರೆ ಒಂದು ಪ್ರದೇಶದ ಅಭಿವೃದ್ಧಿಯನ್ನು ಅಳೆಯುವಾಗ ಸಾಂಸ್ಕೃತಿಕ ಹಿರಿಮೆಯನ್ನು ಗಣನೆಗೆ ತೆಗೆದುಕೊಳ್ಳುತ್ತಾರೆ. ಅಲ್ಲದೇ ಆ ಪ್ರದೇಶದ ಜನರ ಬಗೆಗಿನ ಸಾಂಸ್ಕೃತಿಕ ಅಂಶಗಳನ್ನು ಅರ್ಥಮಾಡಿಕೊಂಡಲ್ಲಿ ಭವಿಷ್ಯದ ಆ ಪ್ರದೇಶದ ಜನರ ಜೀವನಕ್ರಮಗಳನ್ನು ರೂಪಿಸಬಹುದು. ರಾಜಕೀಯ ಏರಿಳಿತಗಳನ್ನು ಅನುಭವಿಸಿದ ಸ್ಥಿತಿ, ಸಾಮಾಜಿಕ ಜೀವನವನ್ನು ವಿಕಾಸಗೊಳಿಸಿದ ಪರಿ, ಧಾರ್ಮಿಕ ಬೆಳಕು ಪಸರಿಸಿದ ವಿಧಾನ, ಸಾಂಸ್ಕೃತಿಕ ಕ್ಷಿತಿಜವನ್ನು ಹಿಗ್ಗಿಸಿದ ರೀತಿ ಮೊದಲಾದವುಗಳ ಅಧ್ಯಯನ ಸ್ವಾರಸ್ಯಪೂರ್ಣ. ಈ ನಿಟ್ಟಿನಲ್ಲಿ ನೆಲಮಂಗಲ ತಾಲ್ಲೂಕಿನ ಸಾಂಸ್ಕೃತಿಕ ಅಧ್ಯಯನ ಹೆಚ್ಚು ಅರ್ಥಪೂರ್ಣವೆನಿಸುತ್ತದೆ. ನೆಲಮಂಗಲ ತಾಲ್ಲೂಕು ಒಂದು ಸಾಂಸ್ಕೃತಿಕ ಪ್ರದೇಶವಾಗಿ ಪ್ರಾಗೈತಿಹಾಸಿಕ ಕಾಲದಿಂದ ಇಂದಿನ ಸಂದರ್ಭದವರೆಗೂ ಗುರುತಿಸಿಕೊಂಡಿದೆ. ಆದರೂ ಆಧುನೀಕರಣದ ನೆಪದಲ್ಲಿ ಈ ದಾಖಲೆಗಳು ನಾಶವಾಗುವ ಸಂಭವವುಂಟು. ಆದ್ದರಿಂದ ಈ ಪ್ರದೇಶವು ಇತಿಹಾಸದುದ್ದಕ್ಕೂ ಎಷ್ಟುಮಟ್ಟಿಗೆ ಸಾಂಸ್ಕೃತಿಕವಾಗಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ ಎಂಬುದನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

### ೧.೧. ಅಧ್ಯಯನದ ಉದ್ದೇಶಗಳು

ಪ್ರಸ್ತುತ ಕಾಲದಲ್ಲಿ ಇತಿಹಾಸದ ಗ್ರಹಿಕೆ ಬದಲಾಗುತ್ತಿದೆ. ನವೀನ ರೀತಿಯ ಸಂಗತಿಗಳು ನಡೆಯುತ್ತಿರುತ್ತವೆ. ಹೊಸ ವಿಚಾರಗಳು ಹರಿದು ಬರುತ್ತಿರುತ್ತವೆ. ಇಂದಿನ ಕಾಲದಲ್ಲಿ ಸ್ಥಳೀಯ ಪ್ರದೇಶಗಳ ಚರಿತ್ರೆಯನ್ನು ಗುರುತಿಸುವ ಕಾರ್ಯ ನಡೆಯುತ್ತಿದೆ. ಇದು ಸ್ಥಳೀಯ ಚರಿತ್ರೆಯ ಅಧ್ಯಯನ ಎಂದು ಜನಪ್ರಿಯವಾಗುತ್ತಿದೆ. ಅಂದರೆ ಪ್ರತಿಯೊಂದು ಪ್ರದೇಶಕ್ಕೂ, ವಿಷಯಕ್ಕೂ ತನ್ನದೇ ಆದಂತಹ ಚರಿತ್ರೆ ಇದ್ದೇ ಇರುತ್ತದೆ. ಸ್ಥಳೀಯ ಪ್ರದೇಶಗಳ ಚರಿತ್ರೆಯನ್ನು ಸೂಕ್ಷ್ಮವಾಗಿ ಪರಿಶೀಲಿಸುವಾಗ ಉತ್ತಮ ಫಲಿತಾಂಶ ವ್ಯಕ್ತವಾಗುವುದಲ್ಲದೇ ಅವುಗಳ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು ಕಂಡುಬರುತ್ತವೆ. ಸ್ಥಳೀಯ ಇತಿಹಾಸ ಅಧ್ಯಯನಗೊಳ್ಳುವಾಗ ಸಾಂಸ್ಕೃತಿಕ ದೃಷ್ಟಿಯಿಂದ ಪರಿಶೀಲಿಸುವುದು ಅತ್ಯಂತ ಉಪಯುಕ್ತವಾದುದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಈ ಕೆಳಕಂಡ ಉದ್ದೇಶಗಳನ್ನು ಒಳಗೊಂಡಿರುವುದು.

೧. ನೆಲಮಂಗಲ ತಾಲ್ಲೂಕಿನ ಚಾರಿತ್ರಿಕ ಹಿನ್ನೆಲೆಯನ್ನು ವಿಶ್ಲೇಷಿಸುವುದು. ನೆಲಮಂಗಲ ತಾಲ್ಲೂಕು ತುಂಬಾ ಕುತೂಹಲಕರವಾದ ಚರಿತ್ರೆಯನ್ನು ಒಳಗೊಂಡಿದೆ. ಈ ಕುತೂಹಲಕ್ಕೆ ಕಾರಣವಾದ ಅಂಶಗಳು ಹಲವು. ಅವುಗಳಲ್ಲಿ ಪ್ರಾಗೈತಿಹಾಸಿಕ ಕಾಲಘಟ್ಟದಿಂದ ಜನವಸತಿ ಪ್ರದೇಶವಾಗಿ ನಮ್ಮ ಸಂದರ್ಭದವರೆಗೆ ಮುಂದುವರೆದುಕೊಂಡು ಬಂದಿದೆ. ಇದಕ್ಕೆ ಕಾರಣವಾದ ಅಂಶಗಳನ್ನು ಕಂಡುಕೊಳ್ಳುವುದು ಮತ್ತು ಅವುಗಳ ಬಗೆಗೆ ಆದರ್ಶವಾದಿ ಆಲೋಚನೆಗಳ ಜೊತೆಗೆ ಮುಖಾಮುಖಿಯಾಗುವುದು ಪ್ರಸ್ತುತ ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.

೨. ನೆಲಮಂಗಲ ತಾಲ್ಲೂಕು ಬೆಟ್ಟಗುಡ್ಡಗಳಿಂದ ಆವೃತವಾಗಿವೆ. ತುಸು ದೂರದಲ್ಲಿ ದಕ್ಷಿಣಕಾಶಿ ಎಂದು ಕರೆಯಲ್ಪಡುವ ಶಿವಗಂಗೆಯ ಬೆಟ್ಟ, ಮಹಿಮೆರಂಗನಬೆಟ್ಟ, ಆಲದಹಳ್ಳಿ ಬೆಟ್ಟ, ನಿಜಗಲ್ಲು ಬೆಟ್ಟ, ದೇವರಹೊಸಹಳ್ಳಿ ಬೆಟ್ಟ, ಹೀಗೆ ಹಲವು ಬೆಟ್ಟಗಳನ್ನು ಕಾಣಬಹುದು. ಕೃಷಿಗೆ ಯೋಗ್ಯವಾದ ಫಲವತ್ತಾದ ಭೂಮಿಯು ಮತ್ತೊಂದೆಡೆಗೆ ದೊರಕುತ್ತದೆ. ಅನತಿ ದೂರದಲ್ಲಿಯೇ ಕೈಗಾರಿಕೆಗಳು ಬೃಹತ್ತಾಗಿ ಬೆಳೆದಿವೆ. ಇಂಥ ಸಂದರ್ಭದಲ್ಲಿ ಇಲ್ಲಿನ ಜನರ ಬದುಕು ಬವಣೆಗಳನ್ನು ಕಂಡು ಚರಿತ್ರೆಯಲ್ಲಿ ಹೇಗೆ ನಿರೂಪಿತವಾಗಿವೆ ಎಂಬುದನ್ನು ತಿಳಿಯುವುದು ಅಧ್ಯಯನದ ಉದ್ದೇಶವಾಗಿದೆ.

೩. ನೆಲಮಂಗಲ ತಾಲ್ಲೂಕಿನ ಪರಿಸರದಲ್ಲಿ ಸುಮಾರು ೧೮೬ಕ್ಕೂ ಹೆಚ್ಚಿನ ಶಾಸನಗಳನ್ನು ಕಾಣಬಹುದು. ಈ ಶಾಸನಗಳ ಅಧ್ಯಯನ ನಡೆಯಬೇಕಾಗಿದೆ. ಈ ಹಿನ್ನೆಲೆಯಲ್ಲಿ ಯಾವ ಶಾಸನ ಯಾವ ಮನೆತನದ್ದು, ಬರೆಯಿಸಿಕೊಳ್ಳಲು ಕಾರಣವಾದ ಅಂಶಗಳು, ಸಾಂದರ್ಭಿಕ ತುರ್ತು ಅಗತ್ಯ ಮುಂತಾದ ವಿಷಯಗಳ ಮಹತ್ವವನ್ನು ತಳಸ್ಪರ್ಶಿಯಾಗಿ ಇಲ್ಲಿ ಚರ್ಚಿಸಬೇಕಾಗಿದೆ. ವೀರಗಲ್ಲುಗಳು, ಮಾಸ್ತಿಗಲ್ಲುಗಳು ಮುಂತಾದವುಗಳು ಸಂಸ್ಕೃತಿಯ ಜೀವಾಳದ ಸಂಕೇತವಾಗಿವೆ. ಇವುಗಳ ಮಹತ್ವವನ್ನು ತಲಸ್ಪರ್ಶೀಯವಾಗಿ ಚರ್ಚಿಸುವ ಉದ್ದೇಶವನ್ನು ಹೊಂದಿದೆ.

೪. ನೆಲಮಂಗಲ ತಾಲ್ಲೂಕಿನ ರಾಜಕೀಯ ವ್ಯವಸ್ಥೆಯನ್ನು ವಿವರಿಸುವುದು. ಈ ಪ್ರದೇಶವನ್ನಾಳಿದ ರಾಜಕೀಯ ಮನೆತನಗಳನ್ನು ಕ್ರೋಢೀಕರಿಸುವ ಉದ್ದೇಶ ಪ್ರಸ್ತುತ ಅಧ್ಯಯನಕ್ಕಿದೆ. ಗಂಗ, ರಾಷ್ಟ್ರಕೂಟ, ಚೋಳ, ಹೊಯ್ಸಳ, ವಿಜಯನಗರ, ಮೈಸೂರು ಅರಸರು, ಹೈದರ್ ಅಲಿ, ಟಿಪ್ಪು ಸುಲ್ತಾನರು ಆಳ್ವಿಕೆ ನಡೆಸಿದರು. ಬ್ರಿಟಿಷರ ಆಳ್ವಿಕೆಯ ವಿರುದ್ಧ ನಡೆದ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ ಸ್ವಾತಂತ್ರ್ಯ ಹೋರಾಟಗಾರರ ಪಾತ್ರವನ್ನು ವಿವರಿಸುವುದು. ಆನಂತರದ ರಾಜಕೀಯ ಚಟುವಟಿಕೆಗಳನ್ನು ತಿಳಿಯುವುದರ ಮೂಲಕ ರಾಜಕೀಯ ಇತಿಹಾಸವನ್ನು ನಿರ್ಮಾಣ ಮಾಡುವ ಉದ್ದೇಶಗಳನ್ನು ಪ್ರಸ್ತುತ ಅಧ್ಯಯನವು ಹೊಂದಿದೆ.

೫. ನೆಲಮಂಗಲ ತಾಲ್ಲೂಕಿನ ಧಾರ್ಮಿಕ ಇತಿಹಾಸವನ್ನು ಗುರುತಿಸುವುದು. ಧರ್ಮಗಳ ವಿಷಯವು ತುಂಬಾ ಸೂಕ್ಷ್ಮವಾದುದು. ಧಾರ್ಮಿಕ ಸೂಕ್ಷ್ಮತೆಗಳು ಸಂಸ್ಕೃತಿಯನ್ನೇ ಅಲ್ಲೋಲ ಕಲ್ಲೋಲ ಮಾಡುವಂತಹ ಸನ್ನಿವೇಶ ಸೃಷ್ಟಿಸುತ್ತದೆ. ಆಚಾರ-ವಿಚಾರ, ನಡೆ-ನುಡಿಯಲ್ಲಿ ಧರ್ಮದ ಪ್ರಭಾವವಿರುತ್ತದೆ. ಅಲ್ಲಿ ನಡೆದ ಧಾರ್ಮಿಕ ಆಗು-ಹೋಗುಗಳ ಬಗೆಗೆ ಮುಖಾಮುಖಿಯಾಗುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

೬. ತಾಲ್ಲೂಕಿನ ಸಾಂಸ್ಕೃತಿಕ ಇತಿಹಾಸವನ್ನು ಗುರುತಿಸುವುದು. ನೆಲಮಂಗಲ ತಾಲ್ಲೂಕು ಆಚರಣೆಗಳನ್ನು ರೂಢಿಸಿಕೊಂಡಿರುವ ರೀತಿ, ನೀತಿ ಕಲೆ ಮತ್ತು ವಾಸ್ತುಶಿಲ್ಪ, ಸಂಗೀತ, ನೃತ್ಯ ಸಾಹಿತ್ಯ ಪರಂಪರೆಗೆ ನೀಡಿದ ಕೊಡುಗೆ, ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ ಮಹನೀಯರ ಕೊಡುಗೆ, ಇವೇ ಮೊದಲಾದವುಗಳ ಕುರಿತು ಅಧ್ಯಯನಿಸುವ ಉದ್ದೇಶ ನಮ್ಮದಾಗಿದೆ.

೭. ತಾಲ್ಲೂಕಿನ ಮೇಲೆ ಆಧುನಿಕತೆಯ ಪ್ರಭಾವವನ್ನು ವಿವರಿಸಬಹುದು. ಕೃಷಿಯನ್ನು ಯಾಂತ್ರೀಕರಣಗೊಳಿಸುವ ಮೂಲಕ ಕೈಗಾರಿಕೆಗಳು ಬೆಳವಣಿಗೆಯಾಗಿವೆ. ಬಹುರಾಷ್ಟ್ರೀಯ ಕೈಗಾರಿಕೆಗಳು, ವಿದೇಶಿ ಕೈಗಾರಿಕೆಗಳು ತಲೆ ಎತ್ತಿವೆ. ಜನಜೀವನದ ಪೈಪೋಟಿಗೆ ತಕ್ಕಂತೆ ನಗರಗಳ ಬೆಳವಣಿಗೆ ತೀವ್ರಗೊಂಡಿದೆ. ಜಾಗತೀಕರಣ ಭೋಗ ಸಂಸ್ಕೃತಿಯಾಗಿದೆ. ಅದು ಬಡವರಲ್ಲಿ ಭೋಗ ಸಂಸ್ಕೃತಿಯ ಪ್ರೇರಣೆಯನ್ನುಂಟು ಮಾಡಿ ದುಃಖಕ್ಕೆ ಕಾರಣವಾಗಿದೆ. ಶಿಕ್ಷಣ ಕ್ರಮವು ಇಂದು ಬಹಳ ಚರ್ಚೆಯ ವಸ್ತುವಾಗಿದೆ. ಸಾಂಸ್ಕೃತಿಕ ಅನನ್ಯತೆಯ ರಕ್ಷಣೆಯೂ ಶಿಕ್ಷಣದ ಮುಖಾಂತರವೇ ಸಾಧ್ಯವಾಗಬೇಕು. ಶಿಕ್ಷಣ ಮುಂದುವರಿದು, ಸಾಮಾನ್ಯ ಶಿಕ್ಷಣಕ್ಕಿಂತ ವೃತ್ತಿ ಶಿಕ್ಷಣವಾಗಿ ವಿಜ್ಞಾನ ಮತ್ತು ತಂತ್ರಜ್ಞಾನದ ಅವಿಷ್ಕಾರವಾಗಿ ಬೆಳೆಯುತ್ತಿದೆ ಎಂಬುದನ್ನು ಅಧ್ಯಯನಿಸುವ ಉದ್ದೇಶವಾಗಿದೆ.

೮. ನೆಲಮಂಗಲ ತಾಲ್ಲೂಕನ್ನು ಕೇಂದ್ರಭೂಮಿಕೆಯನ್ನಾಗಿರಿಸಿಕೊಂಡು ಈ ಪ್ರದೇಶದ ಪ್ರಾದೇಶಿಕ ಚರಿತ್ರೆಯನ್ನು ವಿಶ್ಲೇಷಣೆ ಮಾಡುವ ಉದ್ದೇಶದಿಂದ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ. ಪ್ರತಿಯೊಂದು ಗ್ರಾಮಗಳು ತನ್ನದೇ ಆದ ಚರಿತ್ರೆಗಳನ್ನು ಸಾಂಸ್ಕೃತಿಕ ಮಹತ್ವವನ್ನು ಗುರುತಿಸಿಕೊಂಡಿದೆ.

ಈ ನಿಟ್ಟಿನಲ್ಲಿ ಪ್ರಾದೇಶಿಕ ಸಂಸ್ಕೃತಿಗಳು ವಿನಾಶದ ಅಂಚಿನಲ್ಲಿರುವಾಗ ನೆಲಮಂಗಲ ತಾಲ್ಲೂಕಿನ ಸಾಂಸ್ಕೃತಿಕ ವಿವರಗಳ ದಾಖಲಾತಿಯು ಹೆಚ್ಚು ಪ್ರಸ್ತುತವಾಗತೊಡಗುತ್ತದೆ. ಇಂತಹ ಸಂದರ್ಭದಲ್ಲಿ ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಡುವಂತಹ ಪ್ರಕ್ರಿಯೆಯನ್ನು ಅಳವಡಿಸಿಕೊಂಡು ನೆಲಮಂಗಲ ತಾಲ್ಲೂಕಿನ ಬಗೆಗೆ ಇರುವ ಸಾಂಸ್ಕೃತಿಕತೆಯ ಎಲ್ಲಾ ಸಂಗತಿಗಳನ್ನು ವಿಶ್ಲೇಷಣೆ ಮಾಡುವ ಉದ್ದೇಶಗಳನ್ನು ಪ್ರಸ್ತುತ ಅಧ್ಯಯನವು ಹೊಂದಿದೆ.

**೧.೨. ಅಧ್ಯಯನದ ವಿಧಿ-ವಿಧಾನಗಳು ಮತ್ತು ವ್ಯಾಪ್ತಿ**

ಪ್ರಸ್ತುತ ಅಧ್ಯಯನವನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕಿಗೆ ಸೀಮಿತಗೊಳಿಸಲಾಗಿದೆ. ಈ ತಾಲ್ಲೂಕಿನಲ್ಲಿ ಮೂರು ಹೋಬಳಿ, ಒಂದೊಂದು ಹೋಬಳಿಗಳಲ್ಲಿ ಎರಡು ಮತ್ತು ಮೂರು ಗ್ರಾಮಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಗೌಣವೆನ್ನಿಸಿದ ವಿಷಯಗಳನ್ನು ಕೈಬಿಟ್ಟು ಸಾಂಸ್ಕೃತಿಕ ಮಹತ್ವವೆನಿಸಿದ ಮತ್ತು ಆ ಪ್ರದೇಶದಲ್ಲಿ ವಿಶೇಷವಾಗಿ ಕಂಡುಬರುವ ಸಂಸ್ಕೃತಿಯ ವಿವಿಧ ಮುಖಿ ಆಯಾಮಗಳನ್ನು ಮಾತ್ರ ಅಧ್ಯಯನವು ಒಳಗೊಂಡಿದೆ. ಇದಕ್ಕೆ ಸಂಬಂಧಪಟ್ಟ ಚರಿತ್ರೆಯನ್ನು ಹೇಳುವಂತ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಹೀಗಾಗಿ ಎಲ್ಲಾ ಬಗೆಯ ಪ್ರಾಥಮಿಕ ಹಾಗೂ ಇತರ ಆಕರ ಸಾಮಾಗ್ರಿಗಳನ್ನು ಒಳಗೊಂಡಿದೆ. ಈ ಹಿನ್ನೆಲೆಯಲ್ಲಿ ಕ್ಷೇತ್ರಕಾರ್ಯಗಳ ಮೂಲಕ ಕೆಲವು ಸ್ಥಳಗಳ ಭೇಟಿ, ವ್ಯಕ್ತಿಗಳ ಸಂದರ್ಶನಗಳ ಮೂಲಕ ನೇರವಾಗಿ ಮತ್ತು ಈಗಾಗಲೇ ಪ್ರಕಟವಾಗಿರುವ ಪುಸ್ತಕಗಳಿಂದ, ಲೇಖನ, ವರದಿ, ದಾಖಲೆಗಳ ಜೊತೆಗೆ ವಿಶ್ವಕೋಶಗಳು, ಗ್ಯಾಸೆಟಿಯರ್‌ಗಳು, ನಿಘಂಟುಗಳು, ಪತ್ರಿಕೆಗಳು ಮುಂತಾದ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಹೀಗೆ ಒಟ್ಟು ಅಧ್ಯಯನದಲ್ಲಿ ಲಿಖಿತ-ಅಲಿಖಿತ, ಪ್ರಕಟಿತ-ಅಪ್ರಕಟಿತ, ಪ್ರಾಥಮಿಕ ಮತ್ತು ಅನುಷಂಗಿಕ ಮಾಹಿತಿಗಳನ್ನು ಬಳಸಿಕೊಳ್ಳಲಾಗಿದೆ.

**ಇಲ್ಲಿಯವರೆಗೆ ಆಗಿರುವ ಅಧ್ಯಯನ**

ನೆಲಮಂಗಲ ತಾಲ್ಲೂಕಿನ ಚರಿತ್ರೆಯನ್ನು ಕಳೆದ ಅನೇಕ ವರ್ಷಗಳಿಂದ ನೋಡುವ ದೃಷ್ಟಿ ಗಮನಾರ್ಹವಾದ ಬದಲಾವಣೆಗಳನ್ನು ಪಡೆಯುತ್ತಾ ಬಂದಿದೆ. ಈ ಪ್ರದೇಶವನ್ನಾಳಿದ ರಾಜಮನೆತನಗಳ ಇತಿಹಾಸ ಕ್ಷೇತ್ರದಲ್ಲಿ ವಿವಿಧ ವಿದ್ವಾಂಸರು ಒಲವನ್ನು ತೋರಿ ವೈವಿಧ್ಯಮಯ ಅಧ್ಯಯನದಲ್ಲಿ ತೊಡಗಿದ್ದಾರೆ. ಆದರೂ ನೆಲಮಂಗಲ ತಾಲ್ಲೂಕಿನ ಸಾಂಸ್ಕೃತಿಕ ಅಧ್ಯಯನಕ್ಕೆ ಸಂಬಂಧಿಸಿದಂತೆ ಪ್ರತ್ಯೇಕವಾದ ಯಾವುದೇ ಪುಸ್ತಕ ಹೊರಬಂದಿರುವುದಿಲ್ಲ. ಆದರೆ ಕೆಲವು ವಿಷಯಗಳಿಗೆ ಸಂಬಂಧಿಸಿದಂತೆ ಲೇಖನಗಳು, ವರದಿಗಳು ಪ್ರಕಟವಾಗಿವೆ. ಅವುಗಳನ್ನು ಇಲ್ಲಿ ವಿವರಿಸುವುದಾಗಿದೆ.

ನೆಲಮಂಗಲ ತಾಲ್ಲೂಕಿಗೆ ಸಂಬಂಧಿಸಿದಂತೆ ಡಾ. ಎಚ್. ಎಸ್. ಗೋಪಾಲರಾವ್‌ರವರು ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾಗಿ 'ನೆಲದ ಸಿರಿ' ಸ್ಮರಣ ಸಂಚಿಕೆಯನ್ನು ಹೊರತಂದಿದ್ದಾರೆ. ಅಲ್ಲದೆ ಇತರ ಸ್ಮರಣ ಸಂಚಿಕೆಗಳು ಪ್ರಕಟಗೊಂಡಿವೆ. ಈ ಸ್ಮರಣ ಸಂಚಿಕೆಗಳಲ್ಲಿ ಇಲ್ಲಿನ ಸ್ಥಳೀಯ ಲೇಖಕರು ಒಂದೆರೆಡು ಲೇಖಗಳನ್ನು ಬರೆದು ಕೆಲವು ವಿಚಾರಗಳನ್ನು ಸ್ಪಷ್ಟೀಕರಿಸಿದ್ದಾರೆ. ಇವುಗಳು ನೆಲಮಂಗಲ ತಾಲ್ಲೂಕಿನ ಶಾಸನಗಳು ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ, ಸಾಹಿತಿಗಳು, ಐತಿಹಾಸಿಕ ಸ್ಥಳಗಳು ಇವೇ ಮೊದಲಾದ ವಿಚಾರಗಳನ್ನು ಒಳಗೊಂಡಿವೆ. ಕರ್ನಾಟಕ ಇತಿಹಾಸ ಅಕಾಡೆಮಿ ಪ್ರಕಟಿಸುವ ಇತಿಹಾಸದ ದರ್ಶನ ಸಂಪುಟಗಳಲ್ಲಿ

ಡಾ. ಎಚ್. ಎಸ್. ಗೋಪಾಲರಾವ್, ಎಂ. ಜಿ. ನಾಗರಾಜು, ಪಿ. ವಿ. ಕೃಷ್ಣಮೂರ್ತಿ, ಎಂ. ಜಿ. ಮಂಜುನಾಥ ಅವರು ಈ ಪ್ರದೇಶವನ್ನಾಳಿದ ರಾಜಮನೆತನಗಳು, ನೆಲಮಂಗಲ ಪ್ರದೇಶದ ಪ್ರಾಗೈತಿಹಾಸ ಮೊದಲಾದ ವಿಚಾರಗಳನ್ನು ಕ್ರೋಢೀಕರಿಸಿದ್ದಾರೆ. ಕವಿತಾ ಕೃಷ್ಣನವರು 'ಗಂಗರ ಮಾನ್ಯಪುರ'ಎಂಬ ಕಿರುಕೃತಿಯನ್ನು ಬರೆದಿದ್ದಾರೆ. ಈ ಕೃತಿಯಲ್ಲಿ ಗಂಗರು ನೆಲಮಂಗಲ ತಾಲ್ಲೂಕಿನ ಮಾನ್ಯಪುರ ಪ್ರದೇಶದಲ್ಲಿ ಆಳ್ವಿಕೆ ನಡೆಸಿ ಕಲೆ ಮತ್ತು ವಾಸ್ತುಶಿಲ್ಪಕ್ಕೆ ನೀಡಿರುವ ಕೊಡುಗೆಗಳನ್ನು ತಿಳಿಸಿದ್ದಾರೆ.

ಈ ಲೇಖನಗಳು, ಕೃತಿಗಳನ್ನು ಪ್ರಕಟಿಸಿದ್ದರೂ ಒಟ್ಟಾರೆಯಾಗಿ ಎಲ್ಲಾ ವಿಚಾರಗಳನ್ನು ಕ್ರೋಢೀಕರಿಸುವ ಕಾರ್ಯ ನಡೆದಿರುವುದಿಲ್ಲ. ಇಲ್ಲಿನ ದಾಖಲೆಗಳ ಆಧಾರಗಳನ್ನು ಇಟ್ಟುಕೊಂಡು ವಿಭಿನ್ನ ದೃಷ್ಟಿಕೋನದಿಂದಲೂ ರಾಜಕೀಯ ಸಂಗತಿಗಳು, ಧಾರ್ಮಿಕ ಸಂಗತಿಗಳು ಮತ್ತು ಸಾಂಸ್ಕೃತಿಕ ಅಂಶಗಳನ್ನು ಗುರುತಿಸುವ ಕ್ರೋಢೀಕರಿಸುವ ಪ್ರಯತ್ನವಾಗಿ 'ನೆಲಮಂಗಲ ತಾಲ್ಲೂಕು: ಸಾಂಸ್ಕೃತಿಕ ಅಧ್ಯಯನ' ಎಂಬ ವಿಷಯದಡಿಯಲ್ಲಿ ಸಂಶೋಧನೆ ಕೈಗೊಳ್ಳಲಾಗಿದೆ. ಇದರಿಂದ ಪ್ರಸ್ತುತ ಅಧ್ಯಯನವು ಅಧ್ಯಯನ ಕ್ಷೇತ್ರಕ್ಕೆ ಹೊಸದಾದ ಕೊಡುಗೆಗಳನ್ನು ನೀಡುತ್ತದೆ. ಎಲ್ಲಾ ಪ್ರದೇಶಗಳಿಗೂ ಅದರದರ ಭಿನ್ನತೆ ಇರುತ್ತದೆ. ಅದನ್ನು ಅರಿಯಲು ಸಹಕಾರಿಯಾಗಿದೆ. ಸಾಮಾನ್ಯ ಜನರ ಬದುಕು ಹಾಗೂ ಪ್ರಾದೇಶಿಕ ಸಂಸ್ಕೃತಿಯ ಬೆಳವಣಿಗೆಯನ್ನು ಅರ್ಥಮಾಡಿಕೊಳ್ಳಬಹುದು.

### ೧.೩ ಅಧ್ಯಯನದ ಪ್ರಾಮುಖ್ಯತೆ ಮತ್ತು ಸ್ವರೂಪ

ಪ್ರತಿಯೊಂದು ಪ್ರದೇಶವು ತನ್ನದೇ ಆದ ವಿಶೇಷತೆಯನ್ನು ಹೊಂದಿರುತ್ತದೆ. ಅದರಂತೆ ನೆಲಮಂಗಲವೂ ವಿಶೇಷತೆ ಹೊಂದಿದ್ದು ಪ್ರಾಗೈತಿಹಾಸಿಕ ಕಾಲದಿಂದಲೂ ಇಲ್ಲಿ ಜನ ವಸತಿ ಇತ್ತೆಂಬುದಕ್ಕೆ ಅನೇಕ ಆಧಾರಗಳು ದೊರೆತಿವೆ. ಈ ದೃಷ್ಟಿಯಿಂದ ಇದು ಎರಡು ಸಾವಿರ ವರ್ಷಗಳಷ್ಟು ಇತಿಹಾಸ ಹೊಂದಿರುವ ಪ್ರದೇಶವಾಗಿದೆ. ಈ ಪ್ರದೇಶವು ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿದೆ ಎಂಬುದನ್ನು ಇಲ್ಲಿನ ಶಾಸನಗಳು, ಸ್ಮಾರಕಗಳು, ಐತಿಹಾಸಿಕ ದೇವಾಲಯಗಳು ತಿಳಿಯಪಡಿಸುತ್ತವೆ. ಸಾಮಾನ್ಯ ಜನರ ಬದುಕು ಹಾಗೂ ಪ್ರಾದೇಶಿಕ ಸಂಸ್ಕೃತಿಕಯ ಬೆಳವಣಿಗೆಯನ್ನು ಅರ್ಥ ಮಾಡಿಕೊಳ್ಳುವುದರ ಜೊತೆಗೆ ಇವರ ರಾಜಕೀಯ, ಆರ್ಥಿಕ, ಧಾರ್ಮಿಕ, ಮತ್ತು ಸಾಂಸ್ಕೃತಿಕ ಮಾಹಿತಿಗಳನ್ನು ತಿಳಿಯಬಹುದಾಗಿದೆ. ನೆಲಮಂಗಲ ತಾಲ್ಲೂಕಿನ ಇತಿಹಾಸವನ್ನು ಗಂಗರ ಆಳ್ವಿಕೆಯಿಂದ ಗುರುತಿಸಬಹುದಾಗಿದ್ದು ಶ್ರೀಪುರುಷನ ಶಾಸನಗಳು ಅವಶೇಷಗಳು ಮಣ್ಣೆಯಲ್ಲಿ ದೊರೆತಿವೆ. ಇವು ಈ ಪ್ರದೇಶದ ಪ್ರಾಚೀನತೆಯ ಭವ್ಯ ಪರಂಪರೆಯನ್ನು ನೆನಪಿಸುತ್ತವೆ. ಇಲ್ಲಿನ ದೇವಾಲಯಗಳಿಗೆ ದಾನ ದತ್ತಿಗಳನ್ನು ನೀಡಿರುವ ಬಗ್ಗೆ ಅನೇಕ ಶಾಸನಗಳು ತಿಳಿಸುತ್ತವೆ.

ಬ್ರಿಟಿಷರ ವಿರುದ್ಧ ನಡೆದ ಹೋರಾಟಗಳಲ್ಲಿ ನೆಲಮಂಗಲದ ಪ್ರದೇಶದ ಹೋರಾಟಗಳು ಪ್ರಮುಖವಾಗಿವೆ. ಸ್ವಾತಂತ್ರ್ಯ ಹೋರಾಟದ ಕ್ಷಣಗಳು ಸಮಕಾಲೀನ ಜನರಿಗೆ ಸ್ಫೂರ್ತಿಯಾಗಿವೆ. ಆಡಳಿತದ ಕ್ರಮಗಳು ಕಾಲಕ್ಕೆ ತಕ್ಕಂತೆ ಬದಲಾವಣೆಗೆ ಒಳಗಾಗಿವೆ. ಧಾರ್ಮಿಕವಾಗಿ ಎಲ್ಲಾ ಧರ್ಮಗಳು ನೆಲೆಗೊಂಡು ಸಾಮರಸ್ಯ ಹೊಂದಿವೆ. ಈ ಪ್ರದೇಶದಲ್ಲಿ ಹಬ್ಬ ಹರಿದಿನಗಳು, ಉತ್ಸವ ಜಾತ್ರೆಗಳನ್ನು ಸರ್ವಧರ್ಮೀಯರು ಕೂಡಿಕೊಂಡು ಆಚರಿಸುವ ಪದ್ಧತಿಯನ್ನು ಪ್ರಾಚೀನ ಕಾಲದಿಂದಲೂ ರೂಢಿಸಿಕೊಂಡು ಬಂದಿದ್ದಾರೆ. ಈ ಪ್ರದೇಶದಲ್ಲಿ ಕಲೆ, ಸಂಗೀತ, ಸಾಹಿತ್ಯ ಕ್ಷೇತ್ರಗಳು ಶ್ರೀಮಂತಿಕೆಯನ್ನು ಹೊಂದಿವೆ. ಇವೇ ಮೊದಲಾದ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ ಮಹನೀಯರು ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ. ಆಧುನಿಕತೆಯ ನೆಪದಲ್ಲಿ ಸಾಂಸ್ಕೃತಿಕ ನೆಲೆಗಳು

ಬದಲಾವಣೆಗೆ ಒಳಗಾಗಿವೆ. ಆದರೂ ಜನರ ಆಚಾರ ವಿಚಾರಗಳನ್ನು ಮುಂದಿನ ಪೀಳಿಗೆಗೆ ವರ್ಗಾಯಿಸಿ ಸಂಸ್ಕೃತಿಯ ರಕ್ಷಣೆಯು ಮಹತ್ವದ್ದಾಗಿದೆ. ಅಲ್ಲದೇ ಸಮಾಜದ ಜನರ ಭವಿಷ್ಯತ್ತಿಗೆ ಸಾಂಸ್ಕೃತಿಕ ಅನನ್ಯತೆಯನ್ನು ಕಾಪಾಡಿಕೊಳ್ಳಬಹುದು.

'ನೆಲಮಂಗಲ ತಾಲ್ಲೂಕು: ಸಾಂಸ್ಕೃತಿಕ ಅಧ್ಯಯನ' ಕುರಿತು ವಿಶ್ಲೇಷಿಸುವುದೇ ಈ ಅಧ್ಯಯನದ ಸ್ವರೂಪವಾಗಿದೆ. ಪ್ರಸ್ತುತ ನಿಬಂಧವು ಏಳು ಅಧ್ಯಾಯಗಳನ್ನು ಒಳಗೊಂಡಿದೆ.

ಮೊದಲನೆ ಅಧ್ಯಾಯದಲ್ಲಿ ಪ್ರವೇಶ, ಅಧ್ಯಯನದ ಉದ್ದೇಶಗಳು, ವಿಧಿ-ವಿಧಾನಗಳು, ವ್ಯಾಪ್ತಿ, ಮತ್ತು ಪ್ರಾಮುಖ್ಯತೆ ತಿಳಿಸುವುದರ ಮೂಲಕ ಅಧ್ಯಯನದ ಸ್ವರೂಪ ಯಾವ ರೀತಿಯದು ಎಂಬುದನ್ನು ಹೇಳಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಅಧ್ಯಯನಕ್ಕೆ ಆಯ್ದುಕೊಂಡ ಕ್ಷೇತ್ರವಾದ ನೆಲಮಂಗಲ ತಾಲ್ಲೂಕಿನ ಬಗೆಗೆ ಸ್ಥೂಲವಾದ ಪರಿಚಯವನ್ನು ನೀಡಲಾಗಿದೆ. ತಾಲ್ಲೂಕಿನ ಚಾರಿತ್ರಿಕ ಹಿನ್ನೆಲೆಯನ್ನು ತಿಳಿಸುವುದರ ಮೂಲಕ ಭೌಗೋಳಿಕತೆ ಮತ್ತು ಪ್ರಾಕೃತಿಕ ಸಂಪನ್ಮೂಲಗಳಿಗೆ ಅನುಗುಣವಾಗಿ ತಾಲ್ಲೂಕಿನ ಜನಸಂಖ್ಯೆ, ಖನಿಜ ಸಂಪತ್ತು, ಸಾರಿಗೆ-ಸಂಪರ್ಕ ಇವೇ ಮೊದಲಾದ ಮಾಹಿತಿಗಳನ್ನು ನೀಡಲಾಗುತ್ತದೆ. ಅಲ್ಲದೇ ನೆಲಮಂಗಲ ಪ್ರದೇಶವು ಹೊಂದಿರುವ ಪ್ರಾಗೈತಿಹಾಸಿಕ ಅವಶೇಷಗಳು, ಇಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳ ಇತಿಹಾಸ, ವಿಪುಲ ಮಾಹಿತಿ ಒದಗಿಸುವ ಶಾಸನಗಳು ಇವೇ ಮೊದಲಾದ ವಿಷಯಗಳನ್ನು ಚರ್ಚಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ರಾಜಕೀಯ ಇತಿಹಾಸವನ್ನು ತಿಳಿಯುವುದು. ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಮಹಾನ್ ವ್ಯಕ್ತಿಗಳ ಪರಿಚಯ ಮಾಡಿಕೊಳ್ಳುವುದು. ಸ್ವಾತಂತ್ರ್ಯ ಬಂದ ನಂತರದ ರಾಜಕೀಯದಲ್ಲಿ ಚುನಾವಣೆಗಳು ನಡೆದ ಬಗೆ, ಆರಿಸಿ ಬಂದ ಅಭ್ಯರ್ಥಿಗಳ ಅಧಿಕಾರ ಮತ್ತು ಆಡಳಿತದ ಕಾರ್ಯಗಳ ಬಗೆಗೆ ಇಲ್ಲಿ ಹೇಳಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಧಾರ್ಮಿಕ ಇತಿಹಾಸ ಎಂಬ ಶೀರ್ಷಿಕೆ ಹೊಂದಿದ್ದು, ಧರ್ಮದ ಹಿನ್ನೆಲೆಯಲ್ಲಿ ನಡೆಯುವ ಚಟುವಟಿಕೆಗಳನ್ನು ತಿಳಿಯುವುದು. ಯಾತ್ರೆ ಕೈಗೊಳ್ಳುವ ಯಾತ್ರಾಸ್ಥಳಗಳು, ಮಠಮಾನ್ಯಗಳು, ದೇವಾಲಯಗಳು ನಡೆಸುವ ವಿವಿಧ ಸಾಂಸ್ಕೃತಿಕ ಚಟುವಟಿಕೆಗಳನ್ನು ಕುರಿತು ವಿವರಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಸಾಂಸ್ಕೃತಿಕ ಇತಿಹಾಸ ಎಂಬ ಮುಖ್ಯ ಶೀರ್ಷಿಕೆ ಹೊಂದಿದೆ. ಇದರಲ್ಲಿ ಕೃಷಿ ಜೀವನ ಹಬ್ಬಗಳು ಜಾತ್ರೆಗಳನ್ನು ತಿಳಿಸುವುದು. ಕಲೆ ಮತ್ತು ವಾಸ್ತುಶಿಲ್ಪದ ಶೈಲಿಯನ್ನು ವಿವರಿಸುವುದು. ಸಂಗೀತ ಮತ್ತು ಸಾಹಿತ್ಯದ ಮೂಲಕ ಜನರ ಸಂಸ್ಕೃತಿಯನ್ನು ತಿಳಿದುಕೊಳ್ಳುವುದು. ಪ್ರೇಕ್ಷಣೀಯ ಸ್ಥಳಗಳು ಪ್ರಕೃತಿ ಸೌಂದರ್ಯದಿಂದ, ಬೆಟ್ಟ-ಗುಡ್ಡಗಳಿಂದ ಆಕರ್ಷಕವಾಗಿವೆ ಎಂಬುದನ್ನು ಹೇಳುವುದು. ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ ಮಹನೀಯರ ಕೊಡುಗೆ ಏನು? ಎಂಬುದನ್ನು ತಿಳಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಆಧುನಿಕತೆಯ ಪ್ರಭಾವ ಎಂಬ ಶೀರ್ಷಿಕೆಯಾಗಿದೆ. ಬೆಂಗಳೂರಿಗೆ ಹತ್ತಿರವಿದ್ದು ಆಧುನಿಕತೆಯ ನೆರಳು ತೀವ್ರವಾಗಿ ಬಿದ್ದಿದ್ದು, ಬದಲಾದ ಪರಿಸರದಲ್ಲಿ ನೆಲಮಂಗಲ ತಾಲ್ಲೂಕಿನ ಬದಲಾವಣೆಯನ್ನು ಗಮನಿಸಲಾಗುವುದು. ಕೃಷಿಗೆ ಬದಲಾಗಿ ಕೈಗಾರಿಕೆಗಳು ತೀವ್ರಗತಿಯಲ್ಲಿ ಬೆಳೆಯುತ್ತಿರುವ ಕೈಗಾರಿಕೀಕರಣ, ಜನರ ಜೀವನದ ಪೈಪೋಟಿಗೆ ತಕ್ಕಂತೆ ನಗರಗಳು ಬೆಳವಣಿಗೆಯಾಗುತ್ತಿರುವ ನಗರೀಕರಣ, ಜನರ ಜೀವನದ ಮೇಲೆ ಭೋಗ ಸಂಸ್ಕೃತಿಯಾಗಿರುವ ಜಾಗತೀಕರಣ, ಸಾಮಾನ್ಯ ಶಿಕ್ಷಣಕ್ಕಿಂತ ಭಿನ್ನವಾಗಿರುವ ವೃತ್ತಿಶಿಕ್ಷಣ ಪ್ರಾರಂಭವಾಗಿ, ವಿಜ್ಞಾನ ಮತ್ತು ತಂತ್ರಜ್ಞಾನಕ್ಕೆ ತಕ್ಕಂತೆ ಇರುವ ಆಧುನಿಕ ಶಿಕ್ಷಣ ಇವೇ ಮೊದಲಾದವುಗಳನ್ನು ತಿಳಿಸಲಾಗಿದೆ.

ಏಳನೆಯ ಅಧ್ಯಾಯ 'ಉಪಸಂಹಾರ'ದಲ್ಲಿ ಒಟ್ಟು ಅಧ್ಯಯನಕ್ಕೆ ಸಂಬಂಧಿಸಿದಂತೆ ಅಧ್ಯಯನದ ಸಂದರ್ಭದಲ್ಲಿ ಎದುರಾದ ದ್ವಂದ್ವಗಳನ್ನು ಹೇಳುತ್ತಲೇ ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಮತ್ತು ಕೆಲವು ಸಲಹೆಗಳನ್ನು ನೀಡುವ ಪ್ರಯತ್ನ ಮಾಡಲಾಗುವುದು.

**ಅಡಿಟಿಪ್ಪಣಿಗಳು**

೧. ಲಕ್ಷ್ಮಣ್ ತೆಲಗಾವಿ, ಸಂ., ೨೦೦೩, ಸ್ಥಳೀಯ ಚರಿತ್ರೆ ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೬

೨. ತಂಬಂಡ ವಿಜಯ್ ಪೂಣಚ್ಚ, ಸಂ., ವಿಶ್ವವಿದ್ಯಾಲಯ ವಿಶ್ವಕೋಶ ೪, ಚರಿತ್ರೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ., ಪು. ೪೦

೩. ಲಕ್ಷ್ಮಣ್ ತೆಲಗಾವಿ, ಸಂ., ೨೦೦೩, ಸ್ಥಳೀಯ ಚರಿತ್ರೆ ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೪೫

೪. ಅದೇ., ಪು. ೧

# ಅಧ್ಯಾಯ ಎರಡು

# ಚಾರಿತ್ರಿಕ ಹಿನ್ನೆಲೆ

೨.೧ .ಭೌಗೋಳಿಕತೆ ಮತ್ತು ಪ್ರಾಕೃತಿಕ ಸಂಪನ್ಮೂಲಗಳು

೨.೨. ನೆಲಮಂಗಲ ಪ್ರದೇಶದ ಪ್ರಾಗೈತಿಹಾಸ

೨.೩. ಇತಿಹಾಸದತ್ತ ಒಂದು ನೋಟ

೨.೪. ಶಾಸನಗಳ ಪರಿಚಯ

ಇಂದಿನ ದೊಡ್ಡ ದೊಡ್ಡ ಸಾಮ್ರಾಜ್ಯಗಳನ್ನು ಸಂಸ್ಥಾನಗಳಿಂದ ಅಥವಾ ಸಣ್ಣ ಸಣ್ಣ ಪಾಳೆಯಪಟ್ಟುಗಳ ಸಾಂಸ್ಕೃತಿಕ ಚರಿತ್ರೆಯ ಮೂಲಕ ನೋಡುತ್ತಿರುವ ಸಂದರ್ಭದಲ್ಲಿ ಸ್ಥಳೀಯ ಚರಿತ್ರೆ ತನ್ನ ಮಹತ್ವವನ್ನು ಹೆಚ್ಚಿಸಿಕೊಂಡಿದೆ. ಇಂದು ದೇಶದ ಸಾಂಸ್ಕೃತಿಕ ಚರಿತ್ರೆ ಸಮಗ್ರವಾಗಿ ಅಧ್ಯಯನವಾಗಬೇಕಾದರೆ ನಾಡಿನ ಸ್ಥಳೀಯ ಚರಿತ್ರೆಯು ತನ್ನ ಮಹತ್ವವನ್ನು ಹೆಚ್ಚಿಸಿಕೊಳ್ಳಬೇಕಾಗಿದೆ. ಇದರಿಂದ ಅನೇಕ ಪ್ರದೇಶಗಳು ಸ್ಥಳೀಯ ಚರಿತ್ರೆಯ ಸಂಶೋಧನೆಗೆ ಒಳಪಟ್ಟು ಹೊಸ ಹೊಸ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಸಂಗತಿಗಳು ಬೆಳಕಿಗೆ ಬರುತ್ತಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಪ್ರದೇಶ. ಈ ಪ್ರದೇಶವು ಪ್ರಾಚೀನ ಕಾಲದಿಂದಲೂ ಐತಿಹಾಸಿಕ ಮಹತ್ವವನ್ನು ಹೊಂದಿದೆ. ಪ್ರಾಗೈತಿಹಾಸಿಕ ಕಾಲದ ಅವಶೇಷಗಳು ಈ ಪ್ರದೇಶದ ಸುತ್ತಮುತ್ತಲಿನ ಸ್ಥಳಗಳಲ್ಲಿ ದೊರಕಿದ್ದು, ಈ ಅವಶೇಷಗಳು ಇಲ್ಲಿನ ಪ್ರದೇಶದಲ್ಲಿ ಪ್ರಾಗೈತಿಹಾಸಿಕ ಕಾಲದಿಂದಲೂ ಜನವಸತಿ ಇತ್ತೆಂಬುದಕ್ಕೆ ಮಾಹಿತಿ ನೀಡುತ್ತವೆ. ಅದರಂತೆ ಈ ಪ್ರದೇಶವು ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿದೆ. ಗಂಗರು, ರಾಷ್ಟ್ರಕೂಟರು, ಚೋಳರು, ಹೊಯ್ಸಳರು, ವಿಜಯನಗರದ ಅರಸರು, ಯಲಹಂಕ ನಾಡಪ್ರಭುಗಳು, ಮೈಸೂರಿನ ಒಡೆಯರು, ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಆಳ್ವಿಕೆ ಮಾಡಿರುವ ಪ್ರದೇಶವಾಗಿದೆ. ಇಲ್ಲಿ ಅಪಾರ ಪ್ರಮಾಣದ ಶಾಸನಗಳು, ಮಠಮಾನ್ಯಗಳು, ದೇವಾಲಯಗಳು ಕಂಡುಬಂದಿದ್ದು, ಚಾರಿತ್ರಿಕ ಆಕರಗಳಾಗಿವೆ. ನೆಲಮಂಗಲ ತಾಲ್ಲೂಕು ಪ್ರಾಚೀನ ಕಾಲದಿಂದಲೂ ಇಂದಿನವರೆಗೂ ಆಡಳಿತ ಹಾಗೂ ಸಾಂಸ್ಕೃತಿಕ ಕೇಂದ್ರವಾಗಿದ್ದು ವಿವಿಧ ಸಂಸ್ಕೃತಿಯ ವೈವಿಧ್ಯತೆಗಳನ್ನು ಹೊಂದಿ ಬೆಳೆದು ಬಂದಿದೆ.

ಕರ್ನಾಟಕ ರಾಜ್ಯದ ಕೆಲವು ಜಿಲ್ಲೆಗಳನ್ನು ೧೯೮೬ ರಲ್ಲಿ ಮರು ವಿಂಗಡನೆ ಮಾಡಿದಾಗ ಬೆಂಗಳೂರನ್ನು ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯನ್ನಾಗಿ ವಿಭಜಿಸಲಾಗಿತ್ತು. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಗೆ ನೆಲಮಂಗಲ, ಹೊಸಕೋಟೆ, ದೊಡ್ಡಬಳ್ಳಾಪುರ, ದೇವನಹಳ್ಳಿ, ಆನೇಕಲ್, ರಾಮನಗರ ಮತ್ತು ಮಾಗಡಿ ತಾಲ್ಲೂಕುಗಳು ಸೇರಿದ್ದವು. ಆದರೆ ಬೆಂಗಳೂರು ಮಹಾನಗರ ಅಸ್ತಿತ್ವಕ್ಕೆ ಬಂದಾಗ ಏಕೀಕೃತ ಬೆಂಗಳೂರು ಗ್ರಾಮಾಂತರ ಜಿಲ್ಲೆ ಎಂದೇ ಪರಿಗಣಿಸಲಾಯಿತು. ೧೯೬೨ರಲ್ಲಿ ಜಿಲ್ಲೆಯನ್ನು ಮತ್ತೇ ವಿಭಜಿಸಿದಾಗ ಬೆಂಗಳೂರು ನಗರ ಅಸ್ತಿತ್ವಕ್ಕೆ ಬಂದಿತು. ೧೯೬೬ ರಲ್ಲಿ ಮತ್ತೇ ರದ್ದುಪಡಿಸಿ ನಗರ ಜಿಲ್ಲೆಯನ್ನು ಗ್ರಾಮಾಂತರ ಜಿಲ್ಲೆಯೊಂದಿಗೆ ವಿಲೀನಗೊಳಿಸಲಾಯಿತು. ೧೯೮೬ ರಲ್ಲಿ ಮತ್ತೊಮ್ಮೆ ವಿಭಜಿಸಿ ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಗಳನ್ನಾಗಿ ವಿಂಗಡಿಸಲಾಯಿತು. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನೆಲಮಂಗಲ, ದೊಡ್ಡಬಳ್ಳಾಪುರ, ದೇವನಹಳ್ಳಿ, ಹೊಸಕೋಟೆ, ಮಾಗಡಿ, ರಾಮನಗರ ಮತ್ತು ಚನ್ನಪಟ್ಟಣ, ಕನಕಪುರ ತಾಲ್ಲೂಕುಗಳಿದ್ದವು. ೨೦೦೭ರಲ್ಲಿ ಹೊಸಜಿಲ್ಲೆ ರಚನೆ ಮಾಡಿದಾಗ ರಾಮನಗರ ತಾಲ್ಲೂಕು ಜಿಲ್ಲೆಯಾಯಿತು. ಇದರ ವ್ಯಾಪ್ತಿಗೆ ಮಾಗಡಿ, ಚನ್ನಪಟ್ಟಣ, ಕನಕಪುರ ತಾಲ್ಲೂಕುಗಳು ಸೇರಿದವು. ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ನೆಲಮಂಗಲ, ಹೊಸಕೋಟೆ, ದೊಡ್ಡಬಳ್ಳಾಪುರ, ದೇವನಹಳ್ಳಿ ಸೇರ್ಪಡೆಯಾದವು.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕು ಬೆಂಗಳೂರು - ತುಮಕೂರು ರಾಷ್ಟ್ರೀಯ ಹೆದ್ದಾರಿ-೪ ಕ್ಕೆ ಹೊಂದಿಕೊಂಡಂತೆ ಬೆಂಗಳೂರಿನ ವಾಯುವ್ಯಕ್ಕೆ ಸುಮಾರು ೨೭ ಕಿ.ಮೀ. ದೂರದಲ್ಲಿದೆ.

ನೆಲಮಂಗಲ ಎಂದರೆ ಮಂಗಳಕರವಾದ ನೆಲ ಎಂಬುದು ಸಾಮಾನ್ಯ ಹೇಳಿಕೆಯಾಗಿದೆ. ಈ ಅಭಿಪ್ರಾಯವು ಒಂದು ಹೇಳಿಕೆಗಷ್ಟೆ ಸೀಮಿತವಾಗಿರುತ್ತದೆ. ಏಕೆಂದರೆ ನೆಲಕ್ಕೆ ವಿಶೇಷಣವು ಮೊದಲು ಬಾರದೇ, ನಂತರ ಬರಬೇಕು. ಸ್ಥಳನಾಮ ಶಾಸ್ತ್ರದ ಚರ್ಚೆಯ ಹಿನ್ನೆಲೆಯಲ್ಲಿ ನೆಲಮಂಗಲದ ಸಮೀಪದಲ್ಲೇ ಭಿನ್ನಮಂಗಲವಿದ್ದು, ಇದು ಪೂರಕವಾಗುವ ಸೂಚನೆಯಾಗಿದೆ. ಆದ್ದರಿಂದ ಇಲ್ಲಿ 'ನೆಲಮಂಗಲ' ಎಂಬ ಹೆಸರು ಸಾರ್ಥಕ್ಯ ಪಡೆದುಕೊಂಡಿದೆ. ಪೌರಾಣಿಕ ಕಥೆಯ ಪ್ರಕಾರ ಕರ್ನಾಟಕವನ್ನು ಆಳಿದ ಯಾದವ ಅರಸರಲ್ಲಿ ಹೇಮಚಂದ್ರನ ಮಗ ಸುಮತಿ ಎಂಬುವನು ದೇವರಾಯನ ದುರ್ಗದಲ್ಲಿ ಪ್ರಜಾಪೀಡಕನಾಗಿದ್ದ 'ಅಂಧಕ'ನೆಂಬ ದರೋಡೆಕಾರನ ಸೊಕ್ಕಡಗಿಸಿ ಹಿಂದುರಿಗಿದ ಮಾರ್ಗದಲ್ಲಿ 'ಭೂಮಂಡನ' ಎಂಬ ಊರಿನ ನಿರ್ಮಾಣ ಮಾಡಿದನು ಎಂದು ಒಂದು ಕಥೆಯಿದೆ. ಆ 'ಭೂಮಂಡನ'ದೇ ಇಂದಿನ 'ನೆಲಮಂಗಲ'.

**೨.೧ ಭೌಗೋಳಿಕತೆ ಮತ್ತು ಪ್ರಾಕೃತಿಕ ಸಂಪನ್ಮೂಲಗಳು**

ಭೌಗೋಳಿಕತೆಯು ಒಂದು ಪ್ರದೇಶದ ಸಂಸ್ಕೃತಿಯು ಮೈದಾಳುವಲ್ಲಿ ನೇರವಾಗಿ ಕಾರಣವಾಗುತ್ತದೆ. ಒಂದು ಪ್ರದೇಶದ ಸಾಂಸ್ಕೃತಿಕ ಅಧ್ಯಯನಕ್ಕೆ ತೊಡಗುವ ಮೊದಲು ಆ ಪ್ರದೇಶದ ಭೌಗೋಳಿಕವಾರು ವಿವರಗಳನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಭೌಗೋಳಿಕವಾಗಿ ಪ್ರಾದೇಶಿಕವಾದ ಮೇರೆಗಳು, ಜನಸಾಂದ್ರತೆ ಮತ್ತು ಪ್ರಾಕೃತಿಕ ಸಂಪನ್ಮೂಲಗಳು ಮೊದಲಾದವುಗಳು ಅಲ್ಲಿಯ ಸಂಸ್ಕೃತಿಯ ಮೇಲೆ ಪ್ರಭಾವ ಬೀರುತ್ತವೆ. ಏಕೆಂದರೆ ಸಂಸ್ಕೃತಿಯ ಉಗಮ, ವಿಕಾಸವು ಆ ಪ್ರದೇಶದ ಭೌಗೋಳಿಕತೆ ಮತ್ತು ಪ್ರಾಕೃತಿಕ ಸಂಪನ್ಮೂಲಗಳನ್ನು ಅವಲಂಬಿಸಿರುತ್ತದೆ. ಭೌಗೋಳಿಕ ಅಂಶಗಳು ಮತ್ತು ಪ್ರಾಕೃತಿಕ ಸಂಪನ್ಮೂಲಗಳು ಪ್ರಾಚೀನ ಕಾಲದಿಂದಲೂ ಇಲ್ಲಿನ ಮಾನವನ ಬದುಕನ್ನು ಸಾಂಸ್ಕೃತೀಕರಣಗೊಳಿಸುವಲ್ಲಿ ಪ್ರಮುಖ ಪಾತ್ರ ವಹಿಸಿವೆ.

ಯಾವುದೇ ಒಂದು ಪ್ರಾಚೀನ ಪ್ರಾದೇಶಿಕ ವಿಭಾಗಕ್ಕೆ ಹೆಸರು ಬರಲು ಪ್ರಧಾನವಾಗಿ ಆ ಪ್ರದೇಶದ ನೈಸರ್ಗಿಕ ವೈಶಿಷ್ಟ್ಯ ಕಾರಣವಾಗುತ್ತದೆ. ಪ್ರಸ್ತುತವಾಗಿ ನೆಲಮಂಗಲ ಎಂಬುದು ನೆಲ+ಮಂಗಲ ಎಂಬ ಎರಡು ಪದಗಳನ್ನೊಳಗೊಂಡಿದೆ. 'ಮಂಗಲ' ಎಂದರೆ ಕೋಟೆ, ದುರ್ಗ ಇತ್ಯಾದಿ ಅರ್ಥಗಳು ಬರುತ್ತವೆ. ದುರ್ಗದ ರಕ್ಷಣೆಗಾಗಿ ನಗರದ ಸೈನ್ಯವು ನೆಲೆಗೊಂಡಿರುವ ಸ್ಥಳವಾಗಿದೆ. ನೆಲವೇ ಕೋಟೆಯಂತಿರುವುದಕ್ಕೆ ನೆಲಮಂಗಲ ಎಂಬ ಹೆಸರನ್ನು ಪಡೆದುಕೊಂಡಿದೆ ಎಂದು ಅರ್ಥೈಸಬಹುದು. ಅಲ್ಲದೇ ನೆಲಮಂಗಲದ ಪೂರ್ವಭಾಗದ ಕೆಲವು ಸ್ಥಳಗಳನ್ನು 'ಕೊಕ್ಕಲು ನಾಡು' ಎಂದು ಕರೆಯುತ್ತಾರೆ. ಅಂಕು-ಡೊಂಕಾದ ಹಳ್ಳ-ಕೊಳ್ಳಗಳಿಂದ ಕೂಡಿದ್ದು, ನೆಲವು ಏರಿಳಿತಗಳಿಂದ ಕೂಡಿದ್ದನ್ನು ಈ ರೀತಿ ಹೇಳಲಾಗಿದೆ. ಹೀಗೆ ತನ್ನ ನೈಜ ಭೌಗೋಳಿಕ ವೈಲಕ್ಷಣಗಳನ್ನು ಅನುಸರಿಸಿಯೇ ಹೆಸರನ್ನು ಪಡೆದಿರುವುದು ಮನನವಾಗುತ್ತದೆ.

**ತಾಲ್ಲೂಕಿನ ಮೇರೆಗಳು :** ಬೆಂಗಳೂರು - ತುಮಕೂರು ರಾಷ್ಟ್ರೀಯ ಹೆದ್ದಾರಿ ನಂ. ೪ ರಲ್ಲಿನ ಬೆಂಗಳೂರಿನ ವಾಯುವ್ಯಕ್ಕೆ ಸುಮಾರು ೨೭ ಕಿ.ಮೀ. ದೂರದಲ್ಲಿನ ತಾಲ್ಲೂಕು ಸ್ಥಳವೇ 'ನೆಲಮಂಗಲ'. ಆಗ್ನೇಯ ವಾಯುವ್ಯಾಭಿಮುಖವಾಗಿ ಹರಡಿರುವ ಈ ತಾಲ್ಲೂಕನ್ನು ಉತ್ತರದಲ್ಲಿ ತುಮಕೂರು, ಕೊರಟಗೆರೆ ತಾಲ್ಲೂಕುಗಳೂ, ಪೂರ್ವದಲ್ಲಿ ದೊಡ್ಡಬಳ್ಳಾಪುರ ಹಾಗೂ ಉತ್ತರ ಬೆಂಗಳೂರು ತಾಲ್ಲೂಕುಗಳೂ, ಪಶ್ಚಿಮ ಮತ್ತು ನೈರುತ್ಯದಲ್ಲಿ ಮಾಗಡಿ ತಾಲ್ಲೂಕೂ ಸುತ್ತುವರಿದಿವೆ.

**ವಿಸ್ತೀರ್ಣ :** ನೆಲಮಂಗಲ ತಾಲ್ಲೂಕಿನ ವಿಸ್ತೀರ್ಣ ೫೦೬ ಚದುರ ಕಿ.ಮೀ.ಗಳಾಗಿದ್ದು, ೫೦,೯೬೭ ಹೆಕ್ಟೇರುಗಳ ವಿಸ್ತೀರ್ಣ ಹೊಂದಿದೆ. ಪಟ್ಟಣ ಪ್ರದೇಶ ೧೧,೫೩೨ ಹೆಕ್ಟೇರುಗಳು, ಗ್ರಾಮೀಣ ಪ್ರದೇಶ ೩೯,೪೩೫ ಹೆಕ್ಟೇರುಗಳ ವಿಸ್ತೀರ್ಣವನ್ನು ಹೊಂದಿದೆ. ಇದರ ವ್ಯಾಪ್ತಿಯಲ್ಲಿ ಬರುವ ಹೋಬಳಿ ಮತ್ತು ಹಳ್ಳಿಗಳು ಈ ಕೆಳಗಿನಂತಿವೆ.

**ಕೋಷ್ಟಕ. ೧**

| ಕ್ರ.ಸಂ. | ಹೋಬಳಿ ಕೇಂದ್ರಗಳು | ಹಳ್ಳಿಗಳ ಸಂಖ್ಯೆ |
|---|---|---|
| ೧ | ನೆಲಮಂಗಲ (ಕಸಬಾ) | ೯೫ |
| ೨ | ಸೋಂಪುರ | ೭೪ |
| ೩ | ತ್ಯಾಮಗೊಂಡ್ಲು | ೭೪ |
| | ಒಟ್ಟು | ೨೪೩ |

ನೆಲಮಂಗಲ ತಾಲ್ಲೂಕಿಗೆ ೨೪೩ ಗ್ರಾಮಗಳು ಸೇರಿವೆ. ೨೧೬ ಉಪಗ್ರಾಮಗಳಿವೆ. ೨೩೦ ಜನವಸತಿ ಇರುವ ಮತ್ತು ೧೩ ಜನವಸತಿ ಇಲ್ಲದ ಗ್ರಾಮಗಳಾಗಿವೆ. ೧ ಪಟ್ಟಣ ಸಮುದಾಯವಾಗಿದೆ. ೨೨ ಗ್ರಾಮ ಪಂಚಾಯಿತಿಗಳು, ೧೧ ಮಂಡಲ ಪಂಚಾಯಿತಿಗಳನ್ನು ಹೊಂದಿದೆ.

**ಜನಸಂಖ್ಯೆ ಮತ್ತು ಜನಸಾಂದ್ರತೆ:** ನೆಲಮಂಗಲ ತಾಲ್ಲೂಕಿನ ಒಟ್ಟು ಜನಸಂಖ್ಯೆ ೧೭,೪೪೪೫

**ಕೋಷ್ಟಕ ೨**

| | | |
|---|---|---|
| **ನೆಲಮಂಗಲ ತಾಲ್ಲೂಕು** | ಗಂಡಸರು | ೮೯,೪೪೧ |
| | ಹೆಂಗಸರು | ೮೫,೦೦೪ |
| | ಗ್ರಾಮೀಣ | ೧೪,೯೩೯೧ |
| | ನಗರ | ೨೫,೨೦೬ |
| | ಪ.ಜಾ. | ೩೨,೭೪೩ |
| | ಪ.ಪಂ. | ೫,೧೩೬ |
| | ಒಟ್ಟು | ೧,೭೪,೪೪೫ |

ಜನಸಾಂದ್ರತೆಯು ಪ್ರತಿ ಚ.ಕಿ.ಮೀ.ಗೆ ೩೪೪ (೨೦೦೧ ರ ಜನಗಣತಿ) ಎಂದು ಅಂದಾಜು ಮಾಡಲಾಗಿದೆ. ದಶಕದ ಬೆಳವಣಿಗೆ ೨೧.೪೦

**ಮೂಲ: ೨೦೦೧ ರ ಜನಗಣತಿ**

**ಕೃಪೆ: ಬೆಂಗಳೂರು ಗ್ರಾಮಾಂತರ ಜಿಲ್ಲಾ ಅಂಕಿ-ಅಂಶಗಳ ನೋಟ ೨೦೦೪-೨೦೦೫**

ಜನಸಾಂದ್ರತೆಯನ್ನು ಗಮನಿಸಿದರೆ ತಾಲ್ಲೂಕಿನಲ್ಲಿ ಮಹಿಳೆಯರ ಸಂಖ್ಯೆಗಿಂತ ಪುರುಷರ ಸಂಖ್ಯೆ ಅಧಿಕವಾಗಿರುವುದು ಕಂಡುಬರುತ್ತದೆ. ಅದೇ ರೀತಿ ತಾಲ್ಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಗ್ರಾಮೀಣ ಜನಸಂಖ್ಯೆ, ನಗರದ ಜನಸಂಖ್ಯೆಗಿಂತ ಅಧಿಕವಾಗಿದೆ. ಇದರಿಂದ ಈ ತಾಲ್ಲೂಕು ಹೆಚ್ಚಾಗಿ ಗ್ರಾಮಗಳನ್ನು ಹೊಂದಿದ್ದು, ಈ

ಪ್ರದೇಶದಲ್ಲಿಯೇ ಅಧಿಕ ಜನ ವಾಸವಾಗಿರುವುದು ತಿಳಿದುಬರುತ್ತದೆ. ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನಸಂಖ್ಯೆ ಇದ್ದು, ಪರಿಶಿಷ್ಟ ಪಂಗಡದವರಿಗಿಂತ ಪರಿಶಿಷ್ಟಜಾತಿಯ ಜನರ ಸಂಖ್ಯೆ ಅಧಿಕವಾಗಿದೆ. ಅಲ್ಲದೇ ಪರಿಶಿಷ್ಟ ಜಾತಿ ಜನರಲ್ಲಿ ಪಟ್ಟಣದ ಪ್ರದೇಶದಲ್ಲಿ ನೆಲೆನಿಂತಿರುವವರಿಗಿಂತ ಗ್ರಾಮೀಣ ಪ್ರದೇಶದಲ್ಲಿ ನೆಲೆನಿಂತವರ ಸಂಖ್ಯೆಯೇ ಅಧಿಕವಾಗಿದೆ. ಹಾಗೆಯೇ ಪರಿಶಿಷ್ಟ ಪಂಗಡದ ಜನರಲ್ಲಿ ಕೂಡ ಪಟ್ಟಣ ಪ್ರದೇಶಗಳಲ್ಲಿ ವಾಸವಾಗಿದ್ದವರಿಗಿಂತ ಗ್ರಾಮೀಣ ಪ್ರದೇಶದಲ್ಲಿ ವಾಸವಾದವರ ಸಂಖ್ಯೆ ಅಧಿಕವಾಗಿದೆ.

**ವಾಯುಗುಣ:** ಯಾವುದೇ ಒಂದು ಸ್ಥಳ ಅಥವಾ ಪ್ರದೇಶದ ಆಚಾರ-ವಿಚಾರ, ಅಲ್ಲಿನ ಆಹಾರ ಪದ್ಧತಿ, ಉಡುಗೆ-ತೊಡುಗೆ ಜೀವನಕ್ಕೆ ಆಧಾರವಾಗಿರುವ ಅಂಶಗಳನ್ನು ತಿಳಿಯುವಾಗ ಆ ಪ್ರದೇಶದ ವಾಯುಗುಣ ಬಹಳ ಮುಖ್ಯವಾಗುತ್ತದೆ. ನೆಲಮಂಗಲ ತಾಲ್ಲೂಕು ೧೩.೭ ಡಿಗ್ರಿ ಉತ್ತರ ಅಕ್ಷಾಂಶ ಮತ್ತು ೭೭.೨೮ ಪೂರ್ವರೇಖಾಂಶವನ್ನು ಹೊಂದಿದೆ. ಇಲ್ಲಿನ ಹವಾಗುಣ ಹಿತಕರವಾಗಿದೆ. ಸರಾಸರಿ ತಾಪಮಾನ ೩೩.೪°c, ದಿನದ ಸಾಧಾರಣ ತಾಪಮಾನ ೨೧.೨°c, ಚಳಿಗಾಲದಲ್ಲಿ ೧೨°c, ಇರುತ್ತದೆ. ಬೇಸಿಗೆಯಲ್ಲಿ ಇದರ ಗರಿಷ್ಠ ತಾಪಮಾನ ೩೬°c ಆಗಿರುತ್ತದೆ.

ಇಲ್ಲಿ ವಾರ್ಷಿಕವಾಗಿ ಬೀಳುವ ಮಳೆಯ ಅರ್ಧದಷ್ಟು ಮಳೆ ಮುಂಗಾರು ಮಳೆಯಿಂದ ಬರುತ್ತದೆ. ವಾರ್ಷಿಕವಾಗಿ ಜೂನ್ ತಿಂಗಳಿನಿಂದ ನವೆಂಬರ್ ತಿಂಗಳವರೆಗೆ ಆರು ತಿಂಗಳ ಅವಧಿಯಲ್ಲಿ ಶೇ.೮೦ ರಷ್ಟು ಮಳೆ ಬೀಳುತ್ತದೆ. ತಾಲ್ಲೂಕಿನ ವಾಡಿಕೆ ಮಳೆಯ ಪ್ರಮಾಣ ೬೩೧ ಮಿ.ಮೀ. ೨೦೦೪ ರಲ್ಲಿ ವಾಡಿಕೆಯಾಗಿ ೧೧೭೪ ಮಿ.ಮೀ. ಮಳೆಯಾಗಿತ್ತು. ತಾಲ್ಲೂಕಿನಲ್ಲಿ ಒಟ್ಟು ಮೂರು ವೃಷ್ಟಿಮಾಪನ ಕೇಂದ್ರಗಳಿವೆ. ಈ ಕೇಂದ್ರಗಳ ಮೂಲಕ ಮಳೆಯ ಪ್ರಮಾಣವನ್ನು ಕಂಡುಹಿಡಿಯಲಾಗುತ್ತದೆ.

**ಬೆಟ್ಟ-ಗುಡ್ಡಗಳು:** ಪ್ರಾಕೃತಿಕವಾಗಿ ನೆಲಮಂಗಲ ತಾಲ್ಲೂಕು ವಿಶೇಷವಾದ ಬೆಟ್ಟ-ಗುಡ್ಡಗಳಿಂದ ಆವೃತವಾದ ಪ್ರದೇಶವಾಗಿದೆ. ಐತಿಹಾಸಿಕ ಪ್ರಸಿದ್ಧ ಶಿವಗಂಗೆ ಬೆಟ್ಟ (೪,೫೫೯ ಅಡಿ ಎತ್ತರ), ಮಹಿಮಾರಂಗನ ಬೆಟ್ಟ, ಆಲದಹಳ್ಳಿ ಬೆಟ್ಟ, ನಿಜಗಲ್ಲು ಬೆಟ್ಟ, ದೇವರ ಹೊಸಹಳ್ಳಿ ಬೆಟ್ಟ ಸಾಲುಗಳನ್ನು ಒಳಗೊಂಡಿದೆ. ಇವು ತಾಲ್ಲೂಕಿನ ಹೆಗ್ಗುರುತುಗಳಾಗಿವೆ. ಈ ಬೆಟ್ಟಗಳಲ್ಲಿ ಎತ್ತರವಾದ ಕೋಡುಗಲ್ಲುಗಳಿಂದ ವಿವಿಧಾಕೃತಿಯ ರಚನೆಗಳು ಕಂಡುಬರುತ್ತವೆ. ನೆಲಮಂಗಲ ಪ್ರದೇಶವನ್ನು ಆವರಿಸಿರುವ ಗುಡ್ಡಬೆಟ್ಟಗಳಲ್ಲಿ ಶಿಲಾಯುಗದ ಮಾನವನು ವಾಸಿಸಲು ಯೋಗ್ಯವಾದ ನೆಲೆಗಳನ್ನು ಕಾಣಬಹುದು. ಬೆಟ್ಟ-ಗುಡ್ಡಗಳ ನಡುವಿನ ಸಮತಟ್ಟಾದ ಪ್ರದೇಶಗಳಲ್ಲಿ ಕೆಂಪುಮಣ್ಣು ಪ್ರದೇಶವಿದೆ.

**ಅರಣ್ಯ ಸಂಪತ್ತು:** ನೆಲಮಂಗಲ ತಾಲ್ಲೂಕಿನ ಅರಣ್ಯ ಪ್ರದೇಶದ ವಿಸ್ತೀರ್ಣ ೧೭೦೮ ಹೆಕ್ಟೇರುಗಳಾಗಿದ್ದು, ಪ್ರಾಕೃತಿಕವಾಗಿ ನೆಲಮಂಗಲ ತಾಲ್ಲೂಕು ಹೆಚ್ಚಾಗಿ ಅರಣ್ಯ ಪ್ರದೇಶವನ್ನು ಹೊಂದಿರದೇ ಬಯಲು ಸೀಮೆಯನ್ನು ಒಳಗೊಂಡಿದೆ. ಪ್ರಾಚೀನ ಕಾಲದಲ್ಲಿ ನೆಲಮಂಗಲ ಪ್ರದೇಶದಲ್ಲಿ ಆರ್ಕಾವತಿ ನದಿ ದಂಡೆಯ ಮೇಲೆ ಚಂದನಾರಣ್ಯ (ಗಂಧದ ಮರಗಳ ವನ) ಇತ್ತೆಂದು ಪ್ರತೀತಿ. ನೆಲಮಂಗಲ ತಾಲ್ಲೂಕಿನ ಭಾಗಗಳಲ್ಲಿ ಕುರುಚಲು ಕಾಡುಗಳಿವೆ. ಇಲ್ಲಿ ಮುತ್ತುಗ, ಕಕ್ಕೆ, ತಂಗಡಿ ಹಾಗೂ ಈಚಲು ಮರಗಳು ಬೆಳೆಯುತ್ತವೆ. ಅರಳಿ, ಆಲ, ಹಲಸು, ಬೇವು, ಬೇಲ, ನೇರಳೆ, ಸೀತಾಫಲ ಮರಗಳೂ ಸಹ ಇವೆ. ನೆಲಮಂಗಲ ತಾಲ್ಲೂಕಿನ ಬೊಮ್ಮನಹಳ್ಳಿ ಮತ್ತು ದೊಡ್ಡಬೆಲೆಯ ಬಳಿ ಸರ್ಕಾರದಿಂದ ಪೋಷಕವಾದ ಸಾಮಾಜಿಕ ಅರಣ್ಯಗಳನ್ನು ಬೆಳೆಸಲಾಗುತ್ತಿದೆ. ಇಲ್ಲಿನ ಕಾಡುಗಳಲ್ಲಿ ಕರಡಿ,

ಜಿಂಕೆ, ಕಾಡುಬೆಕ್ಕು, ನರಿ, ಮೊಲ, ವಿವಿಧ ಬಗೆಯ ಉರಗಗಳು, ನಾನಾ ಬಗೆಯ ಪಕ್ಷಿಗಳು, ಪತಂಗಗಳು ವಾಸವಾಗಿದ್ದವು. ಇಂದು ಆಧುನಿಕತೆಯ ಪ್ರಭಾವವಾಗಿ ಕೈಗಾರಿಕೆಗಳು, ನಗರಗಳು ಬೆಳೆಯುತ್ತಿರುವುದರಿಂದ ಅವುಗಳ ಸಂಖ್ಯೆ ಗಣನೀಯವಾಗಿ ಕಡಿಮೆಯಾಗುತ್ತಿವೆ.

**ಖನಿಜ ಸಂಪತ್ತು:** ತಾಲ್ಲೂಕಿನ ಹಲವೆಡೆಗಳಲ್ಲಿ ಸಾಕಷ್ಟು ಖನಿಜ ನಿಕ್ಷೇಪಗಳು ದೊರಕುತ್ತವೆ. ನೆಲಮಂಗಲ ತಾಲ್ಲೂಕಿನ ಸುತ್ತಮುತ್ತಲಿನ ಪ್ರದೇಶಗಳು ಗ್ರಾನೈಟ್ ಶಿಲೆಗಳಿಗೆ ಹೆಸರಾಗಿದ್ದು, ಶಿಲಾ ರಚನೆ ಭಿನ್ನವಾಗಿದ್ದು, ಅಲ್ಲಲ್ಲಿ ತಿಳಿಬೂದು ಬಣ್ಣದ ಶಿಲೆಗಳಿಂದ ಹಾಗೂ ವಿವಿಧ ರಂಗಿನ ಶಿಲಾ ಸಮುದಾಯಗಳನ್ನು ಕಾಣಬಹುದು. ಕಸಬಾ ಹೋಬಳಿಯ ವ್ಯಾಪ್ತಿಯಲ್ಲಿ ಬರುವ ಗೊಲ್ಲಹಳ್ಳಿ, ಅರ್ಜುನಬೆಟ್ಟಹಳ್ಳಿ ಹಾಗೂ ಬೈರಶೆಟ್ಟಿಹಳ್ಳಿ ಗ್ರಾಮಗಳ ಗೋಮಾಳದ ಜಮೀನಿನಲ್ಲಿ 'ಚೈನಾಕ್ಲೇ' ನಿಕ್ಷೇಪ ಹೇರಳವಾಗಿ ದೊರೆಯುತ್ತದೆ. ಇಲ್ಲಿ ಸರಿಸುಮಾರು ೧೦ ಲಕ್ಷ ಟನ್ ಚೈನಾಕ್ಲೇ ದೊರೆಯಬಹುದೆಂದು ಅಂದಾಜು ಮಾಡಲಾಗಿದೆ. ಚೈನಾಕ್ಲೇಯನ್ನು ಪಿಂಗಾಣಿ ಮತ್ತು ವಿದ್ಯುತ್ ಇನ್ಸುಲೇಟರ್ ಉತ್ಪಾದನೆಗೆ ಬಳಸುತ್ತಾರೆ. ತ್ಯಾಮಗೊಂಡ್ಲು ಹೋಬಳಿಯ ನಿಜಗಲ್ಲು, ಶಿವಗಂಗೆ ಹಾಗೂ ಈ ಗ್ರಾಮಗಳಿಗೆ ಹೊಂದಿಕೊಂಡಿರುವ ಕೆಂಗಲ್ ಕೆಂಪೋಹಳ್ಳಿ ಮತ್ತು ಇತರ ಗ್ರಾಮಗಳ ಬೆಟ್ಟಗುಡ್ಡಗಳಲ್ಲಿ ಹೊರದೇಶಗಳಿಗೆ ರಫ್ತು ಮಾಡಲು ಬೇಕಾಗುವ 'ಪಾರ್ಸ್ವರಿ' ಎಂಬ ಬಣ್ಣದ ಕಲ್ಲು ಹೇರಳವಾಗಿ ದೊರೆಯುತ್ತದೆ. ಇದುವರೆಗೂ ಸುಮಾರು ಒಂದು ಕೋಟಿ ರೂಪಾಯಿಗಳಿಗೂ ಹೆಚ್ಚು ಮೌಲ್ಯದ ಕಲ್ಲುಗಳನ್ನು ವಿದೇಶಗಳಿಗೆ ಕಳುಹಿಸಲಾಗಿದೆ. ಕಲ್ಲು ಪಾಳಿಸುವುದು ಒಂದು ಉದ್ಯಮವಾಗಿದ್ದು ಇವು ಇತರ ಕಡೆಗಳಲ್ಲಿ ರಫ್ತಾಗುತ್ತವೆ.

**ನದಿಗಳು:** ಅರ್ಕಾವತಿ ನದಿಯು ತಾಲ್ಲೂಕಿನ ಪ್ರಮುಖ ನದಿ. ಇದು ಕೋಲಾರ ಜಿಲ್ಲೆ, ಚಿಕ್ಕಬಳ್ಳಾಪುರ ತಾಲ್ಲೂಕಿನ ನಂದಿದುರ್ಗದಲ್ಲಿ ಉಗಮಿಸಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಉತ್ತರದಿಂದ ದಕ್ಷಿಣದ ನೆಲಮಂಗಲ ತಾಲ್ಲೂಕಿನಲ್ಲಿ ಹರಿದು ಕಾವೇರಿಯನ್ನು ಸೇರುತ್ತದೆ. ನೆಲಮಂಗಲದ ದಕ್ಷಿಣದ ಕಡೆಯಿಂದ ಬರುವ ಕುಮುದ್ವತಿ ನದಿಯು ಕಡಿಮೆ ಮಳೆ ಬೀಳುವ ಪ್ರದೇಶದಲ್ಲಿ ಹರಿಯುವುದರಿಂದ ನೀರು ದೊರಕುತ್ತದೆ. ನದಿಯ ಓಟದುದ್ದಕ್ಕೂ ಅಡ್ಡಲಾಗಿ ಕಟ್ಟಿರುವ ಜಲಾಶಯಗಳಾಗಲೀ, ಆಣೆಕಟ್ಟುಗಳಾಗಲೀ ನೆಲಮಂಗಲ ತಾಲ್ಲೂಕಿನಲ್ಲಿ ಇರುವುದಿಲ್ಲ. ಆದರೆ ಸಣ್ಣಪುಟ್ಟ ಕೆರೆಕಟ್ಟೆಗಳನ್ನು ಕಟ್ಟಿ ಅವುಗಳ ನೀರನ್ನು ಭತ್ತ ಮತ್ತು ಬಾಗಾಯ್ತು ಬೆಳೆಗಳಿಗೆ ಬಳಸಿಕೊಳ್ಳಲಾಗುತ್ತಿದೆ. ಅಂತಹ ಕೆರೆಗಳಲ್ಲಿ ಚಿಕ್ಕಣ್ಣನ ಆಣೆ, ತ್ಯಾಮಗೊಂಡ್ಲುವಿನ ಅಮಾನಿಕೆರೆ, ಕೆರೆಕತ್ತಿಗನೂರಿನ ಕೆರೆ, ಮಣ್ಣೆಕೆರೆ ಮೊದಲಾದವುಗಳನ್ನು ಹೆಸರಿಸಬಹುದಾಗಿದೆ.

**ವ್ಯವಸಾಯ :** ವ್ಯವಸಾಯ ಇಲ್ಲಿನ ಜನರ ಮುಖ್ಯ ಕಸುಬು. ತಾಲ್ಲೂಕಿನಲ್ಲಿ ಸಾಗುವಳಿಗೆ ಯೋಗ್ಯವಾದ ನೆಲದಲ್ಲಿ ೫೦೯೬೭ ಹೆಕ್ಟೇರು ಜಮೀನು ಬೇಸಾಯಕ್ಕೆ ಉಪಯೋಗವಾಗಿದೆ. ರಾಗಿ, ಭತ್ತ, ಜೋಳ, ಕಡಲೆಕಾಯಿ, ತೊಗರಿ, ಅರ್ಕ (ಮೆಂತ್ಯ ಕಾಳು), ಕಬ್ಬು ಈ ತಾಲ್ಲೂಕಿನ ಮುಖ್ಯ ಬೆಳೆಗಳಾಗಿದ್ದು, ರೈತರು ತಮ್ಮ ಜೀವನಕ್ಕೆ ಸಾಕಾಗುವಷ್ಟು ಬೆಳೆದುಕೊಳ್ಳುತ್ತಾರೆ. ತೆಂಗು, ನಿಂಬೆ, ಸಪೋಟ, ದ್ರಾಕ್ಷಿ, ಬಾಳೇಹಣ್ಣುಗಳನ್ನು ಸಣ್ಣ ಪ್ರಮಾಣದಲ್ಲಿ ಬೆಳೆಯುತ್ತಾರೆ. ಸೊಪ್ಪು, ತರಕಾರಿಗಳನ್ನು ಸಾಕಷ್ಟು ಬೆಳೆದು ಮಾರಾಟ ಮಾಡುತ್ತಾರೆ. ಹಿಪ್ಪುನೇರಳೆ, ತೆಂಗು, ಮತ್ತು ಮಾವು ಈ ತಾಲ್ಲೂಕಿನ ವಾಣಿಜ್ಯ ಬೆಳೆಗಳು. ವ್ಯವಸಾಯಕ್ಕೆ ನೀರಾವರಿ ಮುಖ್ಯ ಆಧಾರ. ಹೆಚ್ಚಿನ ಬೆಳೆಗಳಿಗೆ ಮಳೆಯ ನೀರೆ ಆಧಾರವಾಗಿದ್ದು, ಕೊಳವೆ ಬಾವಿಗಳ ಅಂತರ್‌ಜಲದ, ಕೆರೆಗಳ ಮೂಲಕ ಜಲವನ್ನು ಬಳಸಿಕೊಳ್ಳಲಾಗುತ್ತಿದೆ.

**ಪಶುಸಂಗೋಪನೆ:** ಬೇಡಿಕೆಗೆ ಅನುಗುಣವಾಗಿ ಹೈನುಗಾರಿಕೆ ಬೆಳೆಯುತ್ತಿದೆ. ಹೆಚ್ಚು ಹೆಚ್ಚಾಗಿ ಜಾನುವಾರುಗಳನ್ನು ಸಾಕಲಾಗುತ್ತಿದೆ. ಕುರಿ, ಮೇಕೆ, ಹಸು, ಎಮ್ಮೆ, ಕೋಳಿ ಮುಂತಾದವು ಸಾಕು ಪ್ರಾಣಿಗಳಾಗಿವೆ. ಪಶುಸಂಗೋಪನೆಗಾಗಿ ಆಸ್ಪತ್ರೆಗಳು ತಾಲ್ಲೂಕಿನಲ್ಲಿ ಕಾರ್ಯನಿರತವಾಗಿವೆ ವಾಣಿಜ್ಯ ಉದ್ಯಮವಾಗಿ ಅನೇಕ ಕೋಳಿ ಫಾರಂಗಳು ಅಸ್ತಿತ್ವಕ್ಕೆ ಬಂದಿವೆ. ಮಾಂಸೋತ್ಪನ್ನ ಸಾಧಕಗಳಾದ ಮಿಶ್ರತಳಿ ಕೋಳಿಗಳ ಸಾಕುವಿಕೆ ಅಭಿವೃದ್ಧಿ ಸಾಧಿಸುತ್ತಿದೆ. ಸ್ಥಳೀಯ ಕೆರೆಗಳಲ್ಲಿ ಮೀನುಗಳನ್ನು ಬಿಟ್ಟು ಸಾಕುತ್ತಾರೆ. ಇದರಿಂದ ಪಶುಸಂಗೋಪನೆ ಒಂದು ಮುಖ್ಯ ಉದ್ಯಮವಾಗಿದೆ.

**ಸಾರಿಗೆ ಸಂಪರ್ಕ:** ತಾಲ್ಲೂಕಿನ ಮುಖ್ಯಕೇಂದ್ರವಾಗಿರುವ ನೆಲಮಂಗಲವು ಕರ್ನಾಟಕದ ೧೮ ಜಿಲ್ಲಾಕೇಂದ್ರಗಳಿಗೆ ತನ್ಮೂಲಕ ಹಾದಿಯನ್ನು ಕೊಟ್ಟಿದೆ. ಬೆಂಗಳೂರಿನಿಂದ ಪುಣೆ ಮತ್ತು ಮಂಗಳೂರಿಗೆ ಸಂಪರ್ಕ ಕಲ್ಪಿಸಿರುವ ರಾಷ್ಟ್ರೀಯ ಹೆದ್ದಾರಿ ನಂ.೪ ಮತ್ತು ನಂ.೪೮ ಈ ತಾಲ್ಲೂಕಿನಲ್ಲಿ ಹಾದು ಹೋಗುತ್ತದೆ. ೨೦೦೪-೦೫ ಅಂಕಿ-ಅಂಶಗಳ ಪ್ರಕಾರ ತಾಲ್ಲೂಕಿನಲ್ಲಿ ೫೫ ಕಿ.ಮೀ. ರಾಷ್ಟ್ರೀಯ ಹೆದ್ದಾರಿ, ರಾಜ್ಯ ಹೆದ್ದಾರಿ ೨೯ ಕಿ.ಮೀ. ಮುಖ್ಯ ಜಿಲ್ಲಾರಸ್ತೆ ೫೪ ಕಿ.ಮೀ. ಇತರೆ ಜಿಲ್ಲಾ ರಸ್ತೆಗಳಿವೆ. ತಾಲ್ಲೂಕು ಅಭಿವೃದ್ಧಿ ಮಂಡಳಿಗೆ ಸೇರಿದ ರಸ್ತೆಗಳ ಉದ್ದ ೩೭೩ ಕಿ.ಮೀ., ಪಂಚಾಯಿತಿ ರಸ್ತೆಗಳು ೧೪೨ ಕಿ.ಮೀ., ಮುನ್ಸಿಪಾಲಿಟಿ ರಸ್ತೆಗಳು ೩೮ ಕಿ.ಮೀ., ಹಳ್ಳಿ ರಸ್ತೆಗಳು ೯೯೪.೭೫ ಕಿ.ಮೀ. ಉದ್ದವನ್ನು ಹೊಂದಿವೆ.[೨] ಬೆಂಗಳೂರು ಮುಂಬೈ ರೈಲು ಮಾರ್ಗವು ಈ ತಾಲ್ಲೂಕಿನ ಉತ್ತರದ ಅಂಚಿನಲ್ಲಿ ಹಾದುಹೋಗುತ್ತದೆ. ನಿಡುವಂದ ಒಂದು ರೈಲ್ವೆ ನಿಲ್ದಾಣವಾಗಿದೆ. ಜೊತೆಗೆ ತಾಲ್ಲೂಕಿನಲ್ಲಿ ಅಂಚೆ-ತಂತಿ, ವಿದ್ಯುಚ್ಛಕ್ತಿ ಸೌಲಭ್ಯಗಳು, ಶಾಲಾ-ಕಾಲೇಜು, ಆಸ್ಪತ್ರೆಗಳೂ ಇವೆ.

ಇಲ್ಲಿನ ಭೌಗೋಳಿಕತೆ ಮತ್ತು ಪ್ರಾಕೃತಿಕ ಸಂಪನ್ಮೂಲಗಳು ಉತ್ತಮ ಸ್ಥಿತಿಯಲ್ಲಿದ್ದು, ಮಾನವನು ರಾಜಕೀಯವಾಗಿ, ಧಾರ್ಮಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಮುನ್ನಡೆಯಲು ಸಹಕರಿಸಿವೆ.

### ೨.೨. ನೆಲಮಂಗಲ ಪ್ರದೇಶದ ಪ್ರಾಗೈತಿಹಾಸ

ಯಾವುದೇ ಒಂದು ಪ್ರದೇಶದ ಸಂಸ್ಕೃತಿ, ಅನಾದಿಕಾಲದ ಭೂವಿನ್ಯಾಸ ಮತ್ತು ಜೀವವಿನ್ಯಾಸದ ಉದಯದೊಂದಿಗೆ ಪ್ರಾರಂಭವಾಗುತ್ತದೆ. ಡಾರ್ವಿನ್‌ನ ವಿಕಾಸ ಸಿದ್ಧಾಂತದೊಂದಿಗೆ ಸಂಸ್ಕೃತಿ ತನ್ನ ಬೆಳವಣಿಗೆಯನ್ನು ಕಂಡುಕೊಂಡಿದೆ. ಪ್ರಕೃತಿಯ ಜೀವ ವಿನ್ಯಾಸದೊಂದಿಗೆ ನೆಲಮಂಗಲ ಪ್ರದೇಶದ ಸಾಂಸ್ಕೃತಿಕ ಅಧ್ಯಯನಕ್ಕೆ ಮುನ್ನುಡಿಯನ್ನು ಬರೆಯಬಹುದು. ಮಾನವ ಹುಟ್ಟಿನಿಂದಲೂ ಕಾಲದಿಂದ ಕಾಲಕ್ಕೆ ಬದಲಾವಣೆಗಳಿಗೆ ಪ್ರಯತ್ನಿಸುತ್ತಲೇ ಇದ್ದಾನೆ. ಅವನ ಬದುಕಿನ ಅನೇಕ ಗುರುತುಗಳು ದಾಖಲೆಗಳ ಮೂಲಕ ಬದುಕಿನ ಪರಿಯನ್ನು ಅರ್ಥೈಸುವ ಪ್ರಜ್ಞೆ ಉಗಮವಾಗಿ ನಮಗೊಂದು ಇತಿಹಾಸವಿದೆ ಎನ್ನುವ ಅರಿವು ವಿಕಾಸವಾಯಿತು.

ಮಾನವನ ಇತಿಹಾಸವನ್ನು ಪ್ರಮುಖವಾಗಿ ಎರಡು ಮುಖ್ಯ ವಿಭಾಗಗಳನ್ನಾಗಿ ಮಾಡಲಾಗಿದೆ. ಮೊದಲನೆಯದು ಅಕ್ಷರಜ್ಞಾನವಿಲ್ಲದ ಹಂತ ಅಥವಾ ಪ್ರಾಗೈತಿಹಾಸ ಅಥವಾ ಪೂರ್ವೇತಿಹಾಸ. ಅಂದರೆ ಮಾನವ ಅಲೆಮಾರಿತನ ಒಟ್ಟು ಒಂದು ಕಡೆ ನೆಲೆ ನಿಂತನು. ಇದನ್ನು ಪ್ರಾಗೈತಿಹಾಸಿಕ ಕಾಲಘಟ್ಟ ಸಂಸ್ಕೃತಿ ಎಂದು ಗುರುತಿಸಿಕೊಳ್ಳಬಹುದು. ಎರಡನೆಯದು ಅಕ್ಷರಜ್ಞಾನವಿದ್ದ ಹಂತ ಅಥವಾ ರಾಜಮಹಾರಾಜರ ಕಾಲ ಅಥವಾ ಇತಿಹಾಸ ಕಾಲವೆಂದು ಹೇಳಬಹುದು. ಇವುಗಳಲ್ಲಿ ಪ್ರಾಗೈತಿಹಾಸಿಕ ಕಾಲಮಾನ ಸುದೀರ್ಘವಾಗಿದ್ದು, ಇಂದಿಗೆ ಸುಮಾರು ೫ ಲಕ್ಷ ವರ್ಷಗಳಿಂದ ಕ್ರಿಸ್ತಶಕೆಯ ಆರಂಭದವರೆಗೂ ಅದು ರೂಢಿಯಲ್ಲಿತ್ತೆಂದು ತಿಳಿಯುತ್ತದೆ. ಈ ಕಾಲಮಾನವನ್ನು ಆಗ ನಿತ್ಯ ಬಳಕೆಯಲ್ಲಿದ್ದ ವಸ್ತುವಿನ ಆಧಾರದಿಂದ ಶಿಲಾಯುಗ ಸಂಸ್ಕೃತಿ ಮತ್ತು ಲೋಹಯುಗ ಸಂಸ್ಕೃತಿ ಎಂದು ಎರಡು ವಿಭಾಗಗಳನ್ನಾಗಿ ಮಾಡಲಾಗಿದೆ.

ಶಿಲಾಯುಗ ಸಂಸ್ಕೃತಿಯ ಹಂತವನ್ನು ಅವಶೇಷ ಹಾಗೂ ಅವುಗಳ ಬೆಳವಣಿಗೆ ಮತ್ತು ಕುಶಲತೆಯನ್ನನುಸರಿಸಿ ಹಳೆಯ ಶಿಲಾಯುಗ ಸಂಸ್ಕೃತಿ, ಸೂಕ್ಷ್ಮ ಶಿಲಾಯುಗ ಸಂಸ್ಕೃತಿ ಮತ್ತು ನೂತನ ಶಿಲಾಯುಗ ಸಂಸ್ಕೃತಿ ಎಂದು ವಿಂಗಡಿಸಿದ್ದಾರೆ.[೩] ಈ ಹಂತಗಳಲ್ಲಿ ಮಾನವನು ನಾಗರೀಕನಾಗಿ ಸಂಸ್ಕೃತಿಯನ್ನು ರೂಪಿಸಿಕೊಂಡನು.

**ಬೃಹತ್ ಶಿಲಾಯುಗ**

ಪ್ರಾಗಿತಿಹಾಸ ಮತ್ತು ಇತಿಹಾಸ ಕಾಲಕ್ಕೆ ಕೊಂಡಿಯಾಗಿರುವ ಬೃಹತ್ ಶಿಲಾಯುಗವು ಸಾಂಸ್ಕೃತಿಕವಾಗಿ ಬಹಳ ಮುಖ್ಯವಾದುದು ಮಾತ್ರವಲ್ಲ, ಕಬ್ಬಿಣದ ಸಂಶೋಧನೆ ಮಾನವ ಜೀವನದ ಗತಿಯನ್ನೇ ಬದಲಾಯಿಸಿತು. ಕಬ್ಬಿಣದ ಆಯುಧಗಳು ಬಳಕೆಗೆ ಬಂದವು. ಮಾನವನ ಸಂಸ್ಕೃತಿಗೆ ಹೊಸ ಆಯಾಮವನ್ನು ದೊರಕಿಸಿ ಕೊಟ್ಟಿತು. ಕೃಷಿ ಪ್ರಾಧಾನ್ಯತೆ ಪಡೆಯಿತು. ಪಾತ್ರೆಗಳ ಬಳಕೆ ಅಧಿಕಗೊಂಡಿತು. ಶವಸಂಸ್ಕಾರ ವಿಧಾನಗಳು ಬದಲಾದವು. ವೈವಿಧ್ಯತೆ ಹೆಚ್ಚಾಯಿತು. ಈ ಕಾಲದಲ್ಲಿ ಜನರು ತಮ್ಮ ಸತ್ತವರನ್ನು ದೊಡ್ಡ ಗುಹೆಗಳಲ್ಲಿ ಹೂತು ಬೃಹತ್ತಾದ ಕಲ್ಲುಗಳನ್ನು ಆ ಗುಹೆಗಳಿಗೆ ಮುಚ್ಚಿ ಇಡುತ್ತಿದ್ದ ಕಾರಣ ಆ ಗುಹೆಗಳನ್ನು ಸಮಾಧಿ ಕಲ್ಲು ಗುಹೆಗಳು ಎಂದು ಕರೆಯುತ್ತಾರೆ. ಈ ಕಾಲವನ್ನು ಬೃಹತ್ ಶಿಲಾಯುಗ ಅಥವಾ ಬೃಹತ್ ಶಿಲಾಗೋರಿಗಳ ಯುಗ ಎಂದು ಕರೆಯುತ್ತಾರೆ.

ನೆಲಮಂಗಲ ಪ್ರದೇಶದಲ್ಲಿ ಕಂಡುಬರುವ ಬೃಹತ್ ಶಿಲಾಯುಗದ ಅವಶೇಷಗಳನ್ನು ಈ ರೀತಿ ತಿಳಿಯಬಹುದು.

೧. ನೆಲಮಂಗಲ ತಾಲ್ಲೂಕಿನ ಸೋಂಪುರ ಹೋಬಳಿಯ ಎಲೆಕ್ಯಾತನಹಳ್ಳಿಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಗೋರಿ ನೆಲೆಯಿದೆ. ಈ ನಿವೇಶನದಲ್ಲಿ ನಾಲ್ಕು ರಂಧ್ರಕೋಣೆ ಗೋರಿಗಳಿವೆ. ಅದರಲ್ಲಿ ಎರಡು ಗೋರಿಗಳನ್ನು ಅಗೆದು ಹಾಳು ಮಾಡಿದ್ದಾರೆ. ಉಳಿದೆರಡು ಸುಸ್ಥಿತಯಲ್ಲಿವೆ. ಇಲ್ಲಿ ಇನ್ನೂ ಹತ್ತಾರು ಗೋರಿಗಳಿದ್ದಿರಬಹುದು. ಆದರೆ ಕಾಲಾಂತರದಲ್ಲಿ ಹಾಳಾಗಿರಬಹುದು.

೨. ನೆಲಮಂಗಲ ತಾಲ್ಲೂಕಿನ ಕಸಬಾ ಹೋಬಳಿಯ ಮಹಾದೇವಪುರದ ಬಳಿ ಇರುವ ಹನುಮಯ್ಯನ ಪಾಳ್ಯದ ಬಳಿಯಲ್ಲಿ ಎಂಟು ಹಾದಿ ಕೋಣೆ ಗೋರಿಗಳಿವೆ. ಈ ನಿವೇಶನ ಅತ್ಯಂತ ಪ್ರಮುಖವಾದ ನಿವೇಶನವಾಗಿದೆ. ಏಕೆಂದರೆ ಇಲ್ಲಿಯ ಗೋರಿಗಳ ತುಂಬಾ ದೊಡ್ಡಗೋರಿಗಳು. ಈ ಗೋರಿಗಳ ಮೇಲ್ಭಾಗದಲ್ಲಿ ಮುಚ್ಚಲಾಗಿರುವ ಕ್ಯಾಪ್‌ಸ್ಟೋನ್‌ಗಳು ೩೦ ಅಡಿ ಉದ್ದ ೧೫ ಅಡಿ ಅಗಲವಾಗಿವೆ. ಬೃಹತ್ ಶಿಲಾಯುಗದ ಬೇರೆ ಎಲ್ಲಾ ಕಡೆಯ ಸಮಾಧಿಗಳಿಗಿಂತ ಇವೇ ದೊಡ್ಡವಾಗಿರಬಹುದಾದ ಸಾಧ್ಯತೆಗಳಿವೆ.

೩. ನೆಲಮಂಗಲ ತಾಲ್ಲೂಕು ಕಸಬಾ ಹೋಬಳಿಯ ಮೈಲನಹಳ್ಳಿ ಎಂಬ ಗ್ರಾಮದಲ್ಲಿ ಒಂದು ಬೃಹತ್ ಶಿಲಾಯುಗದ ನಿವೇಶನ ಪತ್ತೆಯಾಗಿದೆ. ಈ ನಿವೇಶನದಲ್ಲಿ ೧೮ ರಂಧ್ರಕೋಣೆ, ಗೋರಿಗಳು ಹಾಗೂ ೧೨ ಹಾದಿಕೋಣೆ ಗೋರಿಗಳಿವೆ. ಇವುಗಳಲ್ಲಿ ಹತ್ತಾರು ಗೋರಿಗಳು ಅಗೆಯಲ್ಪಟ್ಟಿವೆ. ಅವುಗಳಲ್ಲಿದ್ದ ಮಡಿಕೆಗಳಲ್ಲಿ ರಾಗಿ ಕಾಳುಗಳು ಹಾಗೂ ಮೂಳೆಗಳು ದೊರೆತವೆಂದು ಅಲ್ಲಿನ ಜನರು ಹೇಳಿದರು.

೪. ನೆಲಮಂಗಲ ತಾಲ್ಲೂಕು ಸೋಂಪುರ ಹೋಬಳಿಯ ಬಿಲ್ಲಿನ ಕೋಟೆ ಬಳಿಯಲ್ಲಿರುವ ಆಲದಹಳ್ಳಿ ಬೆಟ್ಟದ ಹಿಂಭಾಗದಲ್ಲಿ ಒಂದು ನಿವೇಶನ ಪತ್ತೆಯಾಗಿದ್ದು, ಇಲ್ಲಿ ೪೨ ಹಾದಿಕೋಣೇ ಗೋರಿಗಳಿವೆ. ಇವುಗಳಲ್ಲಿ ಕೇವಲ ಒಂದು ಗೋರಿ ಮಾತ್ರ ಹಾಳಾಗಿದೆ. ಈ ಗೋರಿಯೊಳಗಿನ ಮಡಿಕೆಗಳ ಚೂರುಗಳನ್ನು ಸಂಗ್ರಹಿಸಲಾಗಿದ್ದು,

ಈ ನಿವೇಶನ ಪಕ್ಕದಲ್ಲಿಯೇ ಇರುವ ಬೆಟ್ಟದಲ್ಲಿ ನಾಲ್ಕು ಗವಿಗಳೂ, ಆರು ಕಲ್ಲಾಸರೆಗಳೂ ಇವೆ. ಇವು ಹಿಂದೆ ಬೃಹತ್ ಶಿಲಾಯುಗದ ಜನರ ವಾಸಕ್ಕೆ ಉಪಯೋಗವಾಗಿರಬಹುದಾದ ಸಾಧ್ಯತೆಗಳಿವೆ.

೫. ನೆಲಮಂಗಲ ತಾಲ್ಲೂಕು ಸೋಂಪುರ ಹೋಬಳಿಯ ಬಿಲ್ಲಿನಕೋಟೆಯ ನಿವೇಶನದ ಪೂರ್ವಕ್ಕೆ ಒಂದು ಮೈಲಿ ದೂರದಲ್ಲಿರುವ ಮಹಿಮಾಪುರದ ಮಹಿಮರಂಗನ ಬೆಟ್ಟದ ಬಳಿ ೨೬ ರಂಧ್ರಕೋಣೆ ಗೋರಿಗಳಿವೆ. ಒಂದು ಗೋರಿಯು ಶಿಥಿಲವಾಗಿದ್ದು ಉಳಿದೆಲ್ಲವೂ ಅತ್ಯಂತ ಸುಭದ್ರವಾಗಿವೆ.[೪]

೬. ನೆಲಮಂಗಲ ತಾಲ್ಲೂಕಿನ ಬಂಡೆಚಿಕ್ಕನಹಳ್ಳಿಯ ಪಕ್ಕದಲ್ಲಿ ಗುಡ್ಡಗಳು ಕಂಡುಬರುತ್ತವೆ. ಇಲ್ಲಿರುವ ಬಂಡೆಗಳನ್ನು ಒಡೆದು ಜಲ್ಲಿ ಕಲ್ಲು ಮಾಡಿ ಬೆಂಗಳೂರಿಗೆ ಸಾಗಿಸುತ್ತಾರೆ. ಆದ್ದರಿಂದ ಈ ಹಳ್ಳಿಯನ್ನು ಬಂಡೆಚಿಕ್ಕನಹಳ್ಳಿ ಎಂದು ಕರೆಯುತ್ತಾರೆ. ಈ ಹಳ್ಳಿಯ ಪರಿಸರದಲ್ಲಿ ೭೫ ಶಿಲಾಯುಗದ ಸಮಾಧಿಗಳನ್ನು ಪತ್ತೆ ಹಚ್ಚಲಾಗಿದೆ. ಈ ಸಮಾಧಿಗಳು ಕ್ರಿ.ಪೂ. ೧ನೇ ಶತಮಾನಕ್ಕೆ ಸೇರಿರಬಹುದೆಂದು ಸಂಶೋಧಕರ ಅಭಿಪ್ರಾಯ. ಎರಡು ಸಮಾಧಿಗಳು ಹಾಳಾಗಿವೆ. ಉಳಿದವು ಸುಸ್ಥಿತಿಯಲ್ಲಿವೆ. ಸ್ಥಳೀಯ ಜನರು ಈ ಸಮಾಧಿಗಳನ್ನು 'ಪಾಂಡವರ ಗುಡಿ'ಗಳೆಂದು ಕರೆಯುತ್ತಾರೆ.

ಒಂದು ಸಮಾಧಿಯೊಂದರ ಮೇಲ್ಭಾಗದ ಚಪ್ಪಡಿಯು ೧೨ ಅಡಿಯಷ್ಟು ಉದ್ದವಾಗಿದ್ದು ಆರೂವರೆ ಅಡಿಗಳಷ್ಟು ಅಗಲವಾಗಿವೆ. ೦.೫ ಅಡಿ ಗಾತ್ರವುಳ್ಳವಾಗಿದ್ದು ೨೩ ಅಡಿಗಳಷ್ಟು ವೃತ್ತಾಕಾರವಾಗಿವೆ. ಕಪ್ಪು ಮತ್ತು ಕೆಂಪು ಬಣ್ಣದ ಚೂರುಗಳು ದೊರಕಿವೆ. ಈ ಶಿಲಾಸಮಾಧಿಗಳನ್ನು ವೈಜ್ಞಾನಿಕವಾಗಿ ಸಂಶೋಧನೆ ಮಾಡಬೇಕಾಗಿದೆ. ಇದರಿಂದ ಹೆಚ್ಚಿನ ಮಾಹಿತಿ ದೊರಕುತ್ತದೆ.[೫]

೭. ನೆಲಮಂಗಲ ತಾಲ್ಲೂಕಿನ ಕಸಬಾ ಹೋಬಳಿಯ ಮಾದೀಪುರದಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ಸಮಾಧಿಗಳು ಕಂಡುಬಂದಿವೆ. ಇವು ಕೋಣೆ ಗೋರಿಗಳಾಗಿದ್ದು ಕಿಂಡಿಗಳು ಪೂರ್ವಾಭಿಮುಖವಾಗಿವೆ. ಮೂರು ಸಮಾಧಿಗಳು ಭಗ್ನಗೊಂಡು ಕಪ್ಪು, ಕೆಂಪು ಹಾಗೂ ಕಪ್ಪುವರ್ಣದ ಮಡಿಕೆ ಪಾತ್ರೆಗಳು ದೊರೆಕಿದ್ದು, ಈ ಸಮಾಧಿಗಳ ಸುತ್ತ ವೃತ್ತಾಕಾರದಲ್ಲಿ ಕಲ್ಲುಗಳನ್ನು ಜೋಡಿಸಲಾಗಿದೆ. ಇವು ೪ ಅಡಿ ಅಗಲ ೫ ವರೆ ಅಡಿ ಉದ್ದವಾಗಿವೆ. ಕಬ್ಬಿಣದ ಉಂಡೆಗಳು ಕಂಡುಬಂದಿವೆ.

೮. ನೆಲಮಂಗಲ ತಾಲ್ಲೂಕಿನ ಶ್ರೀನಿವಾಸಪುರದಲ್ಲಿ ೫ ಶಿಲಾವೃತ್ತಿ ಗೋರಿಗಳು ದೊರಕಿದ್ದು ರಸ್ತೆಗೆ ಹತ್ತಿರದಲ್ಲಿಯೇ ಕಾಣಸಿಗುತ್ತವೆ.[೬] ಇದನ್ನು ಹೆಚ್ಚಿನ ಮಾಹಿತಿಗಾಗಿ ಸಂಶೋಧನೆಗೆ ಒಳಪಡಿಸಬೇಕಾಗಿದೆ. ನೆಲಮಂಗಲ ತಾಲ್ಲೂಕಿನಲ್ಲಿ ಬೃಹತ್ ಶಿಲಾಯುಗಕ್ಕೆ ಸಂಬಂಧಪಟ್ಟಿರುವ ಅನೇಕ ನಿವೇಶನಗಳು ತಜ್ಞರಿಂದ ಬೆಳಕಿಗೆ ಬಂದಿವೆ.

೯. ನೆಲಮಂಗಲ ತಾಲ್ಲೂಕಿನಲ್ಲಿ ಬೃಹತ್ ಶಿಲಾಯುಗಕ್ಕೆ ಸಂಬಂಧಪಟ್ಟಿರುವ ಅನೇಕ ನಿವೇಶನಗಳು ತಜ್ಞರಿಂದ ಬೆಳಕಿಗೆ ಬಂದಿವೆ. ನೆಲಮಂಗಲ ತಾಲ್ಲೂಕಿನ ಸೋಂಪುರ ಹೋಬಳಿಯ ದಕ್ಷಿಣಕಾಶಿ ಎಂದು ಕರೆಯಲ್ಪಡುವ ಶಿವಗಂಗೆ ಬೆಟ್ಟದಲ್ಲಿ ಬೃಹತ್ ಶಿಲಾಯುಗದ ಸಮಾಧಿಯನ್ನು ನಮ್ಮ ಕ್ಷೇತ್ರಕಾರ್ಯದಲ್ಲಿ ಪತ್ತೆ ಹಚ್ಚಲಾಯಿತು. ಇಲ್ಲಿಯವರೆಗೂ ಶಿವಗಂಗೆ ಬೆಟ್ಟದಲ್ಲಿ ಪ್ರಾಗೈತಿಹಾಸಿಕ ಗೋರಿ ನೆಲೆ ದೊರಕಿರಲಿಲ್ಲ. ಮೊಟ್ಟ ಮೊದಲ ಬಾರಿಗೆ ಈ ಸಮಾಧಿಯನ್ನು ಗುರುತಿಸಿದ್ದು, ಶಿವಗಂಗೆ ಬೆಟ್ಟವು ಪ್ರಾಗೈತಿಹಾಸಿಕ ಹಿನ್ನೆಲೆಯಲ್ಲಿ ಹೊಸ ಗರಿಯಾಗಿ ಸೇರ್ಪಡೆಯಾಯಿತು. ಸಮಾಧಿಯ ಸುತ್ತಲೂ ಕಲ್ಲುಗಳಿಂದ ವೃತ್ತವನ್ನು ರಚಿಸಲಾಗಿದೆ. ನಾಲ್ಕು

ಕಡೆಗಳಿಂದ ಕಲ್ಲುಗಳನ್ನು ನಿಲ್ಲಿಸಲಾಗಿದೆ. ಎರಡು ಶಿಲಾವೃತ್ತಗಳು ಕಂಡುಬರುತ್ತವೆ. ಸಣ್ಣ ಸಣ್ಣ ಕಲ್ಲುಗಳನ್ನು ಆಧಾರವಾಗಿ ನಿಲ್ಲಿಸಲಾಗಿದೆ. ಇದಲ್ಲದೇ ಭೂಮಿಯ ಮೇಲ್ಭಾಗದಲ್ಲಿ ಕಲ್ಲುಗಳನ್ನಿಟ್ಟು, ಆ ಕಲ್ಲುಗಳ ಮೇಲೆ ಚಪ್ಪಡಿ ಕಲ್ಲನ್ನು ಇಟ್ಟಿರುವುದು ಕಂಡು ಬಂದಿದೆ. ಹೊರಮುಖವಾಗಿ ಬೀಳದ ಹಾಗೆ ಮಾಡಲು ತುಂಡುಕಲ್ಲುಗಳನ್ನು ತಳವಿನ್ಯಾಸಕ್ಕೆ ತಕ್ಕಂತೆ ಚೌಕೋನವಾಗಿ ನೆಟ್ಟಗೆ ಕಟ್ಟಿದೆ. ಕಲ್ಲು ಹಲಗೆ ಮತ್ತು ತುಂಡು ಕಲ್ಲುಗಳಿಂದ ಬಲವಾದ ಕೋಣೆಯನ್ನು ಕಟ್ಟಿರುವುದನ್ನು ಕಾಣಬಹುದು. ಹೀಗೆ ಈ ತಂತ್ರಜ್ಞಾನವನ್ನು ಬೃಹತ್ ಶಿಲಾಯುಗದ ಜನತೆ ಬಳಸಿಕೊಂಡಿರುವುದು ಆಶ್ಚರ್ಯವಾಗುತ್ತದೆ.

### ೨.೩. ಇತಿಹಾಸದತ್ತ ಒಂದು ನೋಟ

ನೆಲಮಂಗಲ ಪ್ರದೇಶವು ಬೃಹತ್ ಶಿಲಾಯುಗದ ಕೇಂದ್ರವಾಗಿ ಕಂಡುಬಂದ ಹಿನ್ನೆಲೆಯಲ್ಲಿ ಅನೇಕ ಸಾಮ್ರಾಜ್ಯಗಳು ಏಳಿಗೆಗೆ ಬಂದ ಹಂತವನ್ನು ನೋಡಬಹುದಾಗಿದೆ. ಲಿಖಿತ ದಾಖಲೆಗಳು ದೊರೆತ ನಂತರದ ಕಾಲವೇ ಇತಿಹಾಸಕಾಲ. ಈ ಪ್ರದೇಶದ ಸಂಸ್ಕೃತಿಯ ಅಧ್ಯಯನದ ನೆಲೆಯಲ್ಲಿ ವಿವಿಧ ಕಾಲಘಟ್ಟಗಳಲ್ಲಿ ಪ್ರಾರಂಭಗೊಂಡ ಸಾಮ್ರಾಜ್ಯಗಳ ಆಡಳಿತ ವ್ಯವಸ್ಥೆಯನ್ನು ಚರ್ಚಿಸಬೇಕಾಗುತ್ತದೆ. ಚಾರಿತ್ರಿಕ ಅಂಶಗಳಲ್ಲಿ ಗತಕಾಲದ ರಾಜಕೀಯ ವಿವರಗಳು ಪ್ರಧಾನವಾಗಿದ್ದು, ಇದರಲ್ಲಿ ಆಡಳಿತ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಕಲೆ ಮತ್ತು ವಾಸ್ತುಶಿಲ್ಪ ಆಯಾಮಗಳು ಸೇರಿಕೊಂಡಿರುತ್ತವೆ. ಈ ಆಯಾಮಗಳಿಂದ ಒಂದು ಪ್ರದೇಶದ ಇತಿಹಾಸ ನಿರ್ಮಾಣವಾಗುತ್ತದೆ. ಸಂಸ್ಕೃತಿ ಅಧ್ಯಯನಗಳು ನಮ್ಮ ಕಾಲಘಟ್ಟಕ್ಕೆ ತಕ್ಕಂತೆ ಇತಿಹಾಸವನ್ನು ಪುನಾರಚಿಸುತ್ತವೆ. ಒಂದು ಹಂತದಲ್ಲಿ ಇತಿಹಾಸವೆಂದರೆ 'ಗತಕಾಲದ ರಾಜಕೀಯ' ಎನ್ನುತ್ತಿದ್ದರು. ಈ ಪದ್ಧತಿ ಈಗ ಹಳೆಯದಾಗಿದ್ದು, ಇತಿಹಾಸವೆಂದರೆ 'ಒಂದು ಕಾಲಘಟ್ಟದ ಸಾಂಸ್ಕೃತಿಕ ಚಲನೆ' ಎಂದು ಹೇಳುವ ಪದ್ಧತಿ ಹೊಸದಾಗಿದೆ. ಈ ಸಾಂಸ್ಕೃತಿಕ ಆಯಾಮವು ಬಹುಮುಖೀ ಕಾರ್ಯಕ್ರಮಗಳನ್ನು ಒಳಗೊಳ್ಳುತ್ತದೆ. ಈ ಸಂದರ್ಭದಲ್ಲಿ ನೆಲಮಂಗಲ ಪ್ರದೇಶದ ಭೂಭಾಗಗಳನ್ನು ವಿಭಿನ್ನ ಅರಸು ಮನೆತನಗಳು ಆಳ್ವಿಕೆ ಮಾಡಿದ್ದರ ಬಗ್ಗೆ ತಿಳಿಯುವುದು ಸೂಕ್ತವೆನಿಸುತ್ತದೆ.

### ತಾಲ್ಲೂಕನ್ನು ಆಳಿದ ರಾಜಮನೆತನಗಳು

### ಗಂಗರು

ಕರ್ನಾಟಕದ ದಕ್ಷಿಣಭಾಗವನ್ನು ಗಂಗರು ನಾಲ್ಕನೆಯ ಶತಮಾನದ ಮಧ್ಯಭಾಗದಿಂದ ಹತ್ತನೆಯ ಶತಮಾನದ ಕೊನೆಯವರೆಗೆ ಆಳಿದರು. ಮೊದಲು ಸ್ವತಂತ್ರರಾಗಿ ಆನಂತರ ಚಾಲುಕ್ಯರ ಮತ್ತು ರಾಷ್ಟ್ರಕೂಟ ಅರಸು ಮನೆತನಗಳ ಮಾಂಡಲಿಕರಾಗಿ ಆಳಿದರು. ಇವರ ಪ್ರದೇಶವನ್ನು ಗಂಗವಾಡಿ ೯೬,೦೦೦ ಎಂದು ಕರೆಯಲಾಗಿದೆ. ಅನುಕೂಲಕ್ಕೆ ತಕ್ಕಂತೆ ತಮ್ಮ ರಾಜಧಾನಿಗಳನ್ನು ಬದಲಾಯಿಸಿಕೊಳ್ಳುತ್ತಿದ್ದು, ಕೋಲಾರ ಅವರ ಆರಂಭದ ರಾಜಧಾನಿ. ತಲಕಾಡು ಅವರ ಎರಡನೇ ರಾಜಧಾನಿ. ಚನ್ನಪಟ್ಟಣದ ಮಾಕುಂದ ಮತ್ತು ನೆಲಮಂಗಲ ಬಳಿಯ ಮಾನ್ಯಪುರ ಅಥವಾ ಮಣ್ಣೆ ಇವರ ಉಪರಾಜಧಾನಿಗಳಾಗಿದ್ದವು. ದಡಿಗ ಅಥವಾ ಕೊಂಗಿಣಿ ವರ್ಮ ಗಂಗ ವಂಶದ ಸ್ಥಾಪಕ. ನೆಲಮಂಗಲದ ಬಳಿ ಇರುವ ಮಣ್ಣೆಯನ್ನು ಶ್ರೀಪುರುಷ, ಇಮ್ಮಡಿ ಶಿವಮಾರ, ಮಾರಸಿಂಹ ಮುಂತಾದ ಅರಸರು ಆಳ್ವಿಕೆ ಮಾಡಿ ಅದರ ಅಭಿವೃದ್ಧಿಗಾಗಿ ದುಡಿದರು.

**ಶ್ರೀಪುರುಷ** (ಕ್ರಿ.ಶ.೭೨೫-೭೮೮)ನು ಒಂದನೇ ಶಿವಮಾರನ ಮಗನಾಗಿದ್ದು, ಕ್ರಿ.ಶ. ೭೨೫ ರಲ್ಲಿ ಅಧಿಕಾರಕ್ಕೆ ಬಂದನು. ಗಂಗರ ಸಾಮ್ರಾಜ್ಯವನ್ನು ಆಳ್ವಿಕೆ ಮಾಡಿದ ದೊರೆಗಳಲ್ಲಿ ಹದಿನಾಲ್ಕನೆಯವನು. ತನ್ನ ಆಳ್ವಿಕೆಯು

ಸುಸೂತ್ರವಾಗಿ ನಡೆಯಲು ನೆಲಮಂಗಲ ತಾಲ್ಲೂಕಿನ **'ಮಣ್ಣೆ'** ಅಥವಾ **'ಮಾನ್ಯಪುರ'** ಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು. ನೆಲಮಂಗಲದ ಮಾನ್ಯಪುರ ಅಥವಾ ಮಣ್ಣೆಯನ್ನು ಆಳಿದವರಲ್ಲಿ ಇವನು ಮೊದಲಿಗನಾಗಿದ್ದಾನೆ. ಇವನ ಆಳ್ವಿಕೆಯು ವಿಶೇಷವಾಗಿ ರಾಜಕೀಯ ಚಟುವಟಿಕೆಗಳಿಂದ ಕೂಡಿದ್ದು, ಕ್ರಿ.ಶ. ೭೮೮ರಲ್ಲಿ ಮರಣ ಹೊಂದುವವರೆಗೆ ಯುದ್ಧ ಮಾಡುವುದರಲ್ಲೇ ನಿರತನಾಗಿದ್ದನು. ಸಾಮ್ರಾಜ್ಯ ರಕ್ಷಿಸಿದನಾದರೂ ರಾಜ್ಯ ವಿಸ್ತರಣೆ ಮಾಡಲಾಗಲಿಲ್ಲ. ಸಾಮ್ರಾಜ್ಯ ರಕ್ಷಣೆಗಾಗಿ ಅನೇಕ ಯುದ್ಧಗಳನ್ನು ಕೈಗೊಂಡನು.

ಮೊದಲಿನಿಂದಲೂ ಬಾಣರು ಗಂಗರ ಶತೃಗಳಾಗಿದ್ದು, ಶ್ರೀಪುರುಷನು ಅವರ ಮೇಲೆ ಯುದ್ಧವನ್ನು ಹೂಡಿದನು. ಬಾಣರ ಅರಸ ಜಗದೇಕ ಮಲ್ಲನು ಏನೇ ಪ್ರಯತ್ನಪಟ್ಟರೂ ಶ್ರೀಪುರುಷನೇ ಗೆದ್ದನು. ಪಲ್ಲವರು ಇವನ ಪ್ರಬಲ ವಿರೋಧಿಗಳಾಗಿದ್ದರು. ಗಂಗ ಸಾಮ್ರಾಜ್ಯವನ್ನು ನಾಶಪಡಿಸಲು ಪಲ್ಲವರ ಅರಸ ನಂದಿವರ್ಮನು ಮಿಲಂದೆ ಪ್ರದೇಶದಲ್ಲಿ ಬೀಡು ಬಿಟ್ಟನು. ಶ್ರೀಪುರುಷನು ಗುಪ್ತಚಾರರಿಂದ ವಿಷಯ ತಿಳಿದು ಯುದ್ಧ ಪ್ರಾರಂಭಿಸಿ ನಂದಿವರ್ಮನನ್ನು ಸೋಲಿಸಿದನು. ಶ್ರೀಪುರುಷನು ಪಾಂಡ್ಯರ ಜೊತೆ ಸಂಬಂಧವನ್ನು ಬೆಳೆಸಿದನು. ಚಾಲುಕ್ಯರೊಂದಿಗೆ ಯುದ್ಧ ಮಾಡಿದರೂ ವೈವಾಹಿಕ ಸಂಬಂಧದಿಂದ ಕೊನೆಗೊಂಡಿತು.

ರಾಷ್ಟ್ರಕೂಟರ ದೊರೆ ಒಂದನೇ ಕೃಷ್ಣನಿಗೂ ಮತ್ತು ಶ್ರೀಪುರುಷನಿಗೂ ಅನೇಕ ಕಾಳಗಗಳು ನಡೆದವು. ೬ ವರ್ಷಗಳ ಕಾಲ ಕಾಳಗ ನಡೆದು ಕೆಲವು ಪ್ರದೇಶಗಳನ್ನು ರಾಷ್ಟ್ರಕೂಟರು ವಶಪಡಿಸಿಕೊಂಡರು. ಆದರೆ ಮಾನ್ಯಪುರ ಕೃಷ್ಣನ ವಶವಾದಂತೆ ತಿಳಿದುಬಂದರೂ ಕೊನೆಗೆ ಜಯ ಶ್ರೀಪುರುಷನಿಗೆ ಸಿಕ್ಕಿತು. ಇದರಿಂದಾಗಿ ಅವನ ರಾಜ್ಯ 'ಶ್ರೀರಾಜ್ಯ' ಎಂಬ ಅಭಿದಾನ ಪಡೆಯಿತು.[೬] ಶ್ರೀಪುರುಷನು ರಾಷ್ಟ್ರಕೂಟರ ದಾಳಿಯನ್ನು ತಡೆಯಲು ಮಾನ್ಯಪುರವನ್ನು ಯುದ್ಧದ ನೆಲೆಯಾಗಿ ಮಾಡಿಕೊಂಡಿದ್ದನು.

ಈತನು ಜೈನಧರ್ಮವನ್ನು ಅವಲಂಬಿಸಿದ್ದು ಅನೇಕ ವೈದಿಕ ದೇವಾಲಯಗಳಿಗೆ ದಾನ ದತ್ತಿಗಳನ್ನು, ಬ್ರಾಹ್ಮಣರಿಗೆ ಭೂ ದಾನ ಮಾಡಿದನು. ರುದ್ರಶರ್ಮ ಸೋಮಯಾಜಿಯ ಮಗ ಸಕ್ಕದರ ಶರ್ಮನಿಗೆ ಬ್ರಹ್ಮ ದಯವಾಗಿ ಅತ್ತಿಗನ್ನೂರು ಎಂಬ ಗ್ರಾಮವನ್ನು ನೀಡಿರುವುದನ್ನು ಕ್ರಿ.ಶ. ೭೫೦ರ ಶಾಸನ ತಿಳಿಸಿದೆ. ಶ್ರೀಪುರುಷನು ಸ್ವತಃ ವಿದ್ವಾಂಸನಾಗಿದ್ದು, ಸಾಹಿತ್ಯ ಪೋಷಕನೂ ಆಗಿದ್ದನು. ಗಜಯುದ್ಧದ ಬಗ್ಗೆ ತಿಳಿಯಲು 'ಗಜಶಾಸ್ತ್ರ'ವೆಂಬ ಗ್ರಂಥವನ್ನು ಸ್ವತಃ ರಚಿಸಿದನು. ಹೀಗೆ ಮಾನ್ಯಪುರವನ್ನಾಳಿದ ಅರಸರಲ್ಲಿ ಗಣ್ಯಸ್ಥಾನವನ್ನು ಪಡೆದಿದ್ದಾನೆ.

**ಇಮ್ಮಡಿ ಶಿವಮಾರ** (ಕ್ರಿ.ಶ.೭೮೮-೮೧೨) ನು ಅಧಿಕಾರಕ್ಕೆ ಬರುವ ಮೊದಲು ಕುಣಿಗಲ್ ನಾಡಿನ ರಾಜ್ಯಪಾಲನಾಗಿದ್ದನು. ಸಿಂಹಾಸನಕ್ಕೆ ಬಂದ ಪ್ರಾರಂಭದಲ್ಲಿ ಧ್ರುವನ ಆಕ್ರಮಣವನ್ನು ಎದುರಿಸಬೇಕಾಯಿತು. ಶಿವಮಾರನು ಯುದ್ಧದಲ್ಲಿ ಸೋತು ಸೆರೆಯಾಳಾದನು. ನಂತರ ಧ್ರುವನು ತನ್ನ ಹಿರಿಯ ಮಗ ಕಂಬ(ಸ್ತಂಭ)ನನ್ನು ಗಂಗರಾಜ್ಯಕ್ಕೆ ಅಧಿಪತಿಯನ್ನಾಗಿ ಮಾಡಿದನು. ನಂತರ ಅಧಿಕಾರಕ್ಕೆ ಬಂದ ೩ನೇ ಗೋವಿಂದನು ಇಮ್ಮಡಿ ಶಿವಮಾರನನ್ನು ಬಿಡುಗಡೆಗೊಳಿಸಿದನು. ರಾಷ್ಟ್ರಕೂಟರ ಸಾಮಂತನಾಗಿಯೇ ಇಮ್ಮಡಿ ಶಿವಮಾರನು ಅಧಿಕಾರ ನಡೆಸಿದನು. ಕೊನೆಗೆ ರಾಷ್ಟ್ರಕೂಟರ ದೊರೆ ಅಮೋಘವರ್ಷ ನೃಪತುಂಗನ ವಿರುದ್ಧ ಬಂಡೆದ್ದು ಕ್ರಿ.ಶ. ೮೧೨ರ ಕಾಗೆಮೊಗೆಯಾರ ಯುದ್ಧದಲ್ಲಿ ಸೋತು ಮಡಿದನು.[೭] ಇವನ ನಂತರ ಇವನ ಮಗ ಮಾರಸಿಂಹನು ಆಡಳಿತದ ಸೂತ್ರವನ್ನು ಹಿಡಿದನು.

ಇಮ್ಮಡಿ ಶಿವಮಾರನು ಸ್ವತಃ ವಿದ್ವಾಂಸನಾಗಿದ್ದು, 'ಸೇತುಬಂಧ' ಮತ್ತು 'ಗಜಾಭಿಷ್ಟಕ' ಎಂಬ ಕೃತಿಗಳನ್ನು ರಚಿಸಿದನು.ಮರಳು ಕುಂಟೆಯಲ್ಲಿ ಇಮ್ಮಡಿ ಶಿವಮಾರನ ವೀರಗಲ್ಲು ಶಾಸನ ಇತ್ತೀಚಿಗೆ ದೊರಕಿದೆ. ಮಣ್ಣೆಯ

ಕೋಟೆ ಕಾಳಗದಲ್ಲಿ ಹೋರಾಡಿ ಮರಣ ಹೊಂದಿದ ಪರಮ ಎಂಬ ವೀರನಿಗೆ ಇಮ್ಮಡಿ ಶಿವಮಾರನು ದಾನವನ್ನು ನೀಡಿದ್ದಾನೆ. ಇವನು ಜೈನನಾದರೂ ದೇವಾಲಯ ಹಾಗೂ ಅಗ್ರಹಾರಗಳಿಗೆ ಅಪಾರ ದತ್ತಿ ನೀಡಿದನು.

**ಮಾರಸಿಂಹನು** ಕ್ರಿ.ಶ. ೭೯೭ರಲ್ಲಿ ಗಂಗವಾಡಿ ಪ್ರಾಂತ್ಯದ ಮುಖ್ಯಾಧಿಕಾರವನ್ನು ಪಡೆದನು. ಇವನು ತನ್ನ ಜೀವಿತದ ಬಹುಭಾಗ ಯುವರಾಜನಾಗಿಯೇ ಆಳ್ವಿಕೆಯನ್ನು ಮಾಡಿದನೆಂದು ತೋರುತ್ತದೆ. ತನ್ನ ಅಧಿಕಾರಾವಧಿಯಲ್ಲಿ ಅನೇಕ ದೇವಾಲಯಗಳಿಗೆ ದಾನ-ದತ್ತಿಗಳನ್ನು ನೀಡಿದ್ದಾನೆ. ಮಾರಸಿಂಹನ ಸಾಮಂತ ಶ್ರೀವಿಜಯನು ಮಾನ್ಯಪುರದಲ್ಲಿ ಕಟ್ಟಿಸಿದ ಜಿನೇಂದ್ರಭವದ ದೇವಭೋಗಕ್ಕಾಗಿ 'ಕಿರುವೆಕ್ಕೂರ' ಗ್ರಾಮವನ್ನು ದಾನವಾಗಿ ನೀಡಿರುವುದನ್ನು ಮಾರಸಿಂಹನ ಕ್ರಿ.ಶ. ೭೯೭ರ ತಾಮ್ರಶಾಸನ ತಿಳಿಸುತ್ತದೆ. ಇವನು ಸಕಲ ವಿಷಯಗಳಲ್ಲೂ ಪರಿಮಿತನಾಗಿದ್ದ ಎಂಬ ಅಂಶವನ್ನು ಈ ಶಾಸನವೇ ತಿಳಿಸಿದೆ.

ಕ್ರಿ.ಶ. ೮೦೧ ರ ಶಾಸನ (ನೆಲ -61)ವು ಮಣ್ಣೆಯಲ್ಲಿ ವಣಿಕರು ಶ್ರೇಷ್ಠಿಗಳು ಕಟ್ಟಿಸಿದ ಸೂರ್ಯ ದೇವಾಲಯಕ್ಕೆ ಪೊನ್ನುಡಿಕೆ ವಿಷಯದ 'ಮಸೆಕ್ಕಲಿ' ಎಂಬ ಗ್ರಾಮವನ್ನು ಮಾರಸಿಂಹನು ದಾನ ಕೊಟ್ಟಿರುವುದಾಗಿ ತಿಳಿಸುತ್ತದೆ. ಇಲ್ಲಿನ ಸೂರ್ಯವಿಗ್ರಹ ಇತ್ತೀಚಿಗೆ ಮಣ್ಣೆಯಲ್ಲಿ ದೊರಕಿದ್ದು, 'ಅರ್ಹತ್ವತಿ' ಮಂದಿರ ಈಗ ಇಲ್ಲ.

ಮಾರಸಿಂಹನ ನಂತರ ೧ನೇ ರಾಚಮಲ್ಲನು ಅಧಿಕಾರಕ್ಕೆ ಬಂದು ರಾಷ್ಟ್ರಕೂಟರ ಸೇನಾನಿ ಬಂಕೇಶನನ್ನು ಸೋಲಿಸಿ ಗಂಗರಾಜ್ಯದ ದಕ್ಷಿಣ ಪ್ರಾಂತ್ಯಗಳನ್ನು ಗೆದ್ದುಕೊಂಡನು. ನಂತರ ಎರೆಯಂಗ, ನೀತಿಮಾರ್ಗ, ಭೂತುಗ, ಎರಡನೇ ರಾಚಮಲ್ಲ, ೫ನೇ ರಾಚಮಲ್ಲ ಕ್ರಮವಾಗಿ ಆಳ್ವಿಕೆ ನಡೆಸಿದರು. ಗಂಗರು ತಮ್ಮ ಆಡಳಿತಾವಧಿಯಲ್ಲಿ ನೆಲಮಂಗಲ ತಾಲ್ಲೂಕಿನ ಮಾನ್ಯಪುರವನ್ನು ಉಪ ರಾಜಧಾನಿಯನ್ನಾಗಿ ಮಾಡಿಕೊಂಡರು. ಕೋಲಾರದ ತಲಕಾಡಿಗೆ ಹೋಗುತ್ತಿದ್ದಾಗ ಮಾನ್ಯಪುರ ವಿಶ್ರಾಂತಿ ನೆಲೆಯಾಗಿತ್ತು. ಮಾನ್ಯಪುರ ಕಣಿವೆಗಳಿಂದ ಕೂಡಿದ್ದು, ರಾಷ್ಟ್ರಕೂಟರ ದಾಳಿಯನ್ನು ತಡೆಯಲು ಮಾನ್ಯಪುರವನ್ನು ಯುದ್ಧದ ನೆಲೆಯಾಗಿ ಮಾಡಿಕೊಂಡರು.

ಗಂಗರು ತಮ್ಮ ಅಧಿಕಾರಾವಧಿಯಲ್ಲಿ ಸ್ವತಃ ಜೈನರಾದರೂ ಬೌದ್ಧ, ಶೈವ, ವೈಷ್ಣವ ಪಂಥಗಳನ್ನು ಪೋಷಿಸಿ, ಅನೇಕ ಶಿವ ದೇವಾಲಯಗಳು, ಬಸದಿಗಳು, ಸೂರ್ಯ ದೇವಾಲಯಗಳು, ವಿಷ್ಣುದೇವಾಲಯಗಳನ್ನು ನಿರ್ಮಿಸಿ ತಮ್ಮ ಹೆಸರನ್ನು ಸಾಂಸ್ಕೃತಿಕವಾಗಿ ಉಳಿಸಿ ಹೋಗಿದ್ದಾರೆ.

### ರಾಷ್ಟ್ರಕೂಟರು

ರಾಷ್ಟ್ರಕೂಟರು ನೆಲಮಂಗಲ ತಾಲ್ಲೂಕಿನ ಪ್ರದೇಶವಾದ ಮಾನ್ಯಪುರವನ್ನು ಮೊದಲು ನೇರವಾಗಿ ಆಳ್ವಿಕೆ ಮಾಡಲಿಲ್ಲವಾದರೂ ಯುದ್ಧಗಳ ಮೂಲಕ ಕೆಲವು ಪ್ರದೇಶಗಳನ್ನು ಪಡೆದು ಆನಂತರ ಗಂಗರನ್ನು ಸಾಮಂತರನ್ನಾಗಿ ಮಾಡಿಕೊಂಡು ಇವರ ಮೂಲಕ ಆಳ್ವಿಕೆ ನಡೆಸಿದರು.

ರಾಷ್ಟ್ರಕೂಟ ಸಾಮ್ರಾಜ್ಯದ ಸ್ಥಾಪಕನಾದ ದಂತಿದುರ್ಗನು ಗಂಗರನ್ನು ತನ್ನ ಸಾಮಂತರನ್ನಾಗಿ ಮಾಡಿಕೊಳ್ಳಲು ಕರೆ ಕಳುಹಿಸಿದನು.ಆದರೆ ಮಾನ್ಯಪುರವನ್ನು ಆಳ್ವಿಕೆ ಮಾಡುತ್ತಿದ್ದ ಶ್ರೀಪುರುಷನು ರಾಷ್ಟ್ರಕೂಟರ ಸಾಮಂತನಾಗಿರಲು ಒಪ್ಪದೇ ತಿರಸ್ಕರಿಸಿದನು. ಇದರಿಂದ ದಂತಿದುರ್ಗ ಕ್ರಿ.ಶ. ೭೬೦ರಲ್ಲಿ ಯುದ್ಧ ಕೈಗೊಂಡನು. ಆದರೆ ಶ್ರೀಪುರುಷನು ಈ ಹೋರಾಟವನ್ನು ಕೊನೆಗಾಣಿಸಿದನು. ಆನಂತರ ಅಧಿಕಾರಕ್ಕೆ ಬಂದ ಒಂದನೇ ಕೃಷ್ಣನು ಕ್ರಿ.ಶ. ೭೭೦ರಲ್ಲಿ ಶ್ರೀಪುರುಷನೊಡನೆ ಯುದ್ಧವನ್ನು ಪ್ರಾರಂಭಿಸಿದನು. ಆರು ವರ್ಷಗಳು ಹೋರಾಟ ನಡೆದು ಒಂದನೇ ಕೃಷ್ಣನಿಗೆ ಜಯವು ದೊರಕದೇ, ಶ್ರೀಪುರುಷನಿಗೆ ಸೋಲು ಉಂಟಾಗಲಿಲ್ಲವಾದರೂ ಭರಿಸಲಾಗದ ನಷ್ಟವುಂಟಾಯಿತು. ಕೊನೆಗೆ ಶ್ರೀಪುರುಷನಿಂದ ಒಂದನೇ ಕೃಷ್ಣನು ಕಪ್ಪಕಾಣಿಕೆಯನ್ನು ಪಡೆದನು.

ರಾಷ್ಟ್ರಕೂಟರ ಅಧಿಕಾರಕ್ಕಾಗಿ ಎರಡನೇ ಗೋವಿಂದನಿಗೂ ಮತ್ತು ಧ್ರುವನಿಗೂ ಅಂತಃಕಲಹಗಳು ಏರ್ಪಟ್ಟವು. ಆ ಸಮಯದಲ್ಲಿ ಗಂಗರ ಅರಸ ಎರಡನೇ ಶಿವಮಾರನು ಎರಡನೇ ಗೋವಿಂದನಿಗೆ ಸಹಾಯ ಮಾಡಿದನು. ಕೊನೆಗೆ ಧ್ರುವನೇ ಹೋರಾಟದಲ್ಲಿ ಗೆದ್ದು ದೊರೆಯಾದನು. ಆಗ ಧ್ರುವನು ಗಂಗರ ಅರಸನಾದ ಶಿವಮಾರನನ್ನು ಸೋಲಿಸಿದ್ದಲ್ಲದೇ ಅವನನ್ನು ಬಂಧಿಸಿ ಸೆರಮನೆಯಲ್ಲಿಟ್ಟನು. ನಂತರ ಮೂರನೇ ಗೋವಿಂದನ ಆಳ್ವಿಕೆಯಲ್ಲಿ ಶಿವಮಾರನು ಬಂಧನದಿಂದ ಬಿಡುಗಡೆ ಹೊಂದಿದನು. ಮತ್ತೇ ರಾಷ್ಟ್ರಕೂಟರ ಅಧಿಕಾರಕ್ಕಾಗಿ ಮೂರನೇ ಗೋವಿಂದ ಮತ್ತು ಕಂಬ (ಸ್ತಂಭ)ನ ನಡುವೆ ಕಲಹ ಉಂಟಾಯಿತು. ಗೋವಿಂದನು ತನ್ನ ಸಹಾಯಕ್ಕಾಗಿ ಇಮ್ಮಡಿ ಶಿವಮಾರನನ್ನು ಬಿಡುಗಡೆ ಮಾಡಿದನು. ಆದರೆ ಆತನು ಕಂಬ (ಸ್ತಂಭ)ನ ಕಡೆಗೆ ಸೇರಿದನು. ಈ ಯುದ್ಧದಲ್ಲಿ ಮೂರನೆಯ ಗೋವಿಂದನು ಗೆದ್ದು ಕಂಬ (ಸ್ತಂಭ)ನಿಗೆ ಕ್ಷಮೆ ನೀಡಿ ಗಂಗವಾಡಿಯ ರಾಜ್ಯಪಾಲನನ್ನಾಗಿ ಮಾಡಿ ಶಿವಮಾರನನ್ನು ಮತ್ತೆ ಬಂಧನದಲ್ಲಿರಿಸಿದನು.[೯] ಮೂರನೆಯ ಗೋವಿಂದನಿಗೆ ಸಂಬಂಧಿಸಿದಂತೆ ಮಣ್ಣೆಯಲ್ಲಿ ಕ್ರಿ.ಶ. ೮೦೨ ರ ಶಾಸನ ದೊರೆತಿದೆ. ಈತನು 'ಪ್ರಭೂತವರ್ಷ' ಎಂಬ ಹೆಸರಿನಿಂದ ಕರೆಯಲ್ಪಡುತ್ತಿದ್ದು ಮಣ್ಣೆಯಲ್ಲಿ ಊರಿನ ಪಶ್ಚಿಮಕ್ಕಿರುವ ಜಿನಾಲಯಕ್ಕೆ 'ಪೆರ್ವ್ವಡಿಯೂರು' ಎಂಬ ಹಳ್ಳಿಯನ್ನು ಕಂಭ (ಸ್ತಂಭ) ಎಂಬ ವ್ಯಕ್ತಿಯ ಕೋರಿಕೆಯಂತೆ ದಾನಕೊಟ್ಟ ವಿಷಯ ತಿಳಿಸುತ್ತದೆ. ಅಮೋಘವರ್ಷ ನೃಪತುಂಗನು ಅಧಿಕಾರಕ್ಕೆ ಬಂದಾಗ ಇಮ್ಮಡಿ ಶಿವಮಾರನು ಇವನ ವಿರುದ್ಧ ಬಂಡೆದ್ದು ಕ್ರಿ.ಶ. ೮೧೬ರ 'ಕಾಗೆಮೊಗೆಯೂರ' ಯುದ್ಧದಲ್ಲಿ ಮಡಿದನು. ಕಾಲಾನಂತರ ಅಮೋಘವರ್ಷ ನೃಪತುಂಗ ಗಂಗರ ಬಗ್ಗೆ ಮೆದು ಧೋರಣೆಯನ್ನು ತಳೆದನು. ಗಂಗರ ದೊರೆ ನೀತಿಮಾರ್ಗನ ಮಗನಾದ ಭೂತುಗನಿಗೆ ತನ್ನ ಮಗಳು ಚಂದ್ರಲಬ್ಬೆಯನ್ನು ಮದುವೆ ಮಾಡಿಕೊಟ್ಟು ಸಂಬಂಧಿಕರಾದರು. ಹೀಗೆ ರಾಷ್ಟ್ರಕೂಟರು ನೇರವಾಗಿ ಮಣ್ಣೆಯನ್ನು ಆಳ್ವಿಕೆ ಮಾಡದಿದ್ದರೂ ಗಂಗರನ್ನು ಸಾಮಂತರನ್ನಾಗಿ ಮಾಡಿಕೊಂಡು ಇವರ ಮೂಲಕ ಆಳ್ವಿಕೆ ನಡೆಸಿದರು.

**ಚೋಳರು**

೧೧ನೆಯ ಶತಮಾನದ ಪ್ರಾರಂಭದಲ್ಲಿ ಚೋಳರ **ಒಂದನೆಯ ರಾಜರಾಜ ಚೋಳನು** (ಕ್ರಿ.ಶ. ೯೮೫-೧೧೧೬) ಗಂಗರ ಆಳ್ವಿಕೆಯನ್ನು ಕೊನಗಾಣಿಸಿ ಗಂಗಾಕ್ರಮಣದೊಡನೆ ಗಂಗವಾಡಿಯ ಇತರ ಭಾಗಗಳನ್ನು ವಶಪಡಿಸಿಕೊಂಡು ತನ್ನ ಆಡಳಿತಕ್ಕೆ ಒಳಪಡಿಸಿಕೊಂಡನು. ಒಟ್ಟಾರೆಯಾಗಿ ಒಂದನೇ ರಾಜರಾಜ ಚೋಳನಿಂದ ಹಿಡಿದು ಒಂದನೇ ಕುಲೋತ್ತುಂಗನ ಕಾಲದವರೆಗೆ ಸುಮಾರು ಒಂದು ಶತಮಾನಕ್ಕೂ ಹೆಚ್ಚು ಕಾಲ ಚೋಳರು ನೆಲಮಂಗಲ ಪ್ರದೇಶಗಳನ್ನು ಆಳ್ವಿಕೆ ಮಾಡಿದ್ದಾರೆ.[೧೦]

**ರಾಜೇಂದ್ರಚೋಳನ** (ಕ್ರಿ.ಶ. ೧೦೧೪-೧೦೪೪) ಕಾಲದಲ್ಲಿ ಚೋಳರ ಆಡಳಿತ ಇಲ್ಲಿ ಸುಸಂಘಟಿತವಾಯಿತು. ಇಲ್ಲಿನ ಮಣ್ಣೆನಾಡೂ ಸಹ ವಿಕ್ರಮಚೋಳಮಂಡಲಕ್ಕೆ ಸೇರಿದುದೇ ಆಗಿತ್ತು. ಭಿನ್ನಮಂಗಲವೂ ಈ ನಾಡಿನ ಊರಾಗಿತ್ತು. ಕ್ರಿ.ಶ. ೧೦೩೮ರ ಆಲೂರಿನ ಶಾಸನ (ನೆಲ - ೭a)ವು ರಾಜೆಂದ್ರಚೋಳದೇವನ ಆಳ್ವಿಕೆಯ ೨೭ನೆಯ ವರ್ಷವಾಗಿದ್ದು ಕುಕ್ಕನೂರು ನಾಡಿನ ವಾಣಪುರದ ಮಾಣಕ್ಕಚೆಟ್ಟಿ ಮತ್ತಿತರರು ನಾಡಿನ ಗಾಮುಂಡನಾದ ವಿನ್ನಮಂಗಲದ ರಾಜೇಂದ್ರ ಚೋಳಗಾವುಂಡನು ಚಾಮುಂಡೇಶ್ವರಿ ದೇವಿಯ ಸೇವೆಗೆ ಮತ್ತು ಪೂಜಾರಿಗೆ ನೀಡಿದ ದಾನದ ದಾಖಲೆಯಾಗಿದೆ.

ರಾಜೇಂದ್ರನ ಎರಡನೇ ಪುತ್ರ **ರಾಜಾಧಿರಾಜ**(ಕ್ರಿ.ಶ. ೧೦೪೪-೧೦೭೮)ನ ಆಳ್ವಿಕೆಯಲ್ಲಿ ಅನೇಕ ದಾನ ದತ್ತಿಗಳು, ಕೊಡುಗೆಗಳೂ ನೀಡಲ್ಪಟ್ಟಿವೆ. ಕ್ರಿ.ಶ. ೧೦೫೦ ರ ಮಂಡಿಗೆರೆ (ನೆಲ - ೨೫) ರ ಶಾಸನವು ಇವನ

ದಂಡನಾಯಕ ಜಯಗೊಂಡ ಚೋಳವಾಣಕೋವರ್ಯೆಯನ್ ಎಂಬುವನು ಜಮೀನ್ದಾರನ ಪಾಲಾಗಿ ವಿಕ್ರಮಚೋಳಮಂಡಲದ ಮಣ್ಣೆನಾಡಿನ ಭೂವಿವಾದವನ್ನು ಇತ್ಯರ್ಥ ಮಾಡಿದ್ದನ್ನು ದಾಖಲಿಸಿದೆ.[೧೯] ಊರಿನ ಖುಷ್ಕಿ ಬೆಳೆಯ ೨/೫ ಭಾಗವನ್ನು ಸ್ವೀಕರಿಸಲು ಒಪ್ಪಿರುವುದರ ದಾಖಲೆಯಾಗಿದೆ. ಒಟ್ಟಿನಲ್ಲಿ ರಾಜಾಧಿರಾಜನ ಆಳ್ವಿಕೆಯಲ್ಲಿ ಅಭಿವೃದ್ಧಿ ಕಾರ್ಯಗಳು ನಡೆದಿವೆ ಎಂಬುದನ್ನು ತಿಳಿಯಬಹುದು. ಒಂದನೇ ಕುಲೋತ್ತುಂಗನು (ಕ್ರಿ.ಶ. ೧೦೭೦) ಈ ಪ್ರದೇಶವನ್ನು ಆಳ್ವಿಕೆ ಮಾಡಿದ ಕೊನೆಯ ರಾಜನಾಗಿದ್ದಾನೆ. ಈತನ ಆಡಳಿತಾವಧಿಯಲ್ಲಿ ದಾನ ದತ್ತಿಗಳನ್ನು ನೀಡಿದ್ದಾನೆ. ಕ್ರಿ.ಶ. ೧೦೩೮ ರ ರಾಜೇಂದ್ರಚೋಳನ ಕಾಲದಲ್ಲಿ 'ಮುಕ್ತಿನಾಥೇಶ್ವರ ದೇವಾಲಯ'ವು ನೆಲಮಂಗಲದ ಅರಿಶಿನಕುಂಟೆ ಬಳಿ ಇರುವ ಭಿನ್ನಮಂಗಲದಲ್ಲಿ ನಿರ್ಮಾಣಗೊಂಡಿದ್ದು ಈ ದೇವಾಲಯಕ್ಕೆ ಕ್ರಿ.ಶ. ೧೧೧೦ ರಲ್ಲಿ ಕುಲೋತ್ತುಂಗನು 'ನಕ್ಕೂರು' ಗ್ರಾಮವನ್ನು ದಾನವಾಗಿ ನೀಡಿದ್ದಾನೆ.

ನೆಲಮಂಗಲದ ಹಲವು ಪ್ರದೇಶಗಳಲ್ಲಿ ಚೋಳರು ತಮ್ಮ ಆಳ್ವಿಕೆಯನ್ನು ನಡೆಸಿ ಶೈವಧರ್ಮಕ್ಕೆ ಪ್ರೋತ್ಸಾಹ ನೀಡಿದ್ದಾರೆ. ದೇವಾಲಯಗಳನ್ನು ನಿರ್ಮಿಸಿ ಅವುಗಳ ಅಭಿವೃದ್ಧಿಗೆ ದಾನ ದತ್ತಿಗಳನ್ನು ನೀಡುವುದರ ಮೂಲಕ ಸಾಂಸ್ಕೃತಿಕ ನೆಲೆಯಲ್ಲಿ ಗುರುತಿಸಿಕೊಂಡಿದ್ದಾರೆ.

**ಹೊಯ್ಸಳರು**

ಗಂಗರು ಅವನತಿಯತ್ತ ಸಾಗುತ್ತಿದ್ದ ಸಮಯದಲ್ಲಿ ಉದಯವಾದದ್ದು ಹೊಯ್ಸಳ ಮನೆತನ. ಹೊಯ್ಸಳರ ಸ್ಥಾಪಕ ಸಳನು ಗಂಗ ರಾಜರೊಡನೆ ಸಂಬಂಧ ಬೆಳೆಸಿದ್ದನು. ಇವನು ಗಂಗರ ಬಿರುದಾದಂತಹ 'ರಾಜಮಲ್ಲ' ಮತ್ತು 'ಪೆರ್ಮಾಡಿ' ಎಂಬ ಬಿರುದುಗಳನ್ನು ಪಡೆದಿದ್ದನು. ಚೋಳರು ಗಂಗವಾಡಿಯನ್ನು ಆಕ್ರಮಿಸಿಕೊಳ್ಳಲು ಪ್ರಯತ್ನಿಸಿದಾಗ ಸಳನು ಅದನ್ನು ತಡೆಯಲು ಮುಂದಾದನು. ಕೊಂಗಾಳ್ವರ ರಾಜ ಕಣ್ಣಮನು ಸಳನಿಂದ ಸೋತು ಅವನ ರಾಜ್ಯವನ್ನು ಇವನಿಗೊಪ್ಪಿಸಿದನು.[೨೦] ಗಂಗರು ಅವನತಿಯ ಕಡೆ ಸಾಗುತ್ತಿದ್ದಂತೆಯೇ ಹೊಯ್ಸಳರು ಸ್ವತಂತ್ರರಾದರು.

**ವಿನಯಾದಿತ್ಯ**(ಕ್ರಿ.ಶ.೧೦೪೭-೧೦೯೮)ನು ಚೋಳ ಮತ್ತು ಚಾಲುಕ್ಯರ ಮಧ್ಯೆ ನಡೆದ ಯುದ್ಧದಲ್ಲಿ ಚಾಳುಕ್ಯರನ್ನು ಬೆಂಬಲಿಸಿದನು. ಇದರಿಂದ ಈತನಿಗೆ ಗಂಗವಾಡಿಯ ರಾಜಪಾಲತ್ವ ದೊರೆಯಿತು. ಇವನ ನಂತರ ಎರೆಯಂಗನು ಅಧಿಕಾರಕ್ಕೆ ಬಂದು ಎರಡೇ ವರ್ಷದಲ್ಲಿ ಮಡಿದನು. ಅನಂತರ ಇವನ ಮಗ ಒಂದನೇ ಬಲ್ಲಾಳನು ಅಧಿಕಾರ ವಹಿಸಿಕೊಂಡನು. ಈತನು ಪುತ್ರ ಸಂತಾನವಿಲ್ಲದೆ ನಿಧನನಾದಾಗ ಆತನ ಸೋದರ ಬಿಟ್ಟಿದೇವನು ವಿಷ್ಣುವರ್ಧನ ಎಂಬ ಹೆಸರಿನಿಂದ ಅಧಿಕಾರಕ್ಕೆ ಬಂದನು.

**ವಿಷ್ಣುವರ್ಧನ**(ಕ್ರಿ.ಶ.೧೧೦೮-೧೧೪೨)ನು ಹೊಯ್ಸಳ ರಾಜರುಗಳಲ್ಲಿ ಶ್ರೇಷ್ಠನಾಗಿದ್ದಾನೆ. ಚೋಳರು ಹೊಯ್ಸಳರ ಪ್ರಬಲ ಶತ್ರುಗಳಾಗಿದ್ದು ರಾಜೇಂದ್ರ ಚೋಳ ಮತ್ತು ಕುಲೋತ್ತುಂಗ ಚೋಳನು ದರ್ಪದಿಂದ ಗಂಗವಾಡಿಯನ್ನು ಆಳುತ್ತಿದ್ದು, ತಲಕಾಡನ್ನು ಆಕ್ರಮಿಸಿಕೊಳ್ಳಲು ಹೊಯ್ಸಳರ ಸೈನ್ಯ ಚೋಳ ಮಾಂಡಲಿಕ ಆದಿಯನ್ನು ಕೊಂದಿತು. ಈ ಕದನದಲ್ಲಿ ಚೋಳರ ಸೈನ್ಯ ದಿಕ್ಕಾಪಾಲಾಗಿ ಓಡಿತು. ಇದರಿಂದ ವಿಷ್ಣುವರ್ಧನ 'ವೀರಗಂಗ' ಮತ್ತು 'ತಲಕಾಡುಗೊಂಡ' ಎಂಬ ಬಿರುದನ್ನು ಪಡೆದನು.

ವಿಷ್ಣುವರ್ಧನ ರಾಣಿಯಾದ ಶಾಂತಲೆಯು ತನ್ನ ಜೀವಿತದ ಕೊನೆಯ ದಿನಗಳನ್ನು ನೆಲಮಂಗಲದ ಶಿವಗಂಗೆಯಲ್ಲಿ ಕಳೆದು ಆತ್ಮಾರ್ಪಣೆ ಮಾಡಿಕೊಂಡಳು. ಇವಳ ನೆನಪಿಗಾಗಿ ವಿಷ್ಣುವರ್ಧನನು ಶಾಂತಲೇಶ್ವರ ದೇವಾಲಯವನ್ನು ನಿರ್ಮಿಸಿದನು. ವಿಷ್ಣುವರ್ಧನನು ಗಂಗಾಧರೇಶ್ವರ ದೇವಾಲಯ(ಶಿವಾಲಯ)ವನ್ನು ಕಟ್ಟಿಸಿದನೆಂದು (ನೆಲ - ೮೪) ಶಾಸನ ತಿಳಿಸಿದೆ.

ಹೊಯ್ಸಳ ಅರಸರಾದ ಒಂದನೇ ನರಸಿಂಹನು ಶಿವಗಂಗೆಯಲ್ಲಿ ಮಂಟಪ ಕಟ್ಟಿಸಿದರೆ, ಎರಡನೇ ವೀರಬಲ್ಲಾಳನು ಶಿವಗಂಗೆಯ ಶಿವಗಂಗನಾಥ ದೇವರಿಗೆ ಕೆಂಕೆರೆ ಗ್ರಾಮವನ್ನು ದಾನ ನೀಡಿರುವುದು

ಗಮನಾರ್ಹವಾಗಿದೆ.[೧೩] ಇತ್ತೀಚೆಗೆ ಮಣ್ಣೆಯಲ್ಲಿ ಎರಡನೇ ವೀರಬಲ್ಲಾಳನ ಶಾಸನ ದೊರಕಿದ್ದು, ಇವನ ಆಳ್ವಿಕೆಯ ಬಗ್ಗೆ ತಿಳಿಸುತ್ತದೆ.

ಹೊಯ್ಸಳ ಅರಸರು ಅನೇಕ ದೇವಾಲಯಗಳನ್ನು ನಿರ್ಮಿಸಿ ಅವುಗಳ ಶ್ರೇಯೋಭಿವೃದ್ಧಿಗಾಗಿ ದಾನ ದತ್ತಿಗಳನ್ನು ನೀಡಿದ್ದಾರೆ. ಶಿವಗಂಗೆಯ ಹೊನ್ನಾದೇವಿ ಮೂರ್ತಿ ಮತ್ತು ಭೈರವಿಯವರ ಶಿಲ್ಪಗಳು ಹೊಯ್ಸಳ ಶೈಲಿಯ ಬಿಂಬಗಳಾಗಿವೆ.

**ವಿಜಯನಗರದ ಅರಸರು**

ಹೊಯ್ಸಳರ ರಾಜ್ಯ ನಾಶವಾಗಿ ಈ ಭಾಗದಲ್ಲಿ ಉಂಟಾದ ರಾಜಕೀಯ ನಿರ್ವಾತವನ್ನು ತುಂಬಿದ್ದು ವಿಜಯನಗರ ಸಾಮ್ರಾಜ್ಯ. ಹರಿಹರನು (೧೩೪೬-೧೩೫೬) ಸಂಗಮವಂಶದ ಮೊದಲ ದೊರೆಯಾಗಿದ್ದು ನೆಲಮಂಗಲದ ಕುಕ್ಕಲನಾಡನ್ನು ತನ್ನ ಆಳ್ವಿಕೆಯಲ್ಲಿ ಅಳವಡಿಸಿಕೊಂಡಿದ್ದನು ಎಂಬುದಕ್ಕೆ ನೆಲಮಂಗಲದ ಬಾಣಸವಾಡಿಯಲ್ಲಿ ಕ್ರಿ.ಶ. ೧೩೪೦ ರ (ನೆಲ - ೧೯) ಶಾಸನ ದೊರಕಿದೆ. ಹರಿಹರನ ಆಳ್ವಿಕೆಯ ಸಂದರ್ಭದಲ್ಲಿ ಕುಕ್ಕಲನಾಡನ್ನು ನಾಡಪ್ರಭು ಮಯಿಲೆಯನಾಯಕನು ಆಳ್ವಿಕೆ ಮಾಡುತ್ತಿದ್ದು ಈತನು 'ಮಹಾಮಂಡಲೇಶ್ವರ ವೀರಹರಿಯಪ್ಪಒಡೆಯ'ನು ತನ್ನ ಸ್ವಾಮಿಯೆಂದು ಹೇಳಿರುವುದನ್ನು ಈ ಶಾಸನ ತಿಳಿಸಿದೆ.[೧೪] ಈ ವೇಳೆಗಾಗಲೇ ಅವನು ರಾಜತ್ವದ ಸ್ಥಾನಮಾನ ಹೊಂದಿದ್ದನು ಎಂಬುದನ್ನು ಹೇಳತೊಡಗಿದೆ.

**ಎರಡನೇ ದೇವರಾಯ**(ಕ್ರಿ.ಶ.೧೪೨೬-೧೪೪೬)ನ ಕಾಲದಲ್ಲಿ ಈ ಪ್ರದೇಶದಲ್ಲಿ ಪ್ರಗತಿಪರ ಬದಲಾವಣೆಗಳಾದವು. ಇವನ ಮತ್ತೊಂದು ಹೆಸರು ಪ್ರೌಢದೇವರಾಯ ಆಗಿದ್ದು ಈತನ ಕಾಲದಲ್ಲಿ ಶೂನ್ಯ ಸಂಪಾದನೆ ನಡೆಯಿತು. ಇದರಿಂದ ವೀರಶೈವ ಪಂಥ ಹೆಚ್ಚು ಪ್ರಬಲವಾಗಿ ವೀರಭದ್ರಸ್ವಾಮಿಯ ಆರಾಧನೆ ಹೆಚ್ಚಾಯಿತು. ಈತನ ಅಧಿಕಾರವಧಿಯಲ್ಲಿ ಬುಕ್ಕನಾಯಕನು ಕೊಕ್ಕಲ ನಾಡನ್ನು ಆಳ್ವಿಕೆ ಮಾಡುತ್ತಿದ್ದನು.

ಅನಂತರ ದೇವರಾಯನ ಮಗ ಮಲ್ಲಿಕಾರ್ಜುನನು ಅಧಿಕಾರವನ್ನು ಸ್ವೀಕರಿಸಿದನು. ಇವನ ಕಾಲದಲ್ಲಿ ಜುಂಜನಾಯಕ ಎಂಬಾತ ನೆಲಮಂಗಲದ ನಾಯಕತನ ಹೊಂದಿದ್ದನೆಂದು ಕ್ರಿ.ಶ. ೧೪೬೪ ರ ಮಲ್ಲಿಕಾರ್ಜುನನ ಒಂದು ಶಾಸನ ತಿಳಿಸುತ್ತದೆ.[೧೫] ಇಲ್ಲಿ 'ಭೂಮಂಡನ' ಎಂಬ ಹೆಸರಿನ ದೊಡ್ಡ ಊರು ಇದ್ದು ಯುದ್ಧದ ಸಮಯದಲ್ಲಿ ನಾಶವಾಗಿದೆ ಎಂಬ ಉಲ್ಲೇಖವಿದೆ.

**ಕೃಷ್ಣದೇವರಾಯ**(ಕ್ರಿ.ಶ.೧೫೦೯-೧೫೨೯)ನು ವಿಜಯಶಾಲಿ ಅರಸನು ಉತ್ತಮ ಆಡಳಿತಗಾರನೂ ಧಾರ್ಮಿಕ ಸಹಿಷ್ಣನೂ ಆಗಿ ಕಲೆ ಮತ್ತುಸಾಹಿತ್ಯದ ಆರಾಧಕನೂ ಆಗಿದ್ದನು. ನೆಲಮಂಗಲ ತಾಲ್ಲೂಕಿನ ಕ್ರಿ.ಶ. ೧೫೧೫ ರ ತಾಮ್ರಶಾಸನವು ಶಿವಗಂಗೆಯ ಗಂಗಾಧರೇಶ್ವರ ದೇವರಿಗೆ ವಿಜಯನಗರದ ಅರಸ ಕೃಷ್ಣದೇವರಾಯನು ನೀಡಿದ ಗ್ರಾಮ ದಾನದ ಉಲ್ಲೇಖವಿದೆ. ಮಸಕಲ್ಲು, ಕೊರಟಗೆರೆ, ಹೊಸಹಳ್ಳಿ, ಕಂಬಾಳು, ಮಾಚನಹಳ್ಳಿ, ಬೇಡರಹಳ್ಳಿ ಮೊದಲಾದ ಗ್ರಾಮಗಳನ್ನು ಉಲ್ಲೇಖಿಸಿದೆ. ಕೂತಘಟ್ಟ ಊರನ್ನು ಮಾಡಿಸಿದ್ದನ್ನು ಸಹ ತಿಳಿಸಿದೆ.[೧೬] ಈ ಎಲ್ಲಾ ಊರುಗಳು ದಾನ ನೀಡಿದವುಗಳಾಗಿವೆ. ನೆಲಮಂಗಲ ತಾಲ್ಲೂಕಿನ ಅರಿಶಿನಕುಂಟೆ ಗ್ರಾಮದ ಆದಾಯವನ್ನು ಕೃಷ್ಣದೇವರಾಯನ ಪುಣ್ಯಾರ್ಥವಾಗಿ ಜಗ್ಗೆಯ ವೀರಣ್ಣಒಡೆಯ ಎಂಬ ಧಾರ್ಮಿಕ ವ್ಯಕ್ತಿಗೆ ದಾನ ಮಾಡಿದ್ದನ್ನು ತಿಳಿಸಿದೆ.

ಅಚ್ಯುತರಾಯನ ಕಾಲದಲ್ಲಿ ಶಿವಗಂಗೆಯ ಗಂಗಾಧರೇಶ್ವರ ದೇವಾಲಯಕ್ಕೆ ಈ ತಾಲ್ಲೂಕಿನ ಶ್ರೀಪತಿ ಹಳ್ಳಿಯನ್ನು ಅಚ್ಯುತರಾಯನ ಸೇವಕ ಕಟ್ಟಿಗೆಯ ಕಾಮಣನಾಯಕರು ಕೊಡುಗೆಯಾಗಿ ಕೊಟ್ಟಿದ್ದಾರೆ.[೧೭] ಈತನು ತನ್ನ ಅಧಿಕಾರವಧಿಯಲ್ಲಿ ಕೆಂಪೇಗೌಡನಿಗೆ ಯಲಹಂಕನಾಡಿನ ನಾಯಕತ್ವವನ್ನು ನೀಡಿದನು.

ಸದಾಶಿವರಾಯನು ಬಂತಿಯ ಬಸವಣ್ಣನಾಯಕರರಸರ ಮಗನಿಗೆ ಮಲೆನಾಡ ಗೂಳೂರು, ಮಂಣೆ ಸೀಮೆಯ ಶಿವಗಂಗೆಯ ಗಂಗಾಧರೇಶ್ವರ ದೇವರಿಗೆ ಸಲ್ಲುವ ಪುರಗಳು, ಕಂಬಾಳ ಮರುಳಸಿದ್ಧೇಶ್ವರಯ್ಯ ದೇವರ ಪುರ, ಮೇಲಣ ಗವಿಮಠಕ್ಕೆ ಸಲ್ಲುವ ಪುರಗಳನ್ನು ದಾನವಾಗಿ ನೀಡಿದ್ದನ್ನು ಕ್ರಿ.ಶ. ಸು. ೧೫೪೫ರ (ನೆಲ - ೮೩) ಶಾಸನ ತಿಳಿಸಿದೆ.

ವಿಜಯನಗರ ಅರಸರ ಆಡಳಿತದ ಕಾಲಕ್ಕೆ ನೆಲಮಂಗಲವು ಒಂದು ಸೀಮೆಯಾಗಿ ಮೇಲಸ್ತರದ ಆಡಳಿತ ವಿಭಾಗವಾಗಿತ್ತು. ಮಣ್ಣೆಯ ಸೀಮೆಗೆ ಶಿವಗಂಗೆ ವಿಷಯವಾಗಿ ಸೇರಿದ್ದು ಶೂರಗಿರಿ ಸ್ಥಳವಾಗಿ ವಿಜಯನಗರ ಅರಸರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದನ್ನು ತಿಳಿಯಬಹುದಾಗಿದೆ.

**ಯಲಹಂಕ ನಾಡ ಪ್ರಭುಗಳು**

ಯಲಹಂಕ ನಾಡಪ್ರಭುಗಳು ನೆಲಮಂಗಲದ ಕೆಲವು ಪ್ರದೇಶಗಳನ್ನು ಆಳ್ವಿಕೆ ಮಾಡಿ ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ. ಯಲಹಂಕವು ಇವರ ಮೊದಲ ರಾಜಧಾನಿಯಾಗಿತ್ತು. ಅನಂತರ ಮಾಗಡಿ ಮತ್ತು ಬೆಂಗಳೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸುತ್ತಮುತ್ತಲಿನ ಪ್ರದೇಶಗಳನ್ನು ಆಳ್ವಿಕೆಗೆ ಒಳಪವಡಿಸಿಕೊಂಡಿದ್ದರು.

ಯಲಹಂಕದ ಕೆಂಪೇಗೌಡನ ಕಾಲದಲ್ಲಿ ಶಿವಗಂಗೆ ವಿಶೇಷ ಮನ್ನಣೆ ಪಡೆದಿತ್ತು. ನಮಗೆ ಸಿಗುವ ಈ ವಂಶದ ಮೊದಲ ಶಾಸನವೆಂದರೆ ಶಿವಗಂಗೆ ಗಂಗಾಧರೇಶ್ವರ ದೇವಾಲಯದ ಬೃಹತ್ ಗಂಟೆಯ ಮೇಲಿರುವ ಕ್ರಿ.ಶ. ೧೫೭೮ ರ ಬರಹವಾಗಿದ್ದು, ಇದರಲ್ಲಿ ಕೆಂಪನಾಚೇಗೌಡನ ಹೆಸರಿನ ಉಲ್ಲೇಖವಿದೆ. ಕ್ರಿ.ಶ. ೧೫೯೭ ರ ತಾಮ್ರಪಟದಲ್ಲಿ ಇವನು ಉಲ್ಲೇಖಿತನಾಗಿದ್ದು ಇಮ್ಮಡಿ ಕೆಂಪೇಗೌಡನ ಅಜ್ಜ (ತಂದೆಯ ತಂದೆ)ಎಂದಿದೆ. ಹೀಗಾಗಿ ಈ ಗಂಟೆಯ ಮೇಲಣ ಶಾಸನವು ಕೆಂಪನಾಚೇಗೌಡನು ದಾನ ಮಾಡಿದ್ದನ್ನು ಅವನ ಮೊಮ್ಮಗನ ಕಾಲದಲ್ಲಿ ದಾಖಲಿಸಿದಂತೆ ಇದೆ. ಕೆಂಪೇಗೌಡನ ಆಡಳಿತಾವಧಿಯಲ್ಲಿ ಇವನ ಖಜಾನೆ ಶಿವಗಂಗೆಯಲ್ಲಿದ್ದು, ಸರ್ಕಾರದ ಹಣವೆಲ್ಲ ಶಿವಗಂಗೆಯ ಖಜಾನೆಯಲ್ಲಿ ಶೇಖರವಾಗುತ್ತಿತ್ತು.[೧೮] ಹೀಗೆ ಶಿವಗಂಗೆಯಲ್ಲಿ ಆಳ್ವಿಕೆ ಮಾಡಿದ ನೆನಪಿಗಾಗಿ ಕೆಂಪೇಗೌಡನ ಕಂಚಿನ ಪ್ರತಿಮೆಗಳನ್ನು ಸ್ಥಾಪಿಸಿರುವುದು ಗಮನಾರ್ಹವಾಗಿದೆ.

**ಮೈಸೂರಿನ ಒಡೆಯರು**

ಮೈಸೂರಿನ ಅರಸರು ನೆಲಮಂಗಲ ತಾಲ್ಲೂಕಿನ ಕೆಲವು ಪ್ರದೇಶಗಳನ್ನು ಮಾತ್ರ ಆಳ್ವಿಕೆಗೆ ಬಲಪಡಿಸಿಕೊಂಡರು. **ಒಂದನೇ ಚಾಮರಾಜನ** (ಕ್ರಿ.ಶ.೧೪೨೩೨-೫೯) ಆಳ್ವಿಕೆಯಲ್ಲಿ ಇಲ್ಲಿನ ಕೆಲವು ದೇವಾಲಯಗಳಿಗೆ ದಾನದತ್ತಿಗಳನ್ನು ನೀಡಿದ್ದಾನೆ. ಚಾಮರಾಜ ಒಡೆಯರ ರಾಣಿ ದೇವರಾಜಣ್ಣಿ (ದ್ಯಾವಜಂಮಣ್ಣಿ) ಯವರು ಶಿವಗಂಗೆಯ ಹೊನ್ನಾದೇವಿಗೆ ಚಿನ್ನದ ಕಂಠಾಭರಣವನ್ನು ದಾನ ನೀಡಿದ್ದಾರೆ. ಇವನ ನಂತರದ ಒಡೆಯರ ಆಳ್ವಿಕೆಯ ಬಗ್ಗೆ ದಾಖಲೆಗಳು ಇಲ್ಲಿ ಲಭ್ಯವಿಲ್ಲ.

**ಚಿಕ್ಕದೇವರಾಜ ಒಡೆಯರ** (ಕ್ರಿ.ಶ.೧೬೭೩-೧೭೦೪) ಅಧಿಕಾರಕ್ಕೆ ಬಂದರು. ಇವರು ಬೆಂಗಳೂರನ್ನು ಕ್ರಿ.ಶ. ೧೬೮೭ರಲ್ಲಿ ಮೊಘಲ್ ಅಧಿಕಾರಿ ಖಾಸಿಂಖಾನ್‌ನಿಂದ ಕೊಂಡರು. ಇದರಲ್ಲಿ ನೆಲಮಂಗಲದ ಪ್ರದೇಶಗಳು ಸೇರಿದ್ದವು. ಚಿಕ್ಕದೇವರಾಜ ಒಡೆಯರ ಕಾಲದಲ್ಲಿದ್ದ ೮೪ ಆಡಳಿತೀಯ ಘಟಕಗಳಲ್ಲಿ ನೆಲಮಂಗಲದ ನಿಜಗಲ್ಲು ಒಂದು ಘಟಕವಾಗಿದ್ದು. ಈ ಪ್ರದೇಶಕ್ಕೆ ದಾಸರಾಜಯ್ಯನನ್ನು ದಳವಾಯಿಯಾಗಿ ನೇಮಕ ಮಾಡಿದನು ಈ ಘಟಕದಿಂದ ಹೆಚ್ಚಿನ ಆದಾಯ ಬರುತ್ತಿತ್ತು. ಚಿಕ್ಕದೇವರಾರಜ ಒಡೆಯರ ಆಳ್ವಿಕೆಯ ಕಾಲದಲ್ಲಿ ಸೇವಕನಾದ

ಬಿಳಗುಲಿ ಕೆಂಪರಾಜೈನವರ ಕುಮಾರರು ಎನಿಸಿಕೊಂಡ ದಳವಾಯಿ ದಾಸರಾಜಯ್ಯನ ಕಾಲದಲ್ಲಿ ನಿಜಗಲ್ಲು ದುರ್ಗಕ್ಕೆ ಮೊದಲು ಇದ್ದ ಮಣ್ಣಿನ ಕೋಟೆಗೆ ಬದಲಾಗಿ ಕಲ್ಲಿನ ಕೋಟೆ ಕಟ್ಟಲು ಕ್ರಿ.ಶ.೧೯೯೮ರಲ್ಲಿ ಪ್ರಾರಂಭಿಸಿದರು.ಕ್ರಿ.ಶ.೧೭೦೭ರವರಿಗೆ ೭ ವರ್ಷಗಳ ಕಾಲ ಕೋಟೆಯನ್ನು ಕಟ್ಟಲಾಗಿ, ದುರ್ಗದ ಮೇಲಿನ ಲಕ್ಷ್ಮೀ ನರಸಿಂಹ ದೇವಾಲಯ, ವಿಘ್ನೇಶ್ವರಗುಡಿಗಳು ನಿರ್ಮಾಣಗೊಂಡವು. ನಿಜಗಲ್ಲಿನ ಅಧಿಕಾರಿ ಬಿಳಗುಲಿ ದಾಸರಾಜಯ್ಯನು ನೆಲಮಂಗಲ ತಾಲ್ಲೂಕಿನ ರಾಜಕೀಯ ಇತಿಹಾಸದಲ್ಲಿ ಪ್ರಮುಖ ಸ್ಥಾನಗಳಿಸುತ್ತಾನೆ.

**ಹೈದರಾಲಿ ಮತ್ತು ಟಿಪ್ಪು ಸುಲ್ತಾನರು**

ದಳವಾಯಿಗಳ ಆಡಳಿತದ ನಂತರ ಹೈದರಾಲಿಯು ಮೈಸೂರು ಸಂಸ್ಥಾನವನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡನು. ನೆಲಮಂಲಗದ ನಿಜಗಲ್ಲು ದುರ್ಗಕ್ಕೆ ಕಿಲ್ಲೇದಾರನನ್ನಾಗಿ ಸರ್ದಾರ್‌ಖಾನ್‌ನನ್ನು ನೇಮಕ ಮಾಡಿದನು. ಮರಾಠ ಪೇಶ್ವೆ ಮಾಧವರಾಯನು ಕ್ರಿ.ಶ. ೧೭೭೦ರಲ್ಲಿ ಈ ಕೋಟೆಗೆ ಮುತ್ತಿಗೆ ಹಾಕಿದನು. ಕೋಟೆ ವಶವಾಗದೇ ಮಾಧವರಾಯನು ಚಿತ್ರದುರ್ಗದ ಪಾಳೇಯಗಾರನಾಗಿದ್ದ ಮದಕರಿ ನಾಯಕನ ಸಹಾಯ ಕೋರಿದನು. ಮದಕರಿನಾಯಕನು ಮರ್ಷಿಯುದ್ಧವನ್ನು ಕೈಗೊಂಡು,ಉಡಗಳ ಸಹಾಯದಿಂದ ಹಿಂಬದಿಯಿಂದ ಕೋಟೆ ಹತ್ತಿ ಸರ್ದಾರ್‌ಖಾನ್‌ನನ್ನು ಬಂಧಿಸಿ ಕೋಟೆಯನ್ನು ವಶಪಡಿಸಿಕೊಂಡು ಮಾಧವರಾಯನಿಗೆ ಕೊಟ್ಟನು [೨](ಮರ್ಷಿ ಯುದ್ಧ ರಾತ್ರಿಯ ವೇಳೆ ಪಂಜನ್ನು ಹತ್ತಿಸಿ, ಸುಳಿವು ನೀಡದೇ ಆನಂತರ ಬೇರೆ ಕಡೆಯಿಂದ ಬಂದು ಧಾಳಿ ಮಾಡುವುದು) ಕ್ರಿ.ಶ.೧೭೭೪ರಲ್ಲಿ ಹೈದರಾಲಿಯು ನಿಜಗಲ್ಲನ್ನು ಮತ್ತೇ ಮರಾಠರಿಂದ ವಶಪಡಿಸಿಕೊಂಡು ಹಾಳಾಗಿದ್ದ ಗ್ರಾಮವನ್ನು ನಿರ್ಮಿಸಿದನು. ಅನಂತರ ಟಿಪ್ಪುವಿನ ಆಡಳಿತಕ್ಕೆ ಕ್ರಿ.ಶ.೧೭೮೧ರಲ್ಲಿ ಒಳಪಟ್ಟಿತು. ಟಿಪ್ಪುವಿನ ಮರಣ ನಂತರ ಮೈಸೂರು ಸಂಸ್ಥಾನವು ಕ್ರಿ.ಶ.೧೭೯೯ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಬ್ರಿಟೀಷರ ಸಹಾಯದಿಂದ ದೊರಕಿತು. ಬ್ರಿಟಿಷರಿಗೂ ಮತ್ತು ಮಹಾರಾಜರಿಗೆ ಆದ ಒಪ್ಪಂದದ ಪ್ರಕಾರ ಪರೋಕ್ಷವಾಗಿ ಆಡಳಿತ ನಡೆಸುತ್ತಿದ್ದು ಬ್ರಿಟೀಷರು ತಮಗೆ ಅನುಕೂಲಕರವಲ್ಲದ ಕೆಲವು ದುರ್ಗಗಳನ್ನು, ಕೋಟೆಗಳನ್ನು ನಾಶ ಮಾಡಿದರು ಆ ದಿನದಲ್ಲಿ ನಿಜಗಲ್ಲು ಕೋಟೆಯನ್ನೂ ನಾಶಪಡಿಸಲಾಯಿತು.

**ಮುಮ್ಮಡಿ ಕೃಷ್ಣರಾಜ ಒಡೆಯರಿಗೆ** ಕ್ರಿ.ಶ.೧೮೧೩ರಲ್ಲಿ ನೇರ ಆಡಳಿತ ಕೈಗೆ ಬಂದ ಮೇಲೆ ಆರ್ಥಿಕತೆಯ ದೃಷ್ಟಿಯಿಂದ ಆಡಳಿತವನ್ನು ವಿಸ್ತರಿಸಿ ರಾಜ್ಯವನ್ನು ೬ ಪೌಜುಗಳಾಗಿ ವಿಂಗಡಿಸಿ ೧೨೨ ತಾಲ್ಲೂಕುಗಳಾಗಿ ವಿಂಗಡಿಸಿದರು. ಆಗ ನಿಜಗಲ್ಲು ಒಂದು ತಾಲ್ಲೂಕಾಗಿ ಕ್ರಿ.ಶ. ೧೮೩೩ರವರೆಗೂ ಮುಂದುವರಿಯಿತು. ನಂತರ ತಾಲ್ಲೂಕು ರದ್ದಾಗಿ ಹೋಬಳಿ ಆಯಿತು. ಇದರಲ್ಲಿ ಹೆಗ್ಗುಂದ, ಲಕ್ಕೂರು, ನರಸಿಂಹಪುರ ನರಸೀಪುರ ಬಿಲ್ಲಿನಕೋಟೆ, ದೇವರ ಹೊಸಹಳ್ಳಿ, ಶಿವಗಂಗೆ ಸೇರಿದವು ನಂತರ ಸೋಂಪುರ ಹೋಬಳಿ ಕೇಂದ್ರ ಬಂದ ಮೇಲೆ ನಿಜಗಲ್ಲು ಅದಕ್ಕೆ ಸೇರಿತು. ನಂತರ ಗ್ರಾಮ ಪಂಚಾಯಿತಿಯಾಗಿ ಮುಂದುವರೆಯಿತು.

ಒಟ್ಟಾರೆಯಾಗಿ ನೆಲಮಂಗಲ ತಾಲ್ಲೂಕಿನ ಪ್ರದೇಶಗಳು ಗಂಗರಿಂದ ಮೊದಲುಗೊಂಡು ಮೈಸೂರಿನ ಒಡೆಯರ ಕಾಲದವರೆಗೂ ಆಳಿಡಳಿತಕ್ಕೆ ಒಳಪಟ್ಟಿರುವುದನ್ನು ಗಮನಿಸಬಹುದಾಗಿದೆ. ಈ ರಾಜರು ಆಳಿ ಅಳಿದರೂ ಇವರು ಬಿಟ್ಟು ಹೋಗಿರುವ ಕುರುಹುಗಳು ನೆಲಮಂಗಲ ತಾಲ್ಲೂಕಿನ ಪ್ರದೇಶಗಳ ಸಾಂಸ್ಕೃತಿಕ ಅಧ್ಯಯನಕ್ಕೆ ದಾರಿದೀಪವಾಗಿವೆ.

**೨.೪ ಶಾಸನಗಳ ಪರಿಚಯ**

ಯಾವುದೇ ಒಂದು ಪ್ರದೇಶದ ಭೌಗೋಳಿಕ, ಚಾರಿತ್ರಿಕ, ರಾಜಕೀಯ, ಧಾರ್ಮಿಕ ಮತ್ತು ಸಾಂಸ್ಕೃತಿಕ ಇತಿಹಾಸವನ್ನು ತಿಳಿಯಲು ಶಾಸನಗಳು ಬಹುಮುಖ್ಯ ಸಾಧನಗಳಾಗಿವೆ. ನೆಲಮಂಗಲ ತಾಲ್ಲೂಕಿನಲ್ಲಿ ಪ್ರಾಚೀನ

ಕಾಲದಿಂದಲೂ ಶಾಸನಗಳು ಕಂಡುಬರುತ್ತವೆ. ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟಗಳಲ್ಲದೆ ಬೇರೆ ಬೇರೆ ಕಡೆಗಳಲ್ಲಿ ಬಿಡಿಬಿಡಿಯಾಗಿ ಪ್ರಕಟವಾಗಿರುವ ಶಾಸನಗಳೂ ಸೇರಿ ನೆಲಮಂಗಲ ತಾಲ್ಲೂಕಿನ ಒಟ್ಟು ಪ್ರಕಟಿತ ಶಾಸನಗಳ ಸಂಖ್ಯೆ ೧೯೦. ಇವುಗಳಲ್ಲಿ ಬಹಳ ಹಿಂದೆ ನೆಲಮಂಗಲ ತಾಲ್ಲೂಕಿನಿಂದ ತಪ್ಪಿಹೋದ ಪ್ರದೇಶಗಳ ಶಾಸನಗಳನ್ನು ಹೊರತುಪಡಿಸಿದರೆ (ಬೆಂಗಳೂರು ಜಿಲ್ಲೆಯನ್ನು ಎರಡು ಜಿಲ್ಲೆಗಳನ್ನಾಗಿ ೧೯೮೭-೮೮ರಲ್ಲಿ ವಿಂಗಡಿಸಿದಾಗ, ನೆಲಮಂಗಲ ತಾಲ್ಲೂಕಿನ ದಾಸನಪುರ ಹೋಬಳಿ ಇಡಿಯಾಗಿ ಬೆಂಗಳೂರು ದಕ್ಷಿಣ ತಾಲ್ಲೂಕಿಗೆ ಸೇರಿಹೋಗಿದೆ) ಉಳಿಯುವ ಶಾಸನಗಳ ಪಾಲು ೧೭೯. ಇವುಗಳಲ್ಲಿ ತಾಮ್ರಶಾಸನಗಳು - ೧೦, ಆಭರಣ ಮತ್ತು ಪಾತ್ರೆಗಳ ಮೇಲಿನ ಶಾಸನಗಳು - ೨೧, ಉಳಿದ ೧೪೮ ಶಿಲಾಶಾಸನಗಳು. ಇವುಗಳಲ್ಲಿ ಅಸ್ಪಷ್ಟತೆಯ ಕಾರಣದಿಂದ ಅಧ್ಯಯನಕ್ಕೆ ಸಹಾಯಕವಾಗದಿರುವವು ೮೦. ೭೮ ಶಾಸನಗಳು ಮಾತ್ರ ಅಧ್ಯಯನಕ್ಕೆ ಸಹಾಯಕವಾಗಿದ್ದು,[೨೨] ಇಲ್ಲಿ ಕೆಲವನ್ನು ಪರಿಚಯಿಸಲು ಪ್ರಯತ್ನಿಸಲಾಗಿದೆ.

ನೆಲಮಂಗಲ ತಾಲ್ಲೂಕಿನ ಐತಿಹಾಸಿಕ ಘಟ್ಟಿತನವನ್ನು ಹೆಚ್ಚಿಸಲು ಕಾರಣವಾಗಿರುವ ಶಾಸನಗಳಲ್ಲಿ ಸದ್ಯಕ್ಕೆ ಅತ್ಯಂತ ಪ್ರಾಚೀನವಾದ ಶಾಸನವೆಂದರೆ ಕ್ರಿ.ಶ. ೬೫೦ ರ ಮಣ್ಣೆಯ ಶ್ರೀವಿಕ್ರಮನ ಶಾಸನ. ಇದು ಇತ್ತೀಚೆಗೆ ದೊರೆಕಿದ್ದು, ನೆಲಮಂಗಲ ತಾಲ್ಲೂಕಿನ ಅತ್ಯಂತ ಪ್ರಾಚೀನ ತಾಮ್ರಶಾಸನವೂ ಆಗಿದೆ. ಶ್ರೀವಿಕ್ರಮನ ಮಣ್ಣೆಯ ತಾಮ್ರಪತ್ರಗಳು ಕಾಶ್ಯಪ ಗೋತ್ರದ ಭೂತಶರ್ಮ ಎಂಬ ಬ್ರಾಹ್ಮಣನಿಗೆ ತಳ್ಗಿಳಿಯ ಬಳಿಯ ವೆಲ್ಲಾರಿ ಎಂಬ ಗ್ರಾಮವನ್ನು ದಾನವಾಗಿ ನೀಡಿರುವುದನ್ನು ದಾಖಲಿಸಿವೆ. ಈ ಶಾಸನವು ಜಿನಸ್ತುತಿಯಿಂದ ಆರಂಭವಾಗಿ, ಕೊಂಗುಣಿವರ್ಮನ ಉಲ್ಲೇಖದಿಂದ ಆಳುವ ಕೊನೆಯ ಅರಸನವರೆಗಿನ ವಂಶಾವಳಿಯನ್ನು ದಾಖಲಿಸಿ ದಾನದ ಪ್ರಸ್ತಾಪಕ್ಕೆ ಬಂದಿದೆ. ಆದರೆ ದಾನದ ಊರು ತಿಳಿದಿಲ್ಲ. ಶ್ರೀವಿಕ್ರಮನ ಒಬ್ಬ ಅಧಿಕಾರಿಯಾದ ನೇಯವಲ್ಲವರಾಜ ಉರುಫ್ ಮಾರಿಕ್ಕತಿ ಭೂತಶರ್ಮನಿಗೆ ಆಯತಾಳ ಬರೆದ ತಾಮ್ರಶಾಸನವನ್ನು ದಾನವಾಗಿ ನೀಡಿ ಗ್ರಾಮಗಳನ್ನು ಉಲ್ಲೇಖಿಸಲಾಗಿದೆ. ಮಣ್ಣೆಯು ಗಂಗರಸರ ರಾಜಬೀಡಾಗಿದ್ದು, ಶ್ರೀವಿಜಯ ಜಿನಾಲಯ, ಅಕ್ಕ-ತಂಗಿಯರ ಗುಡಿಯಲ್ಲಿ ಉಳಿದಿರುವ ದೇವಾಲಯ, ಸೂರ್ಯ, ಸಪ್ತಮಾತೃಕೆಯರು, ಗಣೇಶ ಇತ್ಯಾದಿ ವಿಗ್ರಹಗಳು ಪ್ರಾಮುಖ್ಯತೆ ಪಡೆದಿದ್ದು, ಇಲ್ಲಿನ ಶಾಸನಗಳೂ ಇದಕ್ಕೆ ದಾಖಲೆಗಳಾಗಿ ಪುಷ್ಠಿ ನೀಡುತ್ತವೆ.[೨೩]

ಮಣ್ಣೆಯಲ್ಲಿ ಶ್ರೀವಿಕ್ರಮನ ಶಾಸನ ದೊರಕುವವರೆಗೆ ಮೈಲನಹಳ್ಳಿ ಹತ್ತಿರದ ತೋಟಗೆರೆಯ ಶ್ರೀಪುರುಷನ ಶಾಸನಗಳೇ ಈ ತಾಲ್ಲೂಕಿನ ಪ್ರಾಚೀನ ಶಾಸನಗಳಾಗಿದ್ದವು. ಮಣ್ಣೆಯಲ್ಲಿ  ಗಂಗ ಯುವರಾಜ ಮಾರಸಿಂಹನ ತಾಮ್ರಶಾಸನ ಕ್ರಿ.ಶ. ೭೯೭ ರಲ್ಲಿ ದೊರಕಿದ್ದು, ಗಂಗ ವಂಶಾವಳಿಯನ್ನು ನೀಡುವ ಉದ್ದೇಶ ಹೊಂದಿವೆ. ಅಲ್ಲದೇ ಮಾರಸಿಂಹನು ತನ್ನ ಸಾಮಂತ ಶ್ರೀವಿಜಯನು ಮಾನ್ಯ ನಗರದಲ್ಲಿ ಕಟ್ಟಿಸಿದ್ದ ಜಿನೇಂದ್ರ ಭವನದ ದೇವಭೋಗಕ್ಕಾಗಿ 'ಕಿರುವೆಕ್ಕೂರ' ಗ್ರಾಮವನ್ನು ದಾನವಾಗಿ ನೀಡಿರುವುದನ್ನು ಉಲ್ಲೇಖಿಸಿದೆ. ಇದು ಈಗ ಗ್ರಾಮವನ್ನು ಗುರುತಿಸಲು ಸಾಧ್ಯವಾಗಿಲ್ಲ. ಈ ಶಾಸನವು ಎರಡನೇ ಮಾಧವನು ಕದಂಬರ ಕೃಷ್ಣವರ್ಮನ ತಂಗಿಯನ್ನು ಮದುವೆಯಾಗಿದ್ದ ವಿಷಯವನ್ನೂ, ಅಲ್ಲದೇ ಶಿವಮಾರನು ಸಕಲನಾಟಕ ವಿಷಯಗಳಲ್ಲಿ ಪರಿಣತನಾಗಿದ್ದನೆಂಬ ವಿಷಯವನ್ನು ತಿಳಿಸುತ್ತದೆ. ಅದೇ ಶಾಸನದಿಂದ ತಿಳಿಯುತ್ತದೆ.[೨೪] ಅದೇ ರೀತಿ ಈ ಶಾಸನದ ಲೇಖಕನಾದ 'ಸರ್ವ್ವಕಲಾಧಾರಭೂತ ಚಿತ್ರ ಕಲಾಭಿಜ್ಞೇಯ ವಿಶ್ವಕರ್ಮಾಚಾರ್ಯ'ನಿಗೆ ದಾನ ನೀಡಿದ್ದನ್ನು ಸಹಾ ಉಲ್ಲೇಖಿಸಿದೆ. ಅನಂತರ ಈ ಶಾಸನದಿಂದ ಶ್ರೀವಿಜಯ ಜಿನಾಲಯದಲ್ಲಿ ವಾರವಿಲಾಸಿನಿಯರಿಂದ ರಚಿಸಲ್ಪಟ್ಟ ನೃತ್ಯ ಗೀತವಾದ್ಯಗಳ ಸೇವೆ ನಡೆಯಲಾಗುತ್ತಿತ್ತೆಂಬ ಅಂಶವನ್ನು ತಿಳಿಯಬಹುದು.

ಕ್ರಿ.ಶ. ಸು. ೮೦೧ ರ ಮಾರಸಿಂಹನ ಮತ್ತೊಂದು ತಾಮ್ರಶಾಸನ ಮಣ್ಣೆಯಲ್ಲೇ ಇತ್ತೀಚಿಗೆ ದೊರಕಿದೆ. ಈ ಶಾಸನವನ್ನೂ 'ವಿಶ್ವಕರ್ಮಾಚಾರ್ಯ'ನು ಬರೆದಿದ್ದು. ಈ ಶಾಸನವು ಮಾರಸಿಂಹನು ಕ್ರಿ.ಶ. ೮೦೧ ರಲ್ಲೂ ಯುವರಾಜನೇ ಆಗಿದ್ದುದನ್ನು ಪ್ರಸ್ತಾಪಿಸುತ್ತದೆ. ಯುವರಾಜ ಮಾರಸಿಂಹನು ಮಾನ್ಯಪುರದಲ್ಲಿದ್ದಾಗ, ಅಲ್ಲಿನ ಶ್ರೇಷ್ಠಿಗಣ ನಿರ್ಮಿಸಿದ್ದ ಸೂರ್ಯದೇವಾಲಯಕ್ಕೆ ಪೊನ್ನುಡಿಕೆ ವಿಷಯದ ಮಸೆಕ್ಕಲಿಯನ್ನು ಸರ್ವಬಾಧಾ ಪರಿಹಾರವಾಗಿ ನೀಡಿರುವುದನ್ನು ದಾಖಲಿಸಿದೆ. ಮಾನ್ಯಪುರದ ಶ್ರೇಷ್ಠಿಗಣವು ನ್ಯಾಯಯುತವಾಗಿ ಸಂಪಾದಿಸಿದ ಹಣದಿಂದ ನಿರ್ಮಿಸಿದ 'ಅರ್ಹತ್ತ್ವತಿ' ಮಂದಿರ ಈಗ ಇಲ್ಲ. ಆದರೆ ಬಹುತೇಕ ಈ ದೇವಾಲಯದಲ್ಲಿ ಪ್ರತಿಷ್ಠಾಪಿತವಾಗಿದ್ದ ಸೂರ್ಯವಿಗ್ರಹ ಮಣ್ಣೆಯಲ್ಲಿ ಇತ್ತೀಚೆಗೆ ದೊರೆತಿದ್ದು, ಈಗ ಅದು ಊರಿನ ಆಚೆ ರಸ್ತೆಬದಿಯಲ್ಲಿ ಸೂರ್ಯನ ಅಡಿಯಲ್ಲೇ ರಕ್ಷಣೆ ಪಡೆದಿದೆ. ಆ ಸೂರ್ಯದೇವಾಲಯದ ದಾನವಾಗಿ ಪಡೆದಿದ್ದ ಮಸೆಕ್ಕಲಿಯು, ಈಗ ತುಮಕೂರು ತಾಲ್ಲೂಕು ಮತ್ತು ನೆಲಮಂಗಲ ತಾಲ್ಲೂಕುಗಳ ಗಡಿಯಲ್ಲಿರುವ 'ಮಸಕಲ್ಲು' ಎಂದು ಗುರುತಿಸಬಹುದಾಗಿದೆ. ಅನಂತರದ ಐದನೆಯ ವರ್ಷದಲ್ಲಿ ಅದೇ ಸೂರ್ಯದೇವಾಲಯಕ್ಕೆ ಮಾರಸಿಂಹನು ಬಾಲಾದಿತ್ಯನ ಕೋರಿಕೆಯ ಮೇರೆಗೆ ಮಾನ್ಯ ವಿಷಯದ ವಾವತ್ತೂರನ್ನು ಸರ್ವಭಾಧಾ ಪರಿಹಾರವಾಗಿ ನೀಡಿದ್ದನ್ನು ದಾಖಲಿಸುವ ಶಾಸನವು ದಾನಗ್ರಾಮದ ಆದಾಯದ ಹತ್ತನೆಯ ಒಂದು ಭಾಗವನ್ನು ಅಲ್ಲಿನ ಅಥರ್ಮ ಚರಣದ ವಸಿಷ್ಠಗೋತ್ರದ ಕುಮಾರ ಶರ್ಮನಿಗೆ ನೀಡಿರುವುದನ್ನು ಸ್ಪಷ್ಟೀಪಡಿಸಿದೆ.

ಗಂಗರ ಕಾಲದಲ್ಲಿ ಶಿವ ದೇವಾಲಯಗಳು, ಬಸದಿಗಳು, ಸೂರ್ಯದೇವಾಲಯಗಳು, ವಿಷ್ಣುದೇವಾಲಯಗಳು ಎಲ್ಲವೂ ನಿರ್ಮಾಣಗೊಂಡಿವೆ. ಧಾರ್ಮಿಕವಾಗಿ ಸ್ವತಃ ಜೈನರಾದರೂ ಗಂಗರು ಎಲ್ಲ ಮತ-ಧರ್ಮಗಳ ಬಗ್ಗೆ ಸಮಾನ ಪ್ರೀತಿ ಮತ್ತು ಶ್ರದ್ಧೆಗಳನ್ನಿರಿಸಿಕೊಂಡಿದ್ದರೆನ್ನುವುದಕ್ಕೆ ಮಣ್ಣೆಯ ಶಾಸನಗಳು ಬಹುಮುಖ್ಯ ದಾಖಲೆಗಳಾಗುತ್ತವೆ.[೨೫]

ಮತ್ತೊಂದು ತಾಮ್ರಶಾಸನ ಮಣ್ಣೆಯಲ್ಲಿ ದೊರಕಿದ್ದು ಕ್ರಿ.ಶ. ೮೦೨ ರ ಕಾಲದ್ದಾಗಿದ್ದು (ಶಕವರ್ಷ ೭೨೪) ಕ್ರಿ.ಶ. ೮೦೧ ರ ಶಾಸನಕ್ಕೂ ಮತ್ತು ಕ್ರಿ.ಶ. ೮೦೨ ರ ಶಾಸನಕ್ಕೂ ಕೇವಲ ಕೆಲವು ತಿಂಗಳುಗಳ ವ್ಯತ್ಯಾಸ ಇರುವುದು ಗಮನರ್ಹಾವಾಗಿದೆ. ಈ ಶಾಸನವು ರಾಷ್ಟ್ರಕೂಟ ಪ್ರಭೂತವರ್ಷನ ಆಳ್ವಿಕೆಯ ಕಾಲಕ್ಕೆ ಸಂಬಂಧಿಸಿದ್ದು, ಅವನ ತಮ್ಮ ರಣಾವಲೋಕ ಕಂಬಯ್ಯನು ಮಾನ್ಯಪುರದ ಪಶ್ಚಿಮ ಭಾಗದಲ್ಲಿದ್ದ ಜಿನಾಲಯಕ್ಕೆ ಎಡೆದಿಂಡೆ ವಿಷಯದ 'ಪೆರ್ಪ್ಪಡಿಯೂರ 'ನ್ನು ರಂಗಭೋಗಕ್ಕಾಗಿ ದಾನ ನೀಡಿರುವುದನ್ನು ಉಲ್ಲೇಖಿಸಿದೆ. ಗಂಗ ಯುವರಾಜ ಮಾರಸಿಂಹನ ಕ್ರಿ.ಶ. ೮೦೧-೮೦೨ (ಶಕವರ್ಷ ೭೨೩) ರ ಶಾಸನ ಮತ್ತು ರಾಷ್ಟ್ರಕೂಟ ಗೋವಿಂದನ ಕ್ರಿ.ಶ. ೮೦೨ ರ (ಶಕವರ್ಷ ೭೨೪) ಶಾಸನಗಳನ್ನೂ ಗಮನಿಸಿದಾಗ ಶಕವರ್ಷ ೭೨೩ ಮತ್ತು ೭೨೪ ರ ನಡುವಿನ ಅವಧಿಯಲ್ಲಿ ಗಂಗ ಸಾಮ್ರಾಜ್ಯವು ಸಂಪೂರ್ಣವಾಗಿ ರಾಷ್ಟ್ರಕೂಟರ ಆಳ್ವಿಕೆಯ ವ್ಯಾಪ್ತಿಗೆ ಒಳಪಟ್ಟಿತು ಎಂದು ತಿಳಿಯುತ್ತದೆ.[೨೬]

ಕ್ರಿ.ಶ. ೮೦೩ ರ ಶಾಸನ ಇಡೀ ಕರ್ನಾಟಕದಲ್ಲಿ ರಂಗಭೋಗ ವಿಷಯ ಇರುವ ಮೊಟ್ಟ ಮೊದಲ ಉಲ್ಲೇಖವಾಗಿದೆ. ಈ ಶಾಸನದಲ್ಲಿ ರಂಗಭೋಗದ ಪ್ರಸ್ತಾಪ ವಿಶೇಷವಾಗಿದೆ. ದೇವರಿಗೆ ಎರಡು ರೀತಿಯ ಸೇವೆ ಮಾಡುವುದು ಜನರ ನಂಬಿಕೆ.

೧. ಅಂಗ ಭೋಗ:- ಪ್ರತಿರೂಪಕವಾಗಿ ಜೀವವಿರುವ ಶಕ್ತಿಗೆ ಸೇವೆ ಮಾಡುವುದು. ದೈಹಿಕವಾಗಿ ಸ್ನಾನ, ಬಟ್ಟೆ, ಆಹಾರ ನೈವೇದ್ಯ ಮಾಡುವುದು.

೨. ರಂಗಭೋಗ:- ವೇದಿಕೆಯ ಮೂಲಕ ಖುಷಿಪಡಿಸುವುದರ ಮೂಲಕ ಸೇವೆ ಸಲ್ಲಿಸುವುದು. ಸಂಗೀತ, ಗೀತೆ ಗಾಯನ, ನೃತ್ಯದ ಮೂಲಕ ಸೇವೆ ಸಲ್ಲಿಸುವುದು. ಇದಕ್ಕೆ ಸಾಕ್ಷಿಯಾಗಿ ಸೂಳೆಯರ ಗುಡಿಯಿದೆ. ಇದರ ಬಗ್ಗೆ ಈ ಶಾಸನ ತಿಳಿಸುತ್ತದೆ.

ಮತ್ತೊಂದು ತಾಮ್ರಶಾಸನ ನೆಲಮಂಗಲ ತಾಲ್ಲೂಕಿನ ಶಿವಗಂಗೆಯ ಗಂಗಾಧರೇಶ್ವರ ದೇವರಿಗೆ ವಿಜಯನಗರದ ಅರಸು ಕೃಷ್ಣದೇವರಾಯನು ನೀಡಿದ ಗ್ರಾಮದಾನ ಉಲ್ಲೇಖವಾಗಿದೆ. ಈ ಶಾಸನದ ಲೇಖಕ ಮಲ್ಲಣ. ಕ್ರಿ.ಶ. ೧೫೧೫ ರ ಈ ಶಾಸನವು ಉಲ್ಲೇಖಿಸಿರುವಂತೆ ದಾನವಾಗಿ ನೀಡಲ್ಪಟ್ಟು, ಉಲ್ಲೇಖಿಸಿರುವ ಹಲವು ಗ್ರಾಮಗಳ ಹೆಸರು ಮಾತ್ರ ಸ್ವಲ್ಪ ಮಟ್ಟಿಗೆ ಬದಲಾವಣೆ ಹೊಂದಿವೆ. ಮಸಕಲ್ಲು, ಕೊರಟೀಕೆರೆ, ತಮ್ಮಡಿಹಳ್ಳಿ, ಚೋಳಮಾದನಹಳ್ಳಿ, ಕಂಬಾಳು, ಹೊಸಹಳ್ಳಿ, ಬೇಡರಹಳ್ಳಿ, ದೇವರಹಳ್ಳಿ, ವೀರಸಾಗರ, ಗುಟಗೇರೆ, ಬರಗೇಹಳ್ಳಿ, ಗೂಳೂರ ಸ್ಥಳದ ಹೊಳೆಕಲ್ಲು, ಮಾಚನಹಳ್ಳಿ, ಕೆಂಚನಹಳ್ಳಿ, ಹುರುಳಿಹಳ್ಳಿ, ತುಮಕೂರು ಸ್ಥಳದ ಕಬ್ಬುಗೆರೆ, ಸಂಗೆಹಳ್ಳಿ, ಹಣಬೆ ಸ್ಥಳದ ಕಂನಸವಾಡಿ. ಇದೇ ಶಾಸನವು ಕುತಗಟವನ್ನು ಮಾಡಿಸಿದ್ದನ್ನೂ ಉಲ್ಲೇಖಿಸಿದೆ. ಈ ಕುತಗಟ ಶಿವಗಂಗೆಯ ವಾಯುವ್ಯಕ್ಕಿರುವ ದೇವಗಾನಹಳ್ಳಿಗೆ ಮೊದಲೇ ಸಿಕ್ಕುವ ಕೂತಘಟ್ಟ ಎಂದು ಭಾವಿಸಬಹುದು. ಮುಸಲ್ಮಾನರೇ ಅಧಿಕವಾಗಿರುವ ಈ ಊರು ಕ್ರಿ.ಶ. ೧೫೧೫ ರಲ್ಲೆ ನಿರ್ಮಾಣವಾಗಿರುವುದನ್ನು ತಿಳಿಯಬಹುದು. ಹೀಗೆ ಈ ಮೇಲಿನ ಗ್ರಾಮಗಳ ಹೆಸರುಗಳು ಈ ಶಾಸನದಲ್ಲಿ ಉಲ್ಲೇಖವಾಗಿವೆ.[೨] ಈಗಲೂ ಈ ಗ್ರಾಮಗಳು ಸ್ವಲ್ಪ ಬದಲಾವಣೆಯೊಂದಿಗೆ ಹಾಗೆಯೇ ಉಳಿದುಕೊಂಡಿವೆ.

ಕ್ರಿ.ಶ. ೧೫೫೧ ರ ಬೂದಿಹಾಳಿನ ತಾಮ್ರಶಾಸನ, ವಿಜಯನಗರದ ಅರಸನಾದ ಶ್ರೀರಂಗನ ಮಕ್ಕಳಲ್ಲಿ ಒಬ್ಬನಾದ ತಿರುಮಲರಾಯ ಮತ್ತು ಅವನ ಹೆಂಡತಿ ಚನ್ನಯ್ಯ ದೇವಿಯರು ಹಸ್ತಿನಾವತಿಗೆ ಸೇರಿದ ಪೆನುಗೊಂಡೆ ರಾಜ್ಯದ ಗೂಳೂರು ಸೀಮೆಯ ಮರುಗುಲು ನಾಡಿನ ಸಿಲ್ಲಘಟ್ಟ ಪ್ರತಿನಾಮಧೇಯ ಶ್ರೀನಿವಾಸಪುರವನ್ನು ಅದರ ನೃಸಿಂಹಪುರ ಪಾಳ್ಯದ ಜೊತೆಗೆ ರಾಮದೇವರ ಸನ್ನಿಧಿಯಲ್ಲಿ ೧೮ ವೃತ್ತಿಗಳನ್ನಾಗಿ ವಿಂಗಡಿಸಿ ಹಲವು ಬ್ರಾಹ್ಮಣರಿಗೆ ದಾನ ನೀಡಿರುವುದನ್ನು ಈ ಶಾಸನ ಉಲ್ಲೇಖಿಸಿದೆ. ಈ ಶಾಸನವನ್ನು ವೀರಯ್ಯ ಗಣಪಾಚಾರ್ಯ ಬರೆದವರಾಗಿದ್ದಾರೆ.

ನೆಲಮಂಗಲ ತಾಲ್ಲೂಕಿನ ವಿಶೇಷವಾದ ಮಹತ್ವದ ತಾಮ್ರಶಾಸನ ಸಂಪತ್ತನ್ನು ಹೊಂದಿದ್ದು ವೀರಗಲ್ಲುಗಳ ಅಧ್ಯಯನಕ್ಕೆ ಮಾಹಿತಿ ದೊರಕಿಸಲು ಸಾಧ್ಯವಾಗಿಲ್ಲ. ಏಕೆಂದರೆ ಗಂಗರ ಕಾಲದ ಹಲವು ಶಾಸನರಹಿತ ವೀರಗಲ್ಲುಗಳು ದೊರೆತಿವೆ. ರುದ್ರಶರ್ಮ ಸೋಮಯಾಜಿಯ ಮಗ ಸಕ್ಕಹರಶರ್ಮನಿಗೆ ಬ್ರಹ್ಮದೇಯವಾಗಿ ಅತ್ತಿಗುನ್ನೂರು ಎಂಬ ಗ್ರಾಮವನ್ನು ಸರ್ವಬಾಧಾ ಪರಿಹಾರವಾಗಿ ನೀಡಿದ ದಾಖಲೆಯ ಬಗ್ಗೆ ತಿಳಿಸಲು ಕ್ರಿ.ಶ. ೭೫೦ ರ ತೋಟಗೆರೆಯ ಶಾಸನ ಪ್ರಮುಖವಾದದು.[೨೮]

ನೆಲಮಂಗಲ ತಾಲ್ಲೂಕಿನ ಮರಳುಕುಂಟೆಯಲ್ಲಿ ಎರಡನೇ ಶಿವಮಾರನ ವೀರಗಲ್ಲು ಶಾಸನ ಇತ್ತೀಚೆಗೆ ದೊರಕಿದೆ. ಶಿವಮಾರನ ಉಲ್ಲೇಖವಿರುವ ಈ ಮೇಲ್ಕಂಡ ಶಾಸನವು ಮಣ್ಣೆಯ ಕೋಟೆ ಕಾಳಗವನ್ನು ಪ್ರಸ್ತಾಪಿಸುತ್ತದೆ. ಮಣ್ಣೆಯ ಕೋಟೆ ಕಾಳಗದಲ್ಲಿ ಹೋರಾಡಿ ಸತ್ತವನು ಪರಮ ಎಂಬ ವೀರ. ಶಿಲ್ಪದ ಮೇಲೆ ಹಿಡಿದಿರುವ ಛತ್ರಿಯು ಈತನು ರಾಜಕುಟುಂಬಕ್ಕೆ ಸೇರಿದವನೆಂದು ತಿಳಿಯಲು ನೆರವಾಗುತ್ತದೆ. ಈ ದಾನವನ್ನು ಪರಮನ ಮಗ ಸಿಜ್ಜಟನಿಗನಿಗೆ ಶಿವಮಾರನು ನೀಡುತ್ತಾನೆ. ಶಿವಮಾರನ ಶಾಸನಗಳಲ್ಲಿ ಒಂದೂ ಶಾಸನವೂ ಮಣ್ಣೆಯ ಆಸುಪಾಸಿನಲ್ಲಿ ದೊರೆಯದೇ ಇದ್ದಾಗ ಇದು ಮುಖ್ಯವಾಗುತ್ತದೆ.[೨೯] ಕ್ರಿ.ಶ. ಸು. ೯೭೦ ರ ಸುಂದರ ಶಿಲ್ಪವಿರುವ ಕಲಿತುಂಗನ ವೀರಗಲ್ಲು ಮಣ್ಣೆಯಲ್ಲಿ ದೊರಕಿದೆ.

ನಮಗೆ ಗಂಗರ ನಂತರ ಗ್ರಂಥ ಮತ್ತು ಅರವಕ್ಷರದಲ್ಲಿ ಬರೆದಿರುವ ಚೋಳರ ಕಾಲದ ಶಾಸನಗಳು ದೊರೆಯುವವು. ಅವುಗಳಲ್ಲಿ ಪ್ರಾಚೀನವಾದುದು ಎಂದರೆ ಕ್ರಿ.ಶ. ೧೦೩೮ ರ ಅಲೂರಿನ ಶಾಸನ. ರಾಜೇಂದ್ರ ಚೋಳದೇವನ ಆಳ್ವಿಕೆಯ ೨೭ ನೆಯ ́ ವರ್ಷದ್ದಾಗಿದ್ದು ಕುಕ್ಕನೂರು ನಾಡಿನ ವಾಣಪುರದ ಮಾಣಿಕ್ಕಚೆಟ್ಟಿ ಮತ್ತಿತರರು ಮತ್ತು ನಾಡಿನ ಗಾಮುಂಡನಾದ ವಿನ್ನಮಂಗಲದ ರಾಜೇಂದ್ರ ಚೋಳ ಗಾಮುಂಡನು ಚಾಮುಂಡೇಶ್ವರಿ ದೇವಿಯ ಸೇವೆಗೆ ಮತ್ತು ಅದರ ಪೂಜಾರಿಗೆ ನೀಡಿದ ದಾನದ ದಾಖಲೆಯಾಗಿದೆ.[೩೦]

ನೆಲಮಂಗಲ ತಾಲ್ಲೂಕಿನಲ್ಲಿ ಚೋಳರ ಕಾಲದ ಬಹುಮುಖ್ಯ ಶಾಸನ ಭಿನ್ನಮಂಗಲದಲ್ಲಿದೆ. ಭಿನ್ನಮಂಗಲದ ಮುಕ್ತಿನಾಥೇಶ್ವರ ದೇವಾಲಯದ ಎದುರಿಗಿರುವ ಈ ಶಾಸನದ ಕಾಲ ಕ್ರಿ.ಶ. ೧೧೧೦. ಕುಲೋತ್ತುಂಗ ಚೋಳ ರಾಜನ ೪೧ ನೆಯ ಆಳ್ವಿಕೆಯ ವರ್ಷದ ಮತ್ತು ಶಕವರ್ಷ ೧೦೩೨ ರ ಉಲ್ಲೇಖವಿರುವ ಶಾಸನವು ಅವನು ವಿಕ್ರಮಚೋಳ ಮಂಡಲದ ಕುಕ್ಕನೂರು ನಾಡಿನ ಬಿನ್ನಮಂಗಲದ ಮಲ್ಲೇಶ್ವರಮುಡ್ಯೆಯ ಮಹಾದೇವರಿಗೆ ದೇವದಾನವಾಗಿ ನಕ್ಕೂರು ಗ್ರಾಮದ ಹಲವು ತೆರಿಗೆಗಳನ್ನು ಬಿಟ್ಟಿರುವ ವಿಷಯವನ್ನು ಉಲ್ಲೇಖಿಸಿದೆ.

ನೆಲಮಂಗಲ ತಾಲ್ಲೂಕಿನ ಇನ್ನುಳಿದ ತಮಿಳು ಶಾಸನಗಳು ಹೊಯ್ಸಳರ ಆಳ್ವಿಕೆಯ ಕಾಲಕ್ಕೆ ಸೇರಿದವು. ಇವರು ಕನ್ನಡಿಗರಾದರೂ ತಮಿಳು ಭಾಷೆ ಬಳಸಿದ್ದಾರೆ. ಕ್ರಿ.ಶ. ಸು. ೧೧೧೫ ರ ಶಾಸನ ಹೆಗ್ಗುಂದದಲ್ಲಿ ಇರುವ ವಿಷ್ಣುವರ್ಧನನ ಕಾಲದ್ದು. ಇದು ವೀರಗಂಗ ಹೊಯ್ಸಳದೇವನ ಆಳ್ವಿಕೆಯ ಸಂದರ್ಭದಲ್ಲಿ ತ್ರಿಭುವನಮಲ್ಲ ಹೊಯ್ಸಳ ಸಾಮಂತ ಮಣ್ಣೆ ನಾಡಾಳವನ್ ಸಾಮಗಾಮುಂಡನ ಮಗ ಕೋರಗಾಮುಣ್ಣನು ಪೊಕ್ಕುಂದದ ಮಲ್ಲಿಕಾರ್ಜುನ ಮುಡ್ಯೆಯ ಮಹಾದೇವರಿಗೆ ಭೂದಾನ ಮಾಡಿದ್ದನ್ನು ದಾಖಲಿಸಿದೆ. ಹೆಗ್ಗುಂದದ ಮತ್ತೊಂದು ಶಾಸನವು ಹೊಯ್ಸಳ ನರಸಿಂಹನ ಕಾಲದ್ದು. ಇದರ ಕಾಲ ಕ್ರಿ.ಶ. ಸು. ೧೧೫೨. ಇದು ಕೋಮುಗಾಮುಣ್ಡನು ಹೆಗ್ಗುಂದದ ಮಲ್ಲಿಕಾರ್ಜುನ ಉಡ್ಯೆಯ ಮಹಾದೇವರಂ ಮತ್ತು ಹಲವು ಬ್ರಾಹ್ಮಣರಿಗೆ ಭೂದಾನ ಮಾಡಿರುವುದನ್ನು ದಾಖಲಿಸಿದೆ.[೩೧]

ಚೋಳ ರಾಜಾಧಿರಾಜನ ಕಾಲದ ಒಂದು ಶಾಸನ ವರನಾಯಕನಹಳ್ಳಿಯಲ್ಲಿ ದೊರೆತಿದ್ದು, ಅದು ಕನ್ನಡದಲ್ಲಿ ಇರುವುದು ವಿಶೇಷವಾಗಿದೆ. ಕ್ರಿ.ಶ. ೧೦೫೧ ರ ಶಾಸನವು ಊರಳವಿನಲ್ಲಿ ಸತ್ತ ವೀರರ ಮನೆಯವರಿಗೆ ದಾನ ನೀಡದ ಉಲ್ಲೇಖವಾಗಿದೆ.

ಹೊಯ್ಸಳರ ಸಾಮಂತನಾಗಿದ್ದ ಅದಳವಂಶದ ಬಿಟ್ಟಿದೇವನು ಗಂಗಾಧರೇಶ್ವರ ದೇವಾಲಯವನ್ನು ಕ್ರಿ.ಶ. ೧೧೪೦ ರಲ್ಲಿ ಮಾಡಿಸಿದನೆಂದು ಅಲ್ಲಿಯದೇ ಒಂದು ಶಾಸನ ಉಲ್ಲೇಖಿಸಿದೆ. ಬಿಟ್ಟಿದೇವನು ಅದಳ ವಂಶಕ್ಕೆ ಸೇರಿದವನೆಂದು ಈ ಶಾಸನವು ತಿಳಿಸುತ್ತದೆ.[೩೨] ಆದರೆ ಈ ವಂಶದ ಬಗ್ಗೆ ಭಿನ್ನಾಭಿಪ್ರಾಯವಿದ್ದು, ಅದಳ ವಂಶ ಬೇರೆ ಮತ್ತು ಹೊಯ್ಸಳ ವಂಶ ಬೇರೆ ಎಂಬುದನ್ನು ಕೈದಾಳದ ಶಾಸನ ತಿಳಿಸುತ್ತದೆ.

ಹೊಯ್ಸಳ ವಂಶದವರಿಗೆ ಮತ್ತು ಶಿವಗಂಗೆಗೂ ಸಂಪರ್ಕ ಇದ್ದದನ್ನು ಶಾಂತಲೆಯ ಮರಣವನ್ನು ಉಲ್ಲೇಖಿಸುವ ಶ್ರವಣಬೆಳಗೊಳದ ಶಾಸನದಿಂದ ತಿಳಿಯಬಹುದಾಗಿದೆ. ಇದರಿಂದ ವಿಷ್ಣುವರ್ಧನನ ಕಾಲದಲ್ಲಿ ಗಂಗಾಧರೇಶ್ವರ ದೇವಾಲಯವನ್ನು ಕಟ್ಟಿಸಿ, ದೇವರ ಪೂಜೆಯ ಹೂವಿಗೆ, ನೈವೇದ್ಯ, ಧೂಪದೀಪ ಅಕ್ಷತೆ ಪಾತ್ರಪಾವುಳಗಳಿಗೆಂದು ಧನ ನೀಡಿದನೆಂದು ಈ ಶಾಸನ ತಿಳಿಸುತ್ತದೆ.[೩೩]

ಕ್ರಿ.ಶ. ಸು. ೧೧೭೩ ರ ೨ ನೇ ಬಲ್ಲಾಳನ ಶಿವಗಂಗೆ ಶಾಸನವು ಬಲ್ಲಾಳದೇವರನ್ನು (ವೀರಬಲ್ಲಾಳ) ಪೃಥುವೀ ರಾಜ್ಯವನ್ನು ಮಾಡಲೆಂದು ಅವರ ತೊತ್ತಿನ ಮಕ್ಕಳಾದ ತಿಪ್ಪರ್ಸ ಬೈರವದೇವ, ಬೊಂಮರ್ಸ ಅವರು ಶಿವಗಂಗೆ

ನಾಥನಿಗೆ ದಾನ ನೀಡಿರುವುದನ್ನು ತಿಳಿಸುತ್ತದೆ. ಇತ್ತೀಚಿಗೆ ಮಣ್ಣೆಯಲ್ಲಿ ಇವನ ಶಾಸನ ದೊರೆತಿದ್ದು ಇವನ ಆಳ್ವಿಕೆಯ ಬಗ್ಗೆ ತಿಳಿಸುತ್ತದೆ. ಕ್ರಿ.ಶ. ೧೩೩೧ ರ ಒಂದು ಶಾಸನ ಭಿನ್ನಮಂಗಲದಲ್ಲಿ ದೊರೆತಿದ್ದು, ಅದು ವೀರಬಲ್ಲಾಳನ ಸಾಮಂತ ಮಯಿಲೆಯನಾಯಕನು ಕುಕ್ಕಲನಾಡನ್ನು ಆಳುತ್ತಿದ್ದುದನ್ನು ತಿಳಿಸುತ್ತದೆ.

ಹಾಗೆಯೇ ಬಾಣಸವಾಡಿಯಲ್ಲಿ ಕ್ರಿ.ಶ. ೧೩೪೦ ರ ಶಾಸನ ( ನೆಲ-೧೯) ದೊರೆತಿದ್ದು, ವಿಜಯನಗರದ ಅರಸರಲ್ಲಿ ಮೊದಲನೆಯವನಾದ ಹರಿಯಪ್ಪವೊಡೆಯ ಅಂದರೆ ಹಕ್ಕನ ಆಳ್ವಿಕೆಯ ಸಂದರ್ಭದಲ್ಲಿ, ಕುಕ್ಕಲನಾಡನ್ನು ಮಯಿಲೆಯ ನಾಯಕನು ಆಳುತ್ತಿದ್ದನ್ನು ತಿಳಿಸುತ್ತದೆ. ಅನಂತರ  ಕುಕ್ಕಲನಾಡನ್ನು ವಿಜಯನಗರದ ಬುಕ್ಕನ ಆಳ್ವಿಕೆಯ ಕಾಲದಲ್ಲಿ ಆಳುತ್ತಿದ್ದುದನ್ನು ಕ್ರಿ.ಶ. ೧೩೫೯ ರ ಹುರಳ ಚಿಕ್ಕನ ಹಳ್ಳಿಯ ಒಂದು ಶಾಸನ(ನೆಲ-೨೩) ತಿಳಿಸುತ್ತದೆ. ಹೊಯ್ಸಳ ನಾಲ್ಕನೆಯ ವೀರಬಲ್ಲಾಳ ಕೊನೆಯ ದೊರೆ, ವಿಜಯನಗರದ ಮೊದಲ ದೊರೆ ಹರಿಯಪ್ಪವೊಡೆಯ ಅಥವಾ ಹಕ್ಕ, ಎರಡನೆಯ ದೊರೆ ಬುಕ್ಕರಾಯ – ಈ ಮೂರೂ ಜನರ ಕಾಲದಲ್ಲಿ ಮಯಿಲೆ ನಾಯಕರು ಅದೇ ಕುಕ್ಕಲನಾಡನ್ನು ಸುಮಾರು ಅರವತ್ತು ವರ್ಷಗಳ ಕಾಲ (ಕ್ರಿ.ಶ. ೧೩೨೫ - ಕ್ರಿ.ಶ. ಸು. ೧೩೬೦ ವರೆಗೆ) ಆಳಿದ್ದರು. ಹೊಯ್ಸಳ/ವಿಜಯನಗರ ಸಾಮ್ರಾಜ್ಯಗಳ ಅಂತ್ಯ ಆರಂಭ ಎರಡನ್ನು ಮಯಿಲೆನಾಯಕ ಕಂಡವನಾಗಿದ್ದಾನೆ.[೩೪] ಕ್ರಿ.ಶ. ೧೪೬೪ ರ ಶಾಸನವು ಕನಸವಾಡಿಯ ವಿಜಯನಗರದ ಸಾಮಂತನೊಬ್ಬನ ಅಧಿಕಾರಾವಧಿಯರಲ್ಲಿ ನೆಲಮಂಗಲವು ಈ ಸೀಮೆಯ ಕೇಂದ್ರ ಸ್ಥಾನವಾಗಿತ್ತು ಎಂಬ ವಿಷಯವನ್ನು ಪರಿಚಯಿಸುತ್ತದೆ.

ಶಿವಗಂಗೆಯಲ್ಲಿ ಕ್ರಿ.ಶ. ಸು. ೧೫೩೨ (ನೆಲ-೪೩)ರ ಶಾಸನ ದೊರೆತಿದ್ದು, ವಿಜಯನಗರದ ಅರಸನಾದ ಅಚ್ಯುತರಾಯನ ಆಳ್ವಿಕೆಯ ಕಾಲದ್ದಾಗಿದ್ದು, ಅಲ್ಲಿನ ಗಂಗಾಧರ ದೇವರ ಪೂಜೆ ಇತ್ಯಾದಿಗಳಿಗೆ ಶ್ರೀಪತಿಹಳ್ಳಿಯನ್ನು ಅಚ್ಯುತರಾಯನ ಸೇವಕ ಕಟ್ಟಿಗೆಯ ಕಾಮಣನಾಯ್ಕರು ಕೊಡುಗೆಯಾಗಿ ಕೊಟ್ಟಿದ್ದನ್ನು ಉಲ್ಲೇಖಿಸಿದೆ.

ಸದಾಶಿವರಾಯನ ಕ್ರಿ.ಶ.ಸು. ೧೫೪೫ ರ ಶಾಸನ(ನೆಲ-೪೧)ವು ಸದಾಶಿವರಾಯನು ಭಂತಿಯ ಬಸವಣ್ಣನಾಯಕರಸರ ಮಗನಿಗೆ ಮಲೆನಾಡ ಗೂಳೂರು, ಮಂಣೆಸೀಮೆಯ ಶಿವಗಂಗೆಯ ಗಂಗಾಧರ ದೇವರಿಗೆ ಸಲ್ಲುವ ಪುರಗಳು ಹೊಂನಂಮನ ಸಿಂಹಾಸನ ಮಹತ್ತಿಗೆ ಸಲ್ಲುವ ಪುರಗಳು ಕಂಬಾಳ ಮರಳಸಿದ್ದೇಶ್ವರಯ್ಯದೇವರ ಪುರ, ಮೇಲಣಗವಿ ಮಠಕ್ಕೆ ಸಲ್ಲುವ ಪುರಗಳನ್ನು ಸದಾಶಿವರಾಯನಿಗೆ ಪುಣ್ಯವಾಗಲೆಂದು ಅಮರವಾಗಿ ಕೊಟ್ಟ ಗ್ರಾಮಗಳಾಗಿವೆ ಎಂಬುದನ್ನು ಉಲ್ಲೇಖಿಸಿದೆ.

ಯಲಹಂಕದ ಕೆಂಪೇಗೌಡನ ಕಾಲದಲ್ಲಿ ಶಿವಗಂಗೆ ವಿಶೇಷ ಮನ್ನಣೆ ಪಡೆದಿದೆ. ನಮಗೆ ಸಿಗುವ ಈ ವಂಶದ ಮೊದಲ ಶಾಸನವೆಂದರೆ ಶಿವಗಂಗೆಯ ಗಂಗಾಧರೇಶ್ವರ ದೇವಾಲಯದ ಬೃಹತ್ ಗಂಟೆಯ ಮೇಲಿರುವ ೧೫೭೮ ರ ಬರಹ. ಇದರಲ್ಲಿ ಕೆಂಪನಂಚೇಗೌಡನ ಹೆಸರಿನ ಉಲ್ಲೇಖವಿದೆ. ಇವನು ೧೫೭೬ ರ ತಾಮ್ರಪಟದಲ್ಲಿ ಉಲ್ಲೇಖಿತನಾದ ಇಮ್ಮಡಿ ಕೆಂಪೇಗೌಡನ ಅಜ್ಜನಾಗಿದ್ದಾನೆ. ಈ ಶಾಸನದಲ್ಲಿ ಕೆಂಪೇಗೌಡನು ದಾನ ಮಾಡಿದ್ದನ್ನು ಅವನ ಮೊಮ್ಮಗನ ಕಾಲದಲ್ಲಿ ದಾಖಲಿಸಿದಂತೆ ಇದೆ.[೩೫] ಇದಕ್ಕೆ ಸಾಕ್ಷಿಯಾಗಿ ಕ್ರಿ.ಶ. ೧೬೧೯ ರ ಶಾಸನ ಮತ್ತು ಅವನ ಕಂಚಿನ ಪ್ರತಿಮೆಗಳಿವೆ.

ಸಾಹುಜಿ ಮಹಾರಾಜನ ಉಲ್ಲೇಖವಿರುವ ಎರಡು ಶಾಸನಗಳು ನೆಲಮಂಗಲ ತಾಲ್ಲೂಕಿನಲ್ಲಿ ದೊರೆತಿವೆ. ಕ್ರಿ.ಶ. ೧೬೫೨ ರ ಶಿವಗಂಗೆ ಶಾಸನ ಸಾಹುಜಿ ಮಹಾರಾಜನ ಆಳ್ವಿಕೆಯ ಕಾಲದಲ್ಲಿ ಗಂಗಾಧರಸ್ವಾಮಿ ಅಯ್ಯನವರ ಅಪ್ಪಣೆಯ ಮೇರೆಗೆ ತುಕಾರಾಮರಾವು ಶಿವಗಂಗೆಯ ಕಣ್ವತೀರ್ಥವನ್ನು ಕಟ್ಟಿಸಿದ್ದನ್ನು ತಿಳಿಸುತ್ತದೆ.

ಕ್ರಿ.ಶ. ೧೬೫೭ ರ ಶಾಸನ (ನೆಲ-೬೯) ಮಕ್ಕೂರಿನಲ್ಲಿ ದೊರಕಿದ್ದು ಮಹಾರಾಜರಾಜ ಶ್ರೀ ದಾಹುಜಿ ರಾಜಾಸಾಹೇಬ್ ತನಗೆ ಧರ್ಮವಾಗಬೇಕೆಂದು ವಾಕ್ಕೂರಿನಲ್ಲಿ ಬಾವನೂರು ಅಹಮದರಿಗೆ ಭೂದಾನ ಮಾಡಿದ್ದನ್ನು ಸರ್ದಾರ್ ಚಾಂದ್‌ಖಾನ್‌ನನ ಮೂಲಕ ಜಾರಿಗೆ ತಂದದ್ದನ್ನು ಶಾಸನ ದಾಖಲಿಸಿದೆ.

ನಿಜಗಲ್ಲಿನ ಕ್ರಿ.ಶ. ೧೬೯೮ ರ ಒಂದು ಶಾಸನವು ಚಿಕ್ಕದೇವರಾಜ ಒಡೆಯರ ಆಳ್ವಿಕೆಯ ಕಾಲದಲ್ಲಿ ಸೇವಕ ಬಿಳಿಗುಲಿ ಕೆಂಪರಾಜಯ್ಯನವರ ಕುಮಾರರು ದಾಸರಾಜಯ್ಯನವರು ಹಿರೇಬಾಗಲಿ ಬಳಿಯಲ್ಲಿ ದೇವರ ಪ್ರತಿಷ್ಠಾಪನೆ ಮಾಡಿಸಿದ್ದನ್ನು ದಾಖಲಿಸಿದೆ.[೩೬]

ನಿಜಗಲ್ಲಿನಲ್ಲಿ ಮತ್ತೊಂದು ಕ್ರಿ.ಶ. ೧೭೦೫ ರ ಶಾಸನ (ನೆಲ-೬೫) ದೊರಕಿದ್ದು, ಅದೇ ದಾಸರಾಜೈಯನವರು ನಿಜಗಲ್ಲು ದುರ್ಗಕ್ಕೆ ಮೊದಲು ಇದ್ದ ಮಣ್ಣಿನ ಕೋಟೆಗೆ ಬದಲಾಗಿ ಕಲ್ಲಿನ ಕೋಟೆ ಕಟ್ಟಿಸಿದ್ದನ್ನು ದಾಖಲಿಸಿದೆ. ಅಲ್ಲದೇ ದುರ್ಗದ ಮೇಲೆ ವಿಘ್ನೇಶ್ವರ, ಲಕ್ಷ್ಮೀನರಸಿಂಹ ದೇವಾಲಯಗಳನ್ನು ಪ್ರತಿಷ್ಠಾಪನೆ ಮಾಡಿದ್ದರ ಉಲ್ಲೇಖವಿದೆ. ಅದೇ ದಾಸರಾಜಯ್ಯನ ಕಾಲದಲ್ಲಿ ಕ್ರಿ.ಶ. ೧೭೨೦ ರಲ್ಲಿ ತೆಪ್ಪದ ಬೇಗೂರಿನ ಶಾಸನ (ನೆಲ-೪೧) ದೊರಕಿದ್ದು ದಾಸರಾಜೈಯನ ಆಪ್ತರಲ್ಲೊಬ್ಬರಾದ ಮುದ್ದುಬಸವಯ್ಯನ ಮುಖಾಂತರ ಗಂಗಾಧರ ಸ್ವಾಮಿಯ ಪ್ರತಿಷ್ಠಾಪನೆ ಮಾಡಿಸಿದ್ದನ್ನು ದಾಖಲಿಸಿದೆ. ಕ್ರಿ.ಶ. ೧೭೨೦ ರಲ್ಲಿ ನಿಜಗಲ್ಲಿನ ನರಸಿಂಹಪುರ ಗ್ರಾಮದಲ್ಲಿ ಶಾಸನ (ನೆಲ-೨೦) ದೊರಕಿದ್ದು, ಬಿಳುಗಲಿ ದಾಸರಾಜಯ್ಯನ ವಿಜ್ಞಾಪನೆಯ ಮೇರೆಗೆ ಕೃಷ್ಣರಾಜ ಒಡೆಯರು ಶೂರಗಿರಿ ದುರ್ಗದ ನಿಜಗಲ್ಲು ಲಕ್ಷ್ಮೀನರಸಿಂಹಸ್ವಾಮಿಯ ಸೇವೆಗೆ ಹಗ್ಗುಂದದ ಹೋಬಳಿಯ ಗೊಟ್ಟಿಗೆರೆ ಪ್ರತಿನಾಮವಾದ ನರಸಿಂಗಪುರ ಮತ್ತು ಅದರ ಉಪಗ್ರಾಮವನ್ನು ದಾನವಾಗಿ ನೀಡಿದ್ದನ್ನು ಈ ಶಾಸನ ತಿಳಿಸಿದೆ.[೩೭] ನಿಜಗಲ್ಲಿನ ಅಧಿಕಾರಿ ಬಳುಗಲಿ ದಾಸರಾಜಯ್ಯನು ನೆಲಮಂಗಲ ತಾಲ್ಲೂಕಿನ ರಾಜಕೀಯ ಇತಿಹಾಸದಲ್ಲಿ ಪ್ರಮುಖ ಸ್ಥಾನ ಗಳಿಸುತ್ತಾನೆ.

ಕ್ರಿ.ಶ. ೧೭೬೩ ರ ತಾಮ್ರಶಾಸನ ತ್ಯಾಮಗೊಂಡ್ಲುವಿನಲ್ಲಿ ದೊರಕಿದ್ದು, ಕೃಷ್ಣರಾಜ ಒಡೆಯರು ಅಭಳ ಸೋಮಯಾಜಿಯರು ಮತ್ತು ಹಲವರಿಗೆ ಬರೆಸಿಕೊಟ್ಟ ಕ್ರಯ ಭೂದಾನದ ಬಗ್ಗೆ ತಿಳಿಸುತ್ತದೆ.

ನೆಲಮಂಗಲ ತಾಲ್ಲೂಕಿನ ಬಿಲ್ಲಿನಕೋಟೆಯ ಒಂದು ಶಾಸನವು ಬಹಳ ಅಪರೂಪದ ಮತ್ತು ಮುಖ್ಯವಾದ ವಿಷಯವೊಂದನ್ನು ದಾಖಲಿಸಿದೆ. ಕಲಿಯುಗ ವರುಷ ೪೬೦೮ (ಕ್ರಿ.ಶ. ೧೫೦೭) ಪ್ರಭವ ಸಂವತ್ಸರ ಶ್ರಾವಣ ಶುದ್ಧ ೬ ರಂದು ೪ ನೆಯ ವಾರ ಅಂದರೆ ಬುಧವಾರ ಭೂಮಿ ನಡುಗಿತು ಎಂದು ಶಾಸನ ದಾಖಲಿಸಿದೆ.[೩೮] ಇದು ಭೂಕಂಪದ ವಿಷಯದ ಮೊದಲ ಶಾಸನವಾಗಿದೆ.

ಇತ್ತೀಚೆಗೆ ನೆಲಮಂಗಲದ ಅಡೇಪೇಟೆ (ಪೇಟೆ ಬೀದಿ)ಯಲ್ಲಿರುವ ಕಾಶೀ ವಿಶ್ವೇಶ್ವರ ಸ್ವಾಮಿ ದೇವಾಲಯದಲ್ಲಿ ಐದು ಸಾಲಿನ ಕನ್ನಡ ಶಾಸನ ದೊರಕಿದ್ದು, ಇದರ ಕಾಲಮಾನ ೧೬೬೫ ನೆಯ ರುದಿರೋದ್ಗಾರಿ ಸಂವತ್ಸರದ ಜೇಷ್ಠಶುದ್ಧ ೧೨, ಸೋಮವಾರವೆಂದಿದ್ದು, ಇದು ಮೇ ೨೪ಕರ ೧೭೪೩ಕ್ಕೆ ಸರಿ ಹೊಂದುತ್ತದೆ. ಇದು ಇಮ್ಮಡಿ ಕೃಷ್ಣರಾಜ ಒಡೆಯರ ಆಳ್ವಿಕೆಯ ಕಾಲ ಹಾಗೂ ಈ ಅವಧಿಯಲ್ಲೇ ದಳವಾಯಿ ದೇವರಾಜಯ್ಯ ಮತ್ತು ಅವನ ಸಹೋದರ ಸರ್ವಾಧಿಕಾರಿ ನಂಜರಾಜಯ್ಯನವರ ಕೈಗೆ ಅಧಿಕಾರ ಹಸ್ತಾಂತರಗೊಂಡಿದ್ದು, ಈ ದೇವಾಲಯವನ್ನು ಕಟ್ಟಿಸಿದವನು ಬಾಗೇನಹಳ್ಳಿ ಅಪಯ್ಯನ ಪುತ್ರ ತಿಪ್ಪಯ್ಯ ಕಟ್ಟಿಸಿದನು. ಹಿಂದಿನ ಬಾಗೇನಹಳ್ಳಿ ಎಂದರೆ ಈಗಿನ ಬಾಗೇಪಲ್ಲಿ ಎನ್ನಬಹುದು. ಏಕೆಂದರೆ ನೆಲಮಂಗಲದಲ್ಲಿ ಬಾಗೇಪಲ್ಲಿ ಮೂಲದ ವೈಶ್ಯ ಜನಾಂಗದವರೇ ನೆಲೆಸಿದ್ದಾರೆ ಎಂಬುದನ್ನು ಈ ಶಾಸನದಿಂದ ತಿಳಿಯಬಹುದು.[೩೯]

ಗಂಗರ ಕಾಲದಿಂದ ಮೈಸೂರು ಒಡೆಯರ ಕಾಲದವರೆಗೆ ನಿರಂತರವಾಗಿ ಶಾಸನ ದಾಖಲೆಗಳನ್ನು ನೆಲಮಂಗಲ ತಾಲ್ಲೂಕು ಉಳಿಸಿಕೊಂಡು ಬಂದಿದೆ. ಅಲ್ಲದೇ ರಾಜಕೀಯ ಪ್ರಸಿದ್ಧಿ ಪಡೆದ ಮಣ್ಣೆ, ಧಾರ್ಮಿಕ ಪ್ರಸಿದ್ಧಿ ಪಡೆದ ಶಿವಗಂಗೆ ವಾಸ್ತುಶಿಲ್ಪ ಮನ್ನಣೆ ಪಡೆದ ಭಿನ್ನಮಂಗಲ ಇತ್ಯಾದಿ ಸ್ಥಳಗಳ ಸೂಕ್ಷ್ಮವಾದ ಅಧ್ಯಯನಕ್ಕೆ ಶಾಸನಗಳು ಸಹಾಯಕವಾಗಿವೆ.

ಈ ಬಗೆಯ ಶಾಸನಗಳ ತಾಲ್ಲೂಕುವಾರು ಅಧ್ಯಯನದಿಂದ ಸ್ಥಳೀಯ ಇತಿಹಾಸವನ್ನು ಅರಿಯುವುದರ ಜೊತೆಗೆ ಮಹತ್ವದ ಸಂಗತಿಗಳ ಬಗ್ಗೆ ಹೊಸ ಬೆಳಕನ್ನು ಕಾಣಬಹುದು ಎಂದರೆ ಉತ್ಪ್ರೇಕ್ಷೆಯಾಗಲಾರದು.

ಒಟ್ಟಿನಲ್ಲಿ ನೆಲಮಂಗಲದ ತಾಲ್ಲೂಕು ಪ್ರಾಗೈತಿಹಾಸಿಕ ಕಾಲದಿಂದ ತನ್ನದೇ ಆದ ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿದೆ ಎನ್ನಬಹುದು.

**ಅಡಿಟಿಪ್ಪಣಿಗಳು**

೧. ರಾಮಚಂದ್ರೇಗೌಡ ಹಿ. ಶಿ., ೨೦೦೭, ಕನ್ನಡ ವಿಷಯ ವಿಶ್ವಕೋಶ, ಕರ್ನಾಟಕ (ಪರಿಷ್ಕೃತ) ಸಂಪುಟ - ೨, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಪು. ೪೭೫

೨. ಬೆಂಗಳೂರು ಗ್ರಾಮಾಂತರ ಜಿಲ್ಲಾ ಅಂಕಿ ಅಂಶಗಳ ನೋಟ, ೨೦೦೪ ೦೫, ಪು.೨೬

೩. ಶಿವತಾರಕ ಕೆ. ಬಿ., ೨೦೦೧, ಕರ್ನಾಟಕ ಪುರಾತತ್ವನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧

೪. ಸೂರ್ಯನಾಥ್‌ಕಾಮತ್, ಕೃಷ್ಣಮೂರ್ತಿ ಪಿ. ವಿ.,( ಸಂ.), ಇತಿಹಾಸ ದರ್ಶನ ಸಂಪುಟ- ೧೦, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಪು. ೧೮ ೨೦

೫. ಸೂರ್ಯನಾಥ್‌ಕಾಮತ್, ಕೃಷ್ಣಮೂರ್ತಿ ಪಿ. ವಿ., (ಸಂ.), ಇತಿಹಾಸ ದರ್ಶನ ಸಂಪುಟ- ೧೩, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಪು. ೧೧ ೧೨

೬. ಅದೇ., ಪು. ೧೩೧೪

೭. ಗೋಪಾಲರಾವ್ ಎಚ್.ಎಸ್. (ಸಂ.), ೨೦೦೮, ಗಂಗ ಶಿಲ್ಪಕಲೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು, ಪು. ೧೮

೮. ಶೇಷಗಿರಿರಾವ್ ಎಲ್. ಎಸ್. (ಸಂ.), ೨೦೦೫, ಬೆಂಗಳೂರು ದರ್ಶನ, ಸಂಪುಟ- ೧, ಉದಯಭಾನು ಕಲಾಸಂಘ, ಬೆಂಗಳೂರು, ಪು. ೬

೯. ಗೋವಿಂದರಾಜು ಸಿ. ಆರ್. (ಸಂ.), ೨೦೦೪, ಇತಿಹಾಸ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೩೨ ರಿಂದ ೨೩೩

೧೦. ಶೇಷಗಿರಿರಾವ್ ಎಲ್. ಎಸ್. (ಸಂ.), ೨೦೦೫, ಬೆಂಗಳೂರು ದರ್ಶನ, ಸಂಪುಟ- ೧, ಉದಯಭಾನು ಕಲಾಸಂಘ, ಬೆಂಗಳೂರು, ಪು. ೮

೧೧. ಗೋಪಾಲರಾವ್ ಎಚ್. ಎಸ್. (ಸಂ.), ೧೯೯೭, ನೆಲದ ಸಿರಿ, ನೆನಪಿನ ಸಂಚಿಕೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನ್ನಡ ಸಾಹಿತ್ಯಪರಿಷತ್ತು, ನೆಲಮಂಗಲ, ಪು. ೧೫

೧೨. ಅದೇ., ಪು. ೧೭

೧೩. ಶಿವಗಂಗಾ ಸಿರಿ, ಸ್ಮರಣಸಂಚಿಕೆ,೨೦೦೦, ಪ್ರಕಾಶಕರು- ಶಿವಗಂಗಾ ಕ್ಷೇತ್ರೋತ್ಸವ ಸಮಿತಿ, ಶಿವಗಂಗೆ, ಪು. ೭೯

೧೪. ಶೇಷಗಿರಿರಾವ್ ಎಲ್. ಎಸ್. (ಸಂ.), ೨೦೦೫, ಬೆಂಗಳೂರು ದರ್ಶನ, ಸಂಪುಟ- ೧, ಉದಯಭಾನು ಕಲಾಸಂಘ, ಬೆಂಗಳೂರು, ಪು. ೧೦
೧೫. ಅದೇ. ಪು. ೧೧
೧೬. ಗೋಪಾಲರಾವ್ ಎಚ್. ಎಸ್. (ಸಂ.), ೧೯೯೭, ನೆಲದ ಸಿರಿ, ನೆನಪಿನ ಸಂಚಿಕೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನ್ನಡ ಸಾಹಿತ್ಯಪರಿಷತ್ತು, ನೆಲಮಂಗಲ, ಪು. ೩೭
೧೭. ಶೇಷಗಿರಿರಾವ್ ಎಲ್. ಎಸ್. (ಸಂ.), ೨೦೦೫, ಬೆಂಗಳೂರು ದರ್ಶನ, ಸಂಪುಟ- ೧, ಉದಯಭಾನು ಕಲಾಸಂಘ, ಬೆಂಗಳೂರು, ಪು. ೧೨
೧೮. ಸುಂದರ್‌ರಾವ್ ಬ. ನ. ವನವಿಹಾರಿ, ೧೯೮೫, ಬೆಂಗಳೂರಿನ ಇತಿಹಾಸ, ವಸಂತ ಸಾಹಿತ್ಯ ಗ್ರಂಥಮಾಲಾ, ಬೆಂಗಳೂರು, ಪು. ೨೭
೧೯. ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್, ಬೆಂಗಳೂರು ರೂರಲ್ ಡಿಸ್ಟ್ರಿಕ್ಟ್, ೧೯೮೯, ಕರ್ನಾಟಕ ಗವರ್ನಮೆಂಟ್ ಪಬ್ಲಿಕೇಷನ್ಸ್, ಬೆಂಗಳೂರು, ಪು. ೮೫೬೦
೨೦. ಮಂಗಳ ಗಂಗ, ಸ್ಮರಣ ಸಂಚಿಕೆ, ೨೦೦೨, ಪ್ರಕಾಶಕರು- ಅಧ್ಯಕ್ಷರು ಮತ್ತು ಪದಾಧಿಕಾರಿಗಳು, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು. ೧೧
೨೧. ಅದೇ., ಪು. ೧೨
೨೨. ಗೋಪಾಲರಾವ್ ಎಚ್. ಎಸ್. (ಸಂ.), ೧೯೯೭, ನೆಲದ ಸಿರಿ, ನೆನಪಿನ ಸಂಚಿಕೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು. ೩೩
೨೩. ನಾಗರಾಜ್ ರಾವ್ ಎಂ. ಎಸ್. ಮತ್ತು ರಮೇಶ್ ಕೆ. ವಿ., ೧೯೮೫, ಕಾಫರ್ ಪ್ಲೇಟ್ ಇನ್ಸ್‌ಕ್ರಿಪ್ಷನ್ಸ್ ನ್ಯೂ ಡಿಸ್ಕವರಿ, ಮೈಸೂರು, ಪು. ೮ ೧೩
೨೪. ಎಫಿಗ್ರಾಫಿಯಾ ಕರ್ನಾಟಿಕಾ, ಸಂಪುಟ- IX, ನೆಲ.೬೦, ಕ್ರಿ.ಶ. ೭೯೭
೨೫. ಗೋಪಾಲರಾವ್ ಎಚ್. ಎಸ್. (ಸಂ.), ೧೯೯೭, ನೆಲದ ಸಿರಿ, ನೆನಪಿನ ಸಂಚಿಕೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನ್ನಡ ಸಾಹಿತ್ಯಪರಿಷತ್ತು, ನೆಲಮಂಗಲ, ಪು. ೩೬
೨೬. ಎಫಿಗ್ರಾಫಿಯಾ ಕರ್ನಾಟಿಕಾ, ಸಂಪುಟ- IX, ನೆಲ.೬೧, ಕ್ರಿ.ಶ. ೮೦೨
೨೭. ಗೋಪಾಲರಾವ್ ಎಚ್. ಎಸ್. (ಸಂ.), ೧೯೯೭, ನೆಲದ ಸಿರಿ, ನೆನಪಿನ ಸಂಚಿಕೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನ್ನಡ ಸಾಹಿತ್ಯಪರಿಷತ್ತು, ನೆಲಮಂಗಲ, ಪು. ೩೭
೨೮. ಎಫಿಗ್ರಾಫಿಯಾ ಕರ್ನಾಟಿಕಾ, ಸಂಪುಟ- IX, ನೆಲ.೩೩, ಕ್ರಿ.ಶ. ೭೫೦
೨೯. ನಾಗರಾಜ್ ಎಂ.ಜಿ., ಕೃಷ್ಣಮೂರ್ತಿ ಪಿ.ವಿ., (ಸಂ.), ೨೦೦೪, ಇತಿಹಾಸ ದರ್ಶನ ಸಂಪುಟ ೧೯, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಪು. ೩೯
೩೦. ಎಫಿಗ್ರಾಫಿಯಾ ಕರ್ನಾಟಿಕಾ, ಸಂಪುಟ- IX, ನೆಲ.೭ ಎ, ಕ್ರಿ.ಶ. ೧೦೩೮
೩೧. ಗೋಪಾಲರಾವ್ ಎಚ್. ಎಸ್. (ಸಂ.), ೧೯೯೭, ನೆಲದ ಸಿರಿ, ನೆನಪಿನ ಸಂಚಿಕೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನ್ನಡ ಸಾಹಿತ್ಯಪರಿಷತ್ತು, ನೆಲಮಂಗಲ, ಪು. ೪೦
೩೨. ಎಫಿಗ್ರಾಫಿಯಾ ಕರ್ನಾಟಿಕಾ, ಸಂಪುಟ- IX, ನೆಲ.೬೮, ಕ್ರಿ.ಶ. ೧೦೫೧
೩೩. ವೀರಭದ್ರಯ್ಯ ಎಚ್. ವಿ., ಶಾಂತವೀರಯ್ಯ ಹಿ.ಚಿ., (ಸಂ.), ಹಾಲುಬಾವಿ ವಿಶೇಷ ಸಂಚಿಕೆ,

ಶಾಂತಿಗ್ರಾಮ, ಬ್ಯಾಲದಕೆರೆ ದಾಖಲೆ, ಪು.೫೫

೩೪. ಗೋಪಾಲರಾವ್ ಎಚ್. ಎಸ್. (ಸಂ.), ೧೯೯೭, ನೆಲದ ಸಿರಿ, ನೆನಪಿನ ಸಂಚಿಕೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನ್ನಡ ಸಾಹಿತ್ಯಪರಿಷತ್ತು, ನೆಲಮಂಗಲ, ಪು. ೪೧

೩೫. ಅದೇ., ಪು. ೪೨

೩೬. ಎಫಿಗಾಪ್ರಿಯಾ ಕರ್ನಾಟಿಕಾ, ಸಂಪುಟ- IX, ನೆಲ.೬೬, ಕ್ರಿ.ಶ. ೧೬೯೮

೩೭. ಗೋಪಾಲರಾವ್ ಎಚ್. ಎಸ್. (ಸಂ.), ೧೯೯೭, ನೆಲದ ಸಿರಿ, ನೆನಪಿನ ಸಂಚಿಕೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನ್ನಡ ಸಾಹಿತ್ಯಪರಿಷತ್ತು, ನೆಲಮಂಗಲ, ಪು. ೪೪

೩೮. ಅದೇ., ಪು.೪೪

೩೯. ದೇವರಕೊಂಡಾರೆಡ್ಡಿ, (ಸಂ.), ೨೦೦೪, ಶಾಸನ ಅಧ್ಯಯನ, ಸಂಪುಟ- ೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ., ಪು. ೧೩ ೧೪

# ಅಧ್ಯಾಯ ಮೂರು

## ರಾಜಕೀಯ ಇತಿಹಾಸ

೩.೧. ಸ್ವಾತಂತ್ರ್ಯ ಹೋರಾಟಗಾರರು

೩.೨. ರಾಜಕಾರಣ ೧೯೫೬ರ ವರೆಗೆ

೩.೩. ೧೯೫೬ರ ನಂತರ ರಾಜಕಾರಣ

**ಮಾ**ನವನು ನಾಗರೀಕನಾದಂತೆ ತನ್ನದೇ ಆದ ರಾಜಕೀಯ ಸಂಘಟನೆಗಳನ್ನು ರಚಿಸಿಕೊಂಡು ಆಳ್ವಿಕೆ ಮಾಡಲು ಪ್ರಾರಂಭಿಸಿದನು. ಅನೇಕ ರಾಜಮನೆತನಗಳು ಉದಯವಾಗಿ ಅಧಿಕಾರ ವಂಶಪಾರಂಪರಿಕವಾಯಿತು. ಈ ರಾಜಮನೆತನಗಳನ್ನು ಗುರುತಿಸಿಯೇ ಇತಿಹಾಸ ರಚಿಸುವುದು ಕಂಡುಬರುತ್ತದೆ. ಒಂದೊಂದು ರಾಜಮನೆತನಗಳನ್ನು ಸುಮಾರು ವರ್ಷಗಳ ಕಾಲ ಆಳಿದ್ದಾರೆ. ಆದರೆ ಬ್ರಿಟಿಷರ ಪ್ರವೇಶದೊಂದಿಗೆ ರಾಜಕೀಯ ಇತಿಹಾಸದಲ್ಲಿ ಸಾಕಷ್ಟು ಬದಲಾವಣೆಗಳಾದವು. ಕೇವಲ ವ್ಯಾಪಾರಕ್ಕೆಂದು ಬಂದವರು ಕಾಲಕ್ರಮೇಣ ಇಲ್ಲಿನ ಪ್ರದೇಶಗಳನ್ನು ಗೆದ್ದುಕೊಂಡು, ಜನ-ಜೀವನದ ಎಲ್ಲಾ ಕ್ಷೇತ್ರಗಳಲ್ಲಿಯೂ ತಮ್ಮದೇ ಆದ ಪ್ರಭುತ್ವವನ್ನು ಸ್ಥಾಪಿಸಿದರು. ಬ್ರಿಟಿಷರು ಹೊಸ ಹೊಸ ವ್ಯವಸ್ಥೆಗಳನ್ನು ಅನುಷ್ಠಾನಗೊಳಿಸಿದರು. ಇದರಿಂದ ಬ್ರಿಟಿಷರ ವಿರುದ್ಧ ಪ್ರತಿರೋಧ ತೋರುವ ಭಾವನೆ ಬೆಳೆದು, ಮೊದಲು ಇಲ್ಲಿನ ಅರಸರು ಬ್ರಿಟಿಷರ ವಿರುದ್ಧ ಯುದ್ಧಗಳನ್ನು ಕೈಗೊಂಡರು. ಬ್ರಿಟಿಷರನ್ನು ಓಡಿಸಬೇಕೆಂಬ ಛಲದಿಂದ ಹೈದರಾಲಿ ಮತ್ತು ಅವನ ಮಗ ಟಿಪ್ಪು ಸುಲ್ತಾನ್ ಆಂಗ್ಲೋ ಮೈಸೂರು ಯುದ್ಧಗಳನ್ನು ಕೈಗೊಂಡರು. ಕರ್ನಾಟಕಾದ್ಯಂತ ಹಲವು ಪಾಳೆಯಗಾರರು ಬ್ರಿಟಿಷರ ವಿರುದ್ಧ ಸಿಡಿದೆದ್ದರು. ಆದರೆ ಬ್ರಿಟಿಷರು ಕ್ರೂರ ನೀತಿಯ ಮೂಲಕ ಸ್ವಾತಂತ್ರ್ಯ ಹೋರಾಟಗಾರರನ್ನು ಹತ್ತಿಕ್ಕಲು ಕ್ರಮ ಕೈಗೊಂಡರು. ಕಿತ್ತೂರು, ಶಿವಮೊಗ್ಗ, ಕೊಡಗು ಮೊದಲಾದ ಕಡೆಗಳಲ್ಲಿ ನಾಯಕರು ಬ್ರಿಟಿಷರ ಕ್ರೂರ ನೀತಿಯ ವಿರುದ್ಧ ದಂಗೆ ಎದ್ದರು.

೧೮೫೭ ರ ಸಿಪಾಯಿ ದಂಗೆಯಿಂದ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಪ್ರಾರಂಭವಾಯಿತು. ಅನೇಕ ಪ್ರದೇಶಗಳಲ್ಲಿ ಹೋರಾಟಗಳು ನಡೆಯಲು ಈ ದಂಗೆ ಕಾರಣವಾಯಿತು. ಮೈಸೂರು ಅರಸರ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಲ್ಲಿ ರಾಜಕೀಯ ಜಾಗೃತಿ ಉಂಟಾಗಿ ೧೮೮೧ ರಲ್ಲಿ ಪ್ರಜಾಪ್ರತಿನಿಧಿ ಸಭೆ ಆರಂಭವಾಯಿತು. ೧೮೮೫ರಲ್ಲಿ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆ ಉದಯವಾಗಿ ಸ್ವಾತಂತ್ರ್ಯದ ಅಖಂಡ ಹೋರಾಟಕ್ಕೆ ಇಳಿಯಲು ಭದ್ರ ಬುನಾದಿಯಾಯಿತು.

೧೯೦೫ ರಲ್ಲಿ ಸ್ವದೇಶಿ ಚಳುವಳಿ ಪ್ರಾರಂಭವಾಗಿ ವಿದೇಶಿ ವಸ್ತುಗಳನ್ನು ಸುಡಲಾಯಿತು. ಉತ್ತಮ ರಾಜಕೀಯ ಶಿಕ್ಷಣವನ್ನು ನೀಡಿ ಸಂವಿಧಾನಾತ್ಮಕವಾಗಿ ಹೇಗೆ ಹೋರಾಡಬೇಕು ಎಂಬುದನ್ನು ಜನರಿಗೆ ಮನನ ಮಾಡಿಕೊಡಲಾಯಿತು. ನಂತರದ ದಿನಗಳಲ್ಲಿ ಗಾಂಧೀಜಿಯವರು ಸ್ವಾತಂತ್ರ್ಯ ಹೋರಾಟಕ್ಕೆ ಪಾದಾರ್ಪಣೆ ಮಾಡಿದರು. ರೌಲತ್ ಕಾಯಿದೆ, ಜಲಿಯನ್ ವಾಲಾಬಾಗ್, ಹತ್ಯೆ, ಖಿಲಾಫತ್ ಚಳವಳಿ, ಮಾಪಿಳ್ಳೈ ದಂಗೆ ಇವುಗಳು ಜನರಲ್ಲಿ ಬೇಸರ ತಂದವು. ಇದರಿಂದಾಗಿ ಗಾಂಧೀಜಿ ನೇತೃತ್ವದಲ್ಲಿ ೧೯೨೦ ರಲ್ಲಿ ಅಸಹಕಾರ ಚಳವಳಿ ಯಶಸ್ವಿಯಾಗಲಿಲ್ಲ. ೧೯೨೪ ರಲ್ಲಿ ಬೆಳಗಾವಿ ಕಾಂಗ್ರೆಸ್ ಅಧಿವೇಶನ ನಡೆಸಲಾಯಿತು. ಇದು ಸ್ವಾತಂತ್ರ್ಯ ಹೋರಾಟಕ್ಕೆ ಹೊಸ ಹುಮ್ಮಸ್ಸನ್ನು ಹಾಗೂ ಚೈತನ್ಯವನ್ನು ಬೆಳಗಾವಿ ಅಧಿವೇಶನ ಒದಗಿಸಿತು. ೧೯೨೭ ರಲ್ಲಿ ಗಾಂಧೀಜಿಯವರು ಬೆಂಗಳೂರಿಗೆ ಭೇಟಿ ನೀಡಿದರು. ಮುಂದಿನ ಕೆಲ ದಿನಗಳಲ್ಲಿ ವಸತಿ ಮಾಡಿ ನಿತ್ಯ ಪ್ರಾರ್ಥನಾ ಸಭೆ ನಡೆಸುತ್ತಿದ್ದರು.[೧] ಗಾಂಧೀಜಿಯ ಈ ಭೇಟಿ ಸುತ್ತಲಿನ ಪ್ರದೇಶಗಳಲ್ಲಿ ಸ್ವಾತಂತ್ರ್ಯ ಹೋರಾಟ ನಡೆಯಲು

ಸ್ಫೂರ್ತಿಯಾಯಿತು. ಅದರಂತೆ ನೆಲಮಂಗಲದಲ್ಲಿಯೂ ಕೂಡ ಗಾಂಧೀಜಿಯ ಭೇಟಿ ಸ್ವಾತಂತ್ರ್ಯ ಚಳವಳಿ ಪ್ರಾರಂಭವಾಗಲು ಸಹಾಯಕವಾಗಿತು.

ಗಾಂಧೀಜಿಯವರು ೧೯೩೨ ರ ಪುಣೆ ಒಪ್ಪಂದದ ನಂತರ ಅಸ್ಪೃಶ್ಯತಾ ನಿವಾರಣಾ (ಹರಿಜನ) ಪ್ರವಾಸವನ್ನು ಕೈಗೊಂಡರು. ಬೆಂಗಳೂರಿನ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಭೇಟಿ ನೀಡಿ ಹರಿಜನ ಸೇವಾ ಸಂಘಕ್ಕೆ ನಿಧಿ ಸಂಗ್ರಹಿಸಲು ಮುಂದಾದರು. ಇದೇ ಸಂದರ್ಭದಲ್ಲಿ ನೆಲಮಂಗಲದ ದಾಬಸಪೇಟೆಗೆ ಗಾಂಧೀಜಿಯವರು ಭೇಟಿ ನೀಡಿದರು. ಗಾಂಧೀಜಿಯವರು ಸಾರ್ವಜನಿಕ ಸಮಾರಂಭದಲ್ಲಿ ಪಾಲ್ಗೊಂಡು ಭಾಷಣ ಮಾಡಿ ಹರಿಜನ ಸೇವಾ ಸಂಘಕ್ಕೆ ನಿಧಿ ಸಂಗ್ರಹಿಸಿದರು. ಗಾಂಧೀಜಿಯ ಪ್ರವಾಸದಿಂದ ನೆಲಮಂಗಲದ ಸ್ವಾತಂತ್ರ್ಯ ಹೋರಾಟಗಾರರಿಗೆ ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳಲು ಪ್ರೇರಣೆಯಾಯಿತು.

ದೇಶೀಯ ಸಂಸ್ಥಾನಗಳಲ್ಲಿ ಸ್ವಾತಂತ್ರ್ಯ ಚಳವಳಿ ಪ್ರಾರಂಭವಾಯಿತು. ಮೈಸೂರು ಕಾಂಗ್ರೆಸ್ ಅಧ್ಯಕ್ಷರಾದ ಟಿ. ಸಿದ್ಧಲಿಂಗಯ್ಯ, ತಗಡೂರ್ ರಾಮಚಂದ್ರರಾವ್, ವೀರಕೇಸರಿ ಮತ್ತು ಸೀತರಾಮ್ ಶಾಸ್ತ್ರಿ ಮೊದಲಾದವರು ಜವಾಬ್ದಾರಿ ಸರ್ಕಾರಕ್ಕಾಗಿ ಚುನಾವಣೆಗಳನ್ನು ನಡೆಸಲು ಸಾರ್ವಜನಿಕ ಸಭೆಯನ್ನು ಕರೆದರು. ಚುನಾವಣೆಯಲ್ಲಿ ಕಾಂಗ್ರೆಸ್ ಜಯಶಾಲಿಯಾಯಿತು. ಟಿ. ಸಿದ್ಧಲಿಂಗಯ್ಯ ಅಧ್ಯಕ್ಷತೆಯಲ್ಲಿ ಸಭೆ ಸಮಾವೇಶಗೊಂಡಾಗ ಕಾಂಗ್ರೆಸ್ ಧ್ವಜವನ್ನು ಮೈಸೂರು ಸಂಸ್ಥಾನದಲ್ಲಿ ಎಲ್ಲಿಯೂ ಹಾರಿಸಬಾರದೆಂದು ಮೈಸೂರು ಸರ್ಕಾರ ನಿರ್ಬಂಧ ಹಾಕಿತು. ಇದನ್ನು ಉಲ್ಲಂಘಿಸಲು ಮುಂದಾದರು. ಈ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ೧೯೩೮ ರ ಏಪ್ರಿಲ್‌ನಲ್ಲಿ ಮೈಸೂರು ಸರ್ಕಾರದ ಕಟು ಧೋರಣೆಯಲ್ಲಿ ಪ್ರತಿಭಟಿಸಲು ತಾಲ್ಲೂಕು ಮಟ್ಟದಲ್ಲಿ ಚಳವಳಿ ಆರಂಭವಾಯಿತು. ಗುಬ್ಬಿ ಹುಚ್ಚಪ್ಪ ಮತ್ತು ಸಂತೋಜಿ ರಾವ್‌ರವರು ನೆಲಮಂಗಲ ತಾಲ್ಲೂಕಿನಲ್ಲಿ ಚಳವಳಿಯನ್ನು ಪ್ರಾರಂಭಿಸಿದರು. ನೆಲಮಂಗಲದ ಯುವ ಮುಖಂಡರಾದ ಅಲೂರು ಹನುಮಂತಪ್ಪ ಮತ್ತು ಗೋವಿಂದರಾಜು ಈ ಚಳವಳಿಯಲ್ಲಿ ಭಾಗವಹಿಸಿದರು.[೨] ಅಲೂರು ಹನುಮಂತಪ್ಪ ಮತ್ತು ಗೋವಿಂದ ರಾಜು ಮುಂದಿನ ದಿನಗಳಲ್ಲಿ ನೆಲಮಂಗಲ ತಾಲ್ಲೂಕಿನ ರಾಜಕೀಯ ವ್ಯಕ್ತಿಗಳಾಗಿ ಗುರುತಿಸಿಕೊಂಡರು.

**೩.೧. ಸ್ವಾತಂತ್ರ್ಯ ಹೋರಾಟಗಾರರು**

ರಾಷ್ಟ್ರದ, ರಾಜ್ಯದ, ಜಿಲ್ಲೆಯ ವಿವಿದಡೆಗಳಲ್ಲಿ ನಡೆದ ಪ್ರಮುಖ ಚಳವಳಿಗಳಲ್ಲಿ, ಭಾಗವಹಿಸಿದವರ ಸಂಖ್ಯೆ ತಾಲ್ಲೂಕಿನಿಂದ ಕಡಿಮೆಯಿದ್ದರೂ ಕಡೆಗಣಿಸುವಂತಹುದಲ್ಲ. ಚಳವಳಿಯ ವಿವಿಧ ಘಟ್ಟಗಳನ್ನು ಅವಲೋಕಿಸಿದಾಗ ಈ ತಾಲ್ಲೂಕಿನ ಸ್ವಾತಂತ್ರ್ಯ ಹೋರಾಟಗಾರರ ಕೊಡುಗೆ ತಿಳಿಯುತ್ತದೆ.

**೩.೧.೧. ರಾಜಾ ಶ್ರೀಕಂಠ ಶ್ರೇಷ್ಠಿ:** ನೆಲಮಂಗಲ ತಾಲ್ಲೂಕಿನ ತ್ಯಾಮಗೊಂಡ್ಲುವಿನಲ್ಲಿ ರಾಜಾ ಶ್ರೀಕಂಠ ಶ್ರೇಷ್ಠಿಯವರಿಂದ ಈ ಭಾಗದ ಜನರು ರಾಜಕೀಯವಾಗಿ ಜಾಗೃತರಾಗಿ ಸ್ವಾತಂತ್ರ್ಯ ಹೋರಾಟಕ್ಕೆ ಸನ್ನದ್ಧರಾದರು. ರಾಜಾ ಶ್ರೀಕಂಠ ಶ್ರೇಷ್ಠಿಯವರು ಕ್ರಿ.ಶ. ೧೯೦೮ ರಲ್ಲಿ ರಾಜಾ ನರಸಯ್ಯ ಶ್ರೇಷ್ಠಿ ಮತ್ತು ವರಲಕ್ಷ್ಮಮ್ಮನವರ ಮಗನಾಗಿ ತ್ಯಾಮಗೊಂಡ್ಲುವಿನಲ್ಲಿ ಜನಿಸಿದರು. ತಂದೆ ರಾಜಾ ನರಸಯ್ಯ ಶ್ರೇಷ್ಠಿಯವರೂ ಕೂಡ ಥಿಯೋಸಾಫಿಕಲ್ ಸೊಸೈಟಿಯ ಅಧ್ಯಕ್ಷರಾಗಿದ್ದರು.

ರಾಜಾ ಶ್ರೀಕಂಠ ಶ್ರೀಷ್ಠಿಯವರು ಎಸ್.ಎಸ್. (ಲೋಯರ್ ಸೆಕೆಂಡರಿ) ವಿದ್ಯಾಭ್ಯಾಸವನ್ನು ಪಡೆದರು. ನಂತರದ ದಿನಗಳಲ್ಲಿ ಸಾರ್ವಜನಿಕ ಕಾರ್ಯಗಳಲ್ಲಿ ತೊಡಗಿದರು. ತನ್ನ ತಂದೆಯ ಪ್ರೇರಣೆಯಿಂದ ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರೀಯವಾಗಿ ಪಾಲ್ಗೊಂಡರು. ತ್ಯಾಮಗೊಂಡ್ಲು ಹಾಗೂ ಸುತ್ತಮುತ್ತಲ ಪ್ರದೇಶಗಲ್ಲಿ ಹೋರಾಟ ಮಾಡಲು ಮುಂದಾದರು. ಇವರು ಗಾಂಧಿಜಿಯವರ ಕಟ್ಟಾ ಅನುಯಾಯಿ. ಸತ್ಯ ಮತ್ತು ಅಹಿಂಸೆಗಳಲ್ಲಿ ಅಪಾರ ನಂಬಿಕೆ ಇಟಿದ್ದರು.

೧೯೩೪ರ ಜೂನ್ ೪ ರಂದು ಗಾಂಧೀಜಿಯವರು ಹರಿಜನ ಪ್ರವಾಸಕ್ಕಾಗಿ ನೆಲಮಂಗಲದ ದಾಬಸಪೇಟೆಗೆ ಭೇಟಿ ನೀಡಿದರು. ಈ ಸಮಯದಲ್ಲಿ ರಾಜಾ ಶ್ರೀಕಂಠ ಶ್ರೇಷ್ಠಿಯವರು ದಾಬಸಪೇಟೆಗೆ ಹೋಗಿ ಮಹಾತ್ಮಗಾಂಧೀಜಿಯವರನ್ನು ತ್ಯಾಮಗೊಂಡ್ಲುವಿನಗೆ ಕರೆತಂದರು. ಇಂದಿನ ದೇವರಾಜ ಸರ್ಕಲ್ ಅಂದಿನ ಸಮಾರಂಭದ ವೇದಿಕೆಯಾಗಿತ್ತು. ಇವರೊಂದಿಗೆ ಮಹದೇವ ದೇಸಾಯಿ, ಸರೋಜಿನಿ ನಾಯ್ಡು, ಹರಿಜನ ಫಂಡ್ ಸಂಗ್ರಹಣೆಯ ಸಲುವಾಗಿ ಬಂದಿದ್ದರು. ಈ ಸಮಾರಂಭದಲ್ಲಿ ಶ್ರೀಕಂಠ ಶ್ರೇಷ್ಠಿಯವರ ತಂದೆ, ಥಿಯೋಸಾಫಿಕಲ್ ಸೊಸೈಟಿಯ ಅಧ್ಯಕ್ಷರಾಗಿದ್ದ ರಾಜಾ ನರಸಯ್ಯ ಶ್ರೇಷ್ಠಿ ವೇದಿಕೆಗೆ ಗಾಂಧೀಜಿಯವರನ್ನು ಸ್ವಾಗತಿಸಿ ೫೦೦ರೂ.ಗಳನ್ನು ಹರಿಜನ ಫಂಡ್‌ಗಾಗಿ ನೀಡಿದರು. ಮಹಾತ್ಮಗಾಂಧೀಜಿ, ಮದಹೇವ ದೇಸಾಯಿ, ಸರೋಜಿನಿ ನಾಯ್ಡು ಭಾಷಣ ಮಾಡಿದರು.[೩] ಈ ಸಮಾರಂಭ ಇಲ್ಲಿನ ಸ್ವಾತಂತ್ರ್ಯ ಹೋರಾಟಗಾರರಿಗೆ ಭದ್ರ ಬೂನಾದಿಯಾಯಿತು ಎಂದು ಸ್ವಾತಂತ್ರ್ಯ ಹೋರಾಟಗಾರರಾದ ನೂರು ವರ್ಷಗಳ ವಯೋವೃದ್ಧ ರಾಜಾ ಶ್ರೀಕಂಠ ಶ್ರೇಷ್ಠಿಯವರು ಈಗಲೂ ಜ್ಞಾಪಿಸಿಕೊಳ್ಳುತ್ತಾರೆ. ಹೀಗೆ ಎಲ್ಲರನ್ನು ಸಂಘಟಿಸುವ ಚಾಣಾಕ್ಷತನ, ಹಿಡಿದ ಕೆಲಸವನ್ನು ಪಟ್ಟು ಬಿಡದೇ ಮುಗಿಸುವ ಛಲಗಾರರಾಗಿದ್ದು,ಸದಾ ಸ್ವಾತಂತ್ರ್ಯ ಹೋರಾಟಗಾರರಿಗೆ ಬೆಂಬಲ ಕೊಡುತ್ತಿದ್ದರು.

ನೆಲಮಂಗಲ ತಾಲ್ಲೂಕಿನಲ್ಲಿ ಸ್ವಾತಂತ್ರ್ಯ ಚಳುವಳಿ ತೀವ್ರಗೊಳ್ಳುತ್ತಿರುವ ಸಮಯದಲ್ಲಿ ೧೯೪೨ರ ರ ಆಗಸ್ಟ ೮ ರಂದು ಗಾಂಧೀಜಿಯವರು ಕ್ವಿಟ್ ಇಂಡಿಯಾ (ಭಾರತ ಬಿಟ್ಟು ತೊಲಗಿ) ಚಳುವಳಿಗೆ ಕರೆಕೊಟ್ಟರು. ಈ ಚಳುವಳಿಯ ಸಮಯದಲ್ಲಿ ಗಾಂಧೀಜಿಯವರು 'ಮಾಡು ಇಲ್ಲವೇ ಮಡಿ' ಎಂಬ ಘೋಷಣೆಯನ್ನೂ ನೀಡಲಾಯಿತು. ಈ ಚಳುವಳಿಯಲ್ಲಿ ರಾಜ ಶ್ರೀಕಂಠ ಶ್ರೇಷ್ಠಿಯವರು ಹಾಗೂ ಅವರ ಜೊತೆ ವಿದ್ಯಾರ್ಥಿಗಳು ಮತ್ತು ಕಾರ್ಮಿಕರು ಸಕ್ರೀಯವಾಗಿ ಪಾಲ್ಗೊಂಡು ಅಂಗಡಿಗಳನ್ನು ಮುಚ್ಚಿಸಿದರು. ಎರಡನೆಯ ಮಹಾಯುದ್ಧದ ಕಾಲವಾಗಿ ಅಕ್ಕಿ, ಸೀಮೆಎಣ್ಣೆ, ಸೌದೆಗಳ ಮಾರಟದ ಮೇಲೆ ನಿಯಂತ್ರಣ ಹೇರಿದಾಗ ಜನರು ನಾನಾ ರೀತಿಯ ತೊಂದರೆಗಳಿಗೆ ಒಳಗಾಗಿದ್ದ ಸಂದಿಗ್ದ ಕಾಲ ಅದು. ಬೆಂಗಳೂರಿನ ಚಿಕ್ಕಲಾಲ್‌ಬಾಗ್‌ನಲ್ಲಿ ಸಾರ್ವಜನಿಕ ಸಮಾರಂಭವನ್ನು ಏರ್ಪಡಿಸಲಾಯಿತು.ಎಚ್.ಸಿ. ಸೂರ್ಯನಾರಾಯಣ ಕೆಂಗಲ್ ಹನುಮಂತಯ್ಯ ಮತ್ತು ಕೆ. ರಾಮಸ್ವಾಮಿಯವರ ಜೊತೆ ರಾಜಾ ಶ್ರೀಕಂಠ ಶ್ರೇಷ್ಠಿಯವರು ಭಾಗವಹಿಸಿದರು. ಅಹಿಂಸಾತ್ಮಕವಾದ ಈ ಚಳುವಳು ಹಿಂಸಾ ಚಳುವಳಿಯೂ ಆಗಬೇಕಾಯಿತು. ಮಧ್ಯದ ಅಂಗಡಿಗಳ ಮುಂದೆ ಪಿಕೆಂಟಿಕ್ ಮಾಡುವುದು. ದೂರವಾಣಿ ತಂತಿಗಳನ್ನು ಕತ್ತರಿಸುವುದು. ರೈಲು ಮತ್ತು ಬಸ್ಸು ಸಂಚಾರಗಳಿಗೆ ಅಡ್ಡಿಪಡಿಸುವುದು ಮೊದಲಾದ ತೀವ್ರ ಪ್ರಚೋದನಾಕಾರಿ ಕಾರ್ಯಗಳನ್ನು ಕೈಗೊಳ್ಳಲಾಯಿತು. ಆಗಸ್ಟ್೧೧ ಹಾಗೂ ೧೨,ರಂದು ಚಳುವಳಿಗಾರರು ತುಮಕೂರು ಮಾರ್ಗವಾಗಿ ರೈಲ್ವೆ ಟಿಕೆಟ್‌ಇಲ್ಲದೇ ನಿಡುವಂದಕ್ಕೆ ಪ್ರಯಾಣ ಮಾಡಿದರು. ಅಲ್ಲಿನ ಸುತ್ತ ಮುತ್ತಲ ಪ್ರದೇಶಗಳಲ್ಲಿ ಚಳುವಳಿಯನ್ನು ಆರಂಭಿಸಿದರು ನೆಲಮಂಗಲ ಹತ್ತಿರದ ಗೊಲ್ಲಹಳ್ಳಿಯಲ್ಲಿ ವಿದ್ಯಾರ್ಥಿಗಳು ಮತ್ತು ಕಾರ್ಮಿಕರು ಚಳುವಳಿಯಲ್ಲಿ ಭಾಗವಹಿಸಿ ಮಧ್ಯದ ಅಂಗಡಿಗಳನ್ನು ಮುಚ್ಚಿಸಿದರು. ಪೋಲಿಸರು ಗೋಲಿಬಾರ್ ನಡೆಸಿ, ರಾಜಾ ಶ್ರೀಕಂಠ ಶ್ರೇಷ್ಠಿಯವರನ್ನೂ ಸೇರಿಸಿದಂತೆ ಅನೇಕ ಜನರನ್ನು ಬಂಧಿಸಿದರು. ಇವರು ಬೆಂಗಳೂರಿನ ಕೇಂದ್ರ ಕಾರಾಗೃಹದಲ್ಲಿ ಮೂರು ತಿಂಗಳುಗಳ ಕಾಲ ಜೈಲುವಾಸವನ್ನು ಅನುಭವಿಸಿದರು. ಇವರು ಭಾರತ ಸ್ವಾತಂತ್ರ್ಯಗೊಂಡಾಗ ಸ್ಥಳೀಯರಿಂದ ದವಸ-ಧಾನ್ಯಗಳನ್ನು ಸಂಗ್ರಹಿಸಿ ತ್ಯಾಮಗೊಂಡ್ಲುವಿನ ಮೈದಾನದಲ್ಲಿ ಬಡ ಬಗ್ಗರಿಗೆ ಅನ್ನ ಸಂತರ್ಪಣೆಯನ್ನು ಏರ್ಪಡಿಸಿ ಸಿಹಿ ಹಂಚಿ ಆಗಸ್ಟ್ ೧೫, ೧೯೪೭ರಂದು ಸ್ವಾತಂತ್ರ್ಯೋತ್ಸವವನ್ನು ಆಚರಿಸಿದರು.

**೩.೧.೨. ಕೆ. ಕೃಷ್ಣಪ್ಪ:** ನೆಲಮಂಗಲ ತಾಲ್ಲೂಕಿನ ಗುಂಡೇನಹಳ್ಳಿಯಲ್ಲಿ ಜನಿಸಿದ ಕೆ. ಕೃಷ್ಣಪ್ಪನವರು ತಮ್ಮ ಜೀವಿತಾವಧಿಯಲ್ಲಿ ಪ್ರಮುಖ ಸ್ವಾತಂತ್ರ್ಯತ ಹೋರಾಟಗಾರರಾಗಿ ಗುರುತಿಸುಕೊಂಡು ಗುಂಡೇನಹಳ್ಳಿ

ಕೃಷ್ಣಪ್ಪ ಎಂದೇ ಹೆಸರಾದರು. ತ್ಯಾಮಗೊಂಡ್ಲುವಿನ ರಾಜಾ ಶ್ರೀಕಂಠಶ್ರೇಷ್ಠಿರವರ ಜೊತೆಗೆ ಸೇರಿಕೊಂಡು ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರೀಯವಾಗಿ ಪಾಲ್ಗೊಂಡರು. ಕ್ವಿಟ್ ಇಂಡಿಯಾ ಚಳುವಳಿ ತೀವ್ರಗೊಳ್ಳುತ್ತಿರುವ ಸಮಯದಲ್ಲಿ ಕೆ. ಕೃಷ್ಣಪ್ಪನವರು ಈ ಚಳುವಳಿಯ ಮುಖಂಡತ್ವವನ್ನು ವಹಿಸಿಕೊಂಡರು ದೂರವಾಣಿ ತಂತಿಗಳನ್ನು ಕತ್ತರಿಸುವುದು, ಮದ್ಯದ ಅಗಂಡಿಗಳ ಮುಂದೆ ಪಿಕೆಟಿಂಗ್ ಮಾಡುವುದು, ರೈಲು ಹಾಗೂ ಬಸ್ಸು ಸಂಚಾರಗಳಿಗೆ ಅಡ್ಡಿಪಡಿಸುವುದು ಇವೇ ಮೊದಲಾದ ದಮನಕಾರಿ ಕಾರ್ಯಗಳನ್ನು ಕೈಗೊಳ್ಳಲಾಯಿತು ಎಂದು ವಯೊವೃದ್ಧರಾದ ಕೆ. ಕೃಷ್ಣಪ್ಪನವರು ಈಗಲೂ ನೆನಪಿಸಕೊಳ್ಳುತ್ತಾರೆ. ಈ ಚಳುವಳಿಯಲ್ಲಿ ಪೋಲಿಸರು ಗೋಲಿಬಾರ್‌ಗಳನ್ನು ನಡೆಸಿದರು. ಕೆ.ಕೃಷ್ಣಪ್ಪನವರು ಸೇರಿದಂತೆ ಅನೇಕ ಜನರು ದಸ್ತಗಿರಿಯಾಗಿ ಜೈಲು ಸೇರಿದರು. ಬೆಂಗಳೂರಿನ ಕಾರಗೃದಲ್ಲಿ ಆರು ತಿಂಗಳುಗಳ ಕಾಲ ಜೈಲುವಾಸವನ್ನು ಅನುಭವಿಸಿ ಬಿಡುಗಡೆ ಹೊಂದಿದರು.ಮುಂದಿನ ಮೈಸೂರ್ ಚಲೋ ಚಳವಳಿಯಲ್ಲಿಯೂ ಭಾಗವಹಿಸಿ ಹೋರಾಟಗಳನ್ನು ನಡೆಸಿದರು.

೩.೧.೩. **ಬಿ.ಆರ್. ಪ್ರಾಣೇಶರಾವ್** ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ಬಿ.ಆರ್. ಪ್ರಾಣೇಶರಾವ್‌ರವರು ಸ್ವಾತಂತ್ರ್ಯ ಹೋರಾಗಾರರಾಗಿ ಗುರುತಿಸಿ ಕೊಂಡವರು. ೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿದರು. ಹಾಗೆಯೇ ೧೯೪೭ರ ಮೈಸೂರು ಅರಮನೆ ಸತ್ಯಾಗ್ರಹದಲ್ಲಿ ಭಾಗವಹಿಸಿ ಒಂದೂವರೆ ತಿಂಗಳು ಶಿವಮೊಗ್ಗ ಜೈಲಿನಲ್ಲಿದ್ದು ಶಿಕ್ಷೆ ಅನುಭವಿಸಿದರು. ಬಿ.ಆರ್. ಪ್ರಾಣೇಶರಾವ್‌ರವರು ಆರಂಭದಿಂದಲೂ ಗಾಂಧೀಜಿಯವರ ತತ್ವಾದರ್ಶಗಳಿಗೆ ಮಾರುಹೋಗಿದ್ದು, ಮೈಸೂರು ನಗರ ವಿದ್ಯಾರ್ಥಿಕಾಂಗ್ರೇಸ್ ಪಕ್ಷದ ನಿಷ್ಠಾವಂತ ಕಾರ್ಯದರ್ಶಿಯಾಗಿದ್ದವರು.

ಬಿ.ಆರ್.ಪ್ರಾಣೇಶರವರು ೧೧ನೇ ಆಗಸ್ಟ್ ೧೯೨೭ರಂದು ರಂಗಪ್ಪ ಮತ್ತು ಅಚ್ಚಿ (ಲಕ್ಷ್ಮಿ) ಯವರ ಮಗನಾಗಿ ಜನಿಸಿದರು. ಇವರು ತಂದೆಯ ಕೆಲಸ ನಿಮಿತ್ತ ಮೈಸೂರಿನಲ್ಲಿ ವಾಸ್ತವ್ಯ ಹೂಡಿದ್ದರು.ನಂತರ ಚಿಕ್ಕ ವಯಸ್ಸಿನಲ್ಲಿಯೇ ತಂದೆಯನ್ನು ಕಳೆದುಕೊಂಡು ತಾಯಿಯ ತವರು ಊರಾದ ನೆಲಮಂಗಲ ತಾಲ್ಲೂಕಿನ ಶಿವಗಂಗೆಯ ಬಳಿಯಿರುವ ಶ್ರೀಗಿರಿಪುರದ ತಾತನ ಮನೆಯಲ್ಲಿ ಬೆಳೆದರು. ಪ್ರಾಥಮಿಕ ಶಿಕ್ಷಣವು ಶ್ರೀಗಿರಿಪುದಲ್ಲಿಯೇ ಆಯಿತು. ಆಮೇಲೆ ಪ್ರಾಣೇಶರಾವ್‌ರವರು ನೆಲಮಂಗಲದ ಸರ್ಕಾರಿ ಮಾಧ್ಯಮಿಕ ಶಾಲೆಯಲ್ಲಿ ಎರಡನೆಯ ತರಗತಿಗೆ ಸೇರಿದರು. ೧೯೪೨ರ ಮಾರ್ಚಿನಲ್ಲಿ ಎಲ್.ಎಸ್. ಪರೀಕ್ಷೇಯಲ್ಲಿ ತೇರ್ಗಡೆಯಾದರು. ನಂತರ ಮೈಸೂರಿನ ಮಹಾಜನ ಪ್ರೌಢಶಾಲೆಗೆ ಸೇರಿದರು[೮]. ಇಲ್ಲಿಂದ ಅವರ ಸ್ವಾತಂತ್ರ್ಯ ಹೋರಾಟ ಪ್ರಾರಂಭವಾಯಿತು. ಮಹಾಜನ ಪ್ರೌಢಶಾಲೆಯಲ್ಲಿನ ಶಿಕ್ಷಕರಾದ ಕೃಷ್ಣಸ್ವಾಮಿ, ಎಚ್, ಆನಂತರಾವ್, ರಾಮಚಂದ್ರ ಜೋಯಿಸರು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ್ದರು. ಈ ರೀತಿಯಾಗಿ ಶಿಕ್ಷಕ ವೃಂದವು ವಿದ್ಯಾರ್ಥಿಗಳ ಮೇಲೆ ಪ್ರಭಾವ ಬೀರಿದರು.

ನೆಲಮಂಗಲದಲ್ಲಿದ್ದಗಾಲೇ ಚಳುವಳಿಯ ಮೆರವಣಿಗೆಗಳ ನೋಟ ಅವರನ್ನು ಅಕರ್ಷಿಸಿತ್ತು. ಅಂದರೆ ಬಾಲ್ಯದಲ್ಲಿ ಬೆಳೆದು ಕಾಲ ಸ್ವಾತಂತ್ರ್ಯ ಹೋರಾಟ ಯುಗವಾಗಿತ್ತು ಹೋರಾಟ ಕಾಲದ ಆದರ್ಶಗಳು, ಕನಸುಗಳು, ಮೌಲ್ಯಗಳು ಎಲ್ಲೆಡೆ ತಾಂಡವಾಡುತ್ತಿದ್ದು ಅವರ ಮೇಲೆ ಪ್ರಭಾವ ಬೀರಿದ್ದವು. ೧೯೪೨ ಆಗಸ್ಟ್‌ನಲ್ಲಿ ಕ್ವಿಟ್ ಇಂಡಿಯಾ ಚಳುವಳಿಯು ದೇಶದಾದ್ಯಂತ ಆರಂಭವಾಯಿತ್ತು. ಪ್ರಾಣೇಶರಾವ್‌ರವರು ಸೇರಿಂದತೆ ಮಹಾಜನ ಪ್ರೌಢಶಾಲೆಯ ವಿದ್ಯಾರ್ಥಿಗಳು ಚಳುವಳಿಯಲ್ಲಿ ಭಾಗವಹಿಸಿ ಮುಷ್ಕರ ನಡೆಸಿದರು. ಕೆಲವು ವಿದ್ಯಾರ್ಥಿ ಮುಖಂಡರನ್ನು ದಸ್ತಗಿರಿ ಮಾಡಲಾಯಿತು. ಅದರೆ ಪ್ರಾಣೇಶರಾವ್‌ರವರು ದಸ್ತಗಿರಿ ಆಗಲಿಲ್ಲ.

೧೯೪೨ರ ಚಾಲೇಜಾವ್ ಚಳುವಳಿಯ ನಂತರ ರಾಷ್ಟ್ರೀಯ ಆಗುಹೋಗುಗಳ ಬಗ್ಗೆ ಜನಜಾಗೃತಿ ಮೂಡಿಸಲು ಹಾಗೂ ರಚನಾತ್ಮಕ ಕಾರ್ಯಗಳನ್ನು ಕೈಗೊಳ್ಳಲು ಒಂಟಿಕೊಪ್ಪಲಿನಲ್ಲಿ 'ತಿಲಕ್ ಸಂಘ'ವನ್ನು ಸ್ಥಾಪಿಸಲಾಯಿತು. ಸಿ.ಎಸ್. ರಾಮಚಂದರಾವ್, ತುಳಸೀದಾಸ್, ಜಿ. ಎಸ್ ಸುಬ್ರಮಣ್ಯ, ಪ್ರಾಣೇಶರಾವ್ ಮುಂತಾದವರು ಒಡಗೂಡಿ ತಿಲಕ್ ಸಂಘದ ಚಟುವಟಿಕೆಯಲ್ಲಿ ತೊಡಗಿಕೊಂಡರು. ಜಯಪ್ರಕಾಶ ನಾರಾಯಣ್, ಕೆ.ಟಿ. ಭಾಷ್ಯಂ, ಸಿದ್ಧವನಹಳ್ಳಿ ಕೃಷ್ಣಶರ್ಮ, ಎಸ್. ನಿಜಲಿಂಗಪ್ಪ, ಕೆಂಗಲ್ ಹನುಮಂತಯ್ಯ ಹೆಚ್.ಸಿ. ದಾಸಪ್ಪರವರ ಭಾಷಣಗಳುನ್ನು ಈ ಸಂಘದ ಮೂಲಕ ಏರ್ಪಡಿಸುತ್ತಿದ್ದರು. ೧೯೪೭ರ ಆಗಸ್ಟ್ ೧೪ ರ ಮಧ್ಯರಾತ್ರಿ ಸ್ವಾತಂತ್ರ್ಯೋತ್ಸವ ಅಂಗವಾಗಿ ಈ ಸಂಘದ ವತಿಯಿಂದ ಸಿಹಿ ಹಂಚಿದರು. ತಿಲಕ್ ಸಂಘದಲ್ಲಿ ನೂಲುವುದು ನೇಯ್ಗೆ, ಖಾದಿಬಟ್ಟೆಯ ಮಾರಾಟ ಮುಂತಾದವುಗಳನ್ನು ಮಾಡುತ್ತಿದ್ದರು.[೫] 'ಸ್ಟಡಿ ಸರ್ಕಲ್'ನಲ್ಲಿ ಗಾಂಧಿಯ ವಿಚಾರತತ್ವಗಳು ಸಮಾಜವಾದಿ ಸಿದ್ಧಾಂತ, ಖಾದಿ ಪ್ರಚಾರ, ಆರ್ಥಿಕ ಚಿಂತನೆಗಳನ್ನು ಚರ್ಚಿಸುತ್ತಿದ್ದರು.

ಜವಾಬ್ದಾರಿ ಸರ್ಕಾರಕ್ಕಾಗಿ ಮತ್ತೊಂದು ಹೋರಾಟ ಆರಂಭವಾಯಿತು. ಮೈಸೂರು ನಗರ ವಿದ್ಯಾರ್ಥಿ ಕಾಂಗ್ರೆಸ್‌ನ ಕಾರ್ಯದರ್ಶಿಯಾದ ಪ್ರಾಣೇಶರಾವ್‌ರವರು ಮೊದಲನೇ ದಿನವೇ ಅರಮನೆ ಸತ್ಯಾಗ್ರಹದಲ್ಲಿ ಭಾಗವಹಿಸಬೇಕೆಂದು ತೀರ್ಮಾನವಾಗಿತ್ತು. ೧೯೪೭ರ ಸೆಪ್ಟೆಂಬರ್ ೪ ರಂದು ಬೆಂಗಳೂರಿನಿಂದ ಕಾಂಗ್ರೆಸ್ ಮುಖಂಡರ 'ಮೈಸೂರು ಚಲೋ' ಪಾದಯಾತ್ರೆ ಆರಂಭವಾಗಬೇಕಿದ್ದಿತು. ಮೈಸೂರಿಗೆ ಬರುವ ದಾರಿಯುದ್ದಕ್ಕೂ ಜನಜಾಗೃತಿಯನ್ನುಂಟುಮಾಡಿ ಜನಸ್ತೋಮದ ಬೆಂಬಲ ಗಳಿಸುವುದೇ ಈ ಪಾದಯಾತ್ರೆಯ ಮುಖ್ಯ ಉದ್ದೇಶವಾಗಿತ್ತು. ಆದರೆ ಆ ದಿನವೇ ಪೊಲೀಸರ ಅತಿಥಿಯಾಗಿ ಪ್ರಾಣೇಶರಾವ್‌ರವರು ಮೈಸೂರು ಜೈಲು ಸೇರಿದರು. ಅನಂತರ ಇವರನ್ನು ಶಿವಮೊಗ್ಗ ಜೈಲಿಗೆ ಸ್ಥಳಾಂತರಿಸಿದರು. ಈ ಜೈಲು ಸಾಂಸ್ಕೃತಿಕ ಕೇಂದ್ರವಾಗಿ ಚರ್ಚಾಸ್ಪರ್ಧೆಗಳನ್ನು ಏರ್ಪಡಿಸುತ್ತಿತ್ತು.[೬] ಇಲ್ಲಿ ಪ್ರಚಲಿತ ವಿಷಯಗಳ ಬಗ್ಗೆ ಚರ್ಚೆ ನಡೆಯುತ್ತಿತ್ತು. ಈ ಚರ್ಚೆಯಲ್ಲಿ ಹೆಚ್. ಸಿ. ದಾಸಪ್ಪ, ಟಿ. ಮರಿಯಪ್ಪ, ಕಡಿದಾಳ್ ಮಂಜಪ್ಪ ಮುಂತಾದ ಹಿರಿಯರು ಪಾಲ್ಗೊಳ್ಳುತ್ತಿದ್ದರು. ಪ್ರಾಣೇಶರಾವ್‌ರವರು ಕರ್ನಾಟಕ ಏಕೀಕರಣ ಕುರಿತು "ಏಕೀಕೃತ ಕರ್ನಾಟಕ ಕೂಡಿದರೆ ಕರ್ನಾಟಕ ರಾಜ್ಯವು ಭಾರತದಲ್ಲಿಯೇ ಅಗ್ರಮಾನ್ಯ ರಾಜ್ಯವಾಗುತ್ತದೆ" ಎಂದು ಚರ್ಚಿಸಿದಾಗ ಎಲ್ಲರೂ ಒಪ್ಪಿಕೊಂಡರು.

ಸುಮಾರು ಒಂದೂವರೆ ತಿಂಗಳ ಕಾಲ ಜೈಲಿನಲ್ಲಿ ಕಳೆಯುವ ಹೊತ್ತಿಗೆ ಹೊರಗಡೆ ಚಳವಳಿ ಅತ್ಯಂತ ವ್ಯಾಪಕವಾಗಿತ್ತು. ಆಡಳಿತ ಕುಸಿದು ಬಿದ್ದಾಗ ವಿಧಿಯಿಲ್ಲದೆ ಮಹಾರಾಜರಾಗಿದ್ದ ಜಯಚಾಮರಾಜ ಒಡೆಯರು ಜವಾಬ್ದಾರಿ ಸರ್ಕಾರದ ಸ್ಥಾಪನೆಗೆ ಒಪ್ಪಿಕೊಂಡರು. ನಂತರ ಶಿವಮೊಗ್ಗ ಜೈಲಿನಲ್ಲಿದ್ದ ಎಲ್ಲರನ್ನೂ ಬಿಡುಗಡೆ ಮಾಡಿದರು. ಒಟ್ಟಿನಲ್ಲಿ ನೆಲಮಂಗಲದ ಕೇಂದ್ರಸ್ಥಾನದಲ್ಲಿ ನಡೆದ ಚಳವಳಿಯಲ್ಲಿ ಪ್ರಾಣೇಶರಾವ್‌ರವರು ಭಾಗವಹಿಸದಿದ್ದರೂ ನೆಲಮಂಗಲದವರೇ ಆದ ಇವರು ಮೈಸೂರಿನ ಕೇಂದ್ರಸ್ಥಾನದಲ್ಲಿದ್ದುಕೊಂಡು ಚಳವಳಿಯಲ್ಲಿ ಪಾಲ್ಗೊಂಡರು.

**೩.೧.೪. ಬಿ. ಎಸ್. ರಾಜರತ್ನಂ**

ಸ್ವಾತಂತ್ರ್ಯ ಚಳವಳಿಯ ಕೇಂದ್ರಸ್ಥಾನವಾದ ನೆಲಮಂಗಲದಲ್ಲಿ ಬಿ. ಎಸ್. ರಾಜರತ್ನಂರವರೂ ಕೂಡ ಸ್ವಾತಂತ್ರ್ಯಚಳವಳಿಯಲ್ಲಿ ಭಾಗವಹಿಸಿದರು. ಇವರು ವಿದ್ಯಾರ್ಥಿಯಾಗಿರುವಾಗಲೇ ಚಳವಳಿಯಲ್ಲಿ ಪಾಲ್ಗೊಂಡಿದ್ದರು. ನೆಲಮಂಗಲದಲ್ಲಿನ ಸ್ವಾತಂತ್ರ್ಯ ಚಳವಳಿಯ ಮುಖಂಡರು ಹರತಾಳ ನಡೆಸಲು ಹೊರಟರು. ಇನ್ನೂ ವಿದ್ಯಾರ್ಥಿಯಾಗಿದ್ದ ಬಿ.ಎಸ್. ರಾಜರತ್ನಂ ರವರು ಆ ಗುಂಪಿನ ಸೇರಿಕೊಂಡು ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರೀಯವಾಗಿ ಭಾಗವಹಿಸಿದರು.

೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸ ಶಾಲಾಬಂದ್, ತಾಲ್ಲೂಕು ಕಛೇರಿ ಎದುರು ಪಿಕೆಟಿಂಗ್ ಬಿತ್ತಿ ಪತ್ರಗಳನ್ನು ಹಂಚುವದು. ಖಾದಿ ಧಾರಣೆ, ವಿದೇಶಿ ವಸ್ತುಗಳ ಬಹಿಷ್ಕಾರ, ಸಭೆ ಸಮಾರಂಭಗಳನ್ನು ಸಂಘಟಿಸುವುದು, ಮಧ್ಯಪಾನ, ನಿಷೇಧಕ್ಕಾಗಿ ಹೋರಾಟಗಳು ನಡೆದವು. ಈಚಲು ಮರಗಳನ್ನು ಕತ್ತರಿಸಿ ೫೦ರೂ.ದಂಡ ಕಟ್ಟಲಾಯಿತು ಇವೇ ಮೊದಲಾದ ಕಾರ್ಯಕ್ರಮಗಳ ಮೂಲಕ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಇವರ ಸಾಧನೆ ಶ್ಲಾಘನೀಯ ನೆಲಮಂಗದಲ್ಲಿ ಹೋರಾಟ ನಡೆಯುತ್ತಿರುವಾಗಲೇ ಪೋಲಿಸರು ಇವರನ್ನು ಬಂಧಿಸಿದರು. ಇವರು ಬೆಂಗಳೂರಿನ ಕೇಂದ್ರ ಕಾರಾಗೃದಲ್ಲಿ ಮೂರು ತಿಂಗಳುಗಳ ಜೈಲುವಾಸವನ್ನು ಅನುಭವಿಸಿದರು. ಅನಂತರ ಇವರು ಜೈಲಿನಿಂದ ಬಿಡುಗಡೆಯಾದರು.

ರಾಷ್ಟ್ರಕ್ಕೆ ಸ್ವಾತಂತ್ರ್ಯ ದೊರಕಿದರೂ ದೇಶಿಯ ರಾಜರು ಜವಾಬ್ದಾರಿ ಸರಕಾರ ನೀಡಲಿಲ್ಲ. ಇದಕ್ಕಾಗಿ ಅರಮನೆ ಸತ್ಯಾಗ್ರಹ ಪ್ರಾರಂಭವಾಯಿತು. ಈ ಚಳುವಳಿಯಲ್ಲಿ ಬಿ.ಎಸ್. ರಾಜರತ್ನಂ ರವರು ಕೂಡ ಭಾಗವಹಿಸಿದರು. ತಾಲ್ಲೂಕಿನ ಎಲ್ಲಾ ಜನರು ಒಂದುಗೂಡಿದರು. ಬಿ.ಎಸ್. ರಾಜರತ್ನಂ ಮತ್ತು ಚಳುವಳಿಗಾರರು ಅನೇಕ ಸಭೆ ಸಮಾರಂಭಗಳನ್ನು ಆಯೋಜಿಸಿದರು. ಚಳುವಳಿಯಲ್ಲಿ ಕಲ್ಲು ಮಣ್ಣು ತೂರಿ ಗಲಾಟೆ ಪ್ರಾರಂಭಿಸಿದರು, ಸರಕಾರವು ಚಳುವಳಿಯ ನಾಯಕರನ್ನು ಹತ್ತಿಕ್ಕುವ ಪ್ರಯತ್ನ ಮಾಡಿತು. ಕೊನೆಗೆ ಜವಾಬ್ದಾರಿ ಸರಕಾರ ಅಸ್ಥಿತ್ವಕ್ಕೆ ಬಂದು ಚಳವಳಿ ನಿಂತಿತು ಎಂದು ಬಿ.ಎಸ್. ರಾಜರತ್ನಂ ರವರು ಈಗಲೂ ಜ್ಞಾಪಿಸಿಕೊಳ್ಳುತ್ತಾರೆ.

**ಮಹಿಳಾ ಸ್ವಾತಂತ್ರ್ಯ ಹೋರಾಟಗಾರರು**

ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದಂತೆ ಮಹಿಳೆಯರ ಬವಣೆಯನ್ನು ಬಿಂಬಿಸದೇ ಇರುವುದ ಸಾಧ್ಯವಿಲ್ಲ. ಅಂದರೆ ನೆಲಮಂಗಲ ತಾಲ್ಲೂಕಿನಲ್ಲಿ ನಡೆದ ಸ್ವಾತಂತ್ರ್ಯ ಹೋರಾಟವು ಹೆಚ್ಚಾಗಿ ಪುರುಷರಿಂದ ಕೂಡಿದ ಹೋರಾಟವಾಗಿತ್ತು. ಮಹಿಳೆಯರ ಸಹಭಾಗಿತ್ವವು ಅತ್ಯಂತ ಕಡಿಮೆಯಿತ್ತು. ಆದರೂ ಕೆಲವು ಮಹಿಳೆಯರು ಈ ಚಳುವಳಿಯ ಹೋರಾಟ ನಡೆಸಿದರು. ಶ್ರೀಮತಿ ಪಾರ್ವತಮ್ಮನವರು ಕೆಲವು ರಚನಾತ್ಮಕ ಕಾರ್ಯಗಳಲ್ಲಿ ಭಾಗವಹಿಸುದರು. ಸ್ಥಳೀಯ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡುವುದು, ಖಾದಿ ಪ್ರಚಾರ ಮಾಡುವುದು, ಹರಿಜನ ಸೇವೆ ಮುಂತಾದ ಚಟುವಟಿಗಳನ್ನು ಕೈಗೊಂಡರು. ತಮ್ಮ ಪತಿ ಪರಮೇಶ್ವರಯ್ಯನವರು ಜೈಲು ಸೇರಿದಾಗ ತಮ್ಮ ಕುಟುಂಬವನ್ನು ಇವರು ನಿರ್ವಹಿಸುವುದರ ಜೊತೆಗೆ ಹೋರಾಟದಲ್ಲೂ ಭಾಗವಹಿಸಿದರು.

ಶ್ರೀಮತಿ ರುಕ್ಮಿಣಿಯಮ್ಮ ಮತ್ತು ತುಳಸಮ್ಮನವರು ಅವಳಿ ಮಕ್ಕಳಾಗಿದ್ದು ಸ್ವಾತಂತ್ರ್ಯ ಹೋರಾಟಗಾಂರಾದ ತ್ಯಾಮಗೊಂಡ್ಲುವಿನ ನರಸಿಂಹ ಎಂಬುವರನ್ನು ಇವರಿಬ್ಬರೂ ವಿವಾಹವಾದರು. ಪತಿಯ ಸ್ವಾತಂತ್ರ್ಯ ಚಳುವಳಿಯ ಕಾರ್ಯಗಳಲ್ಲಿ ಭಾಗವಹಿಸಿದರು. ಅಲ್ಲದೇ ತ್ಯಾಮಗೊಂಡ್ಲುವಿನ ಸ್ವಾತಂತ್ರ್ಯ ಹೋರಟಗಾರ ರಾಜಾ ಶ್ರೀಕಂಠ ಶ್ರೇಷ್ಠಿಯವರ ಮುಖಂಡತ್ವದ ಚಳುವಳಿಯಲ್ಲಿ ಭಾಗವಹಿಸಿದರು. ಖಾದಿ ನೂಲುವುದು, ಮದ್ಯದ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡುವುದು ಮುಂತಾದ ಚಟುವಟಿಗಳಲ್ಲಿ ಭಾಗವಹಿಸಿದರು. ಇವರ ಜೊತೆಗೆ ಶಾರದಮ್ಮ, ಅನ್ನಪೂರ್ಣನವರು ಕೂಡ ಚಳುವಳಿಯಲ್ಲಿ ಸಕ್ರೀಯವಾಗಿ ಪಾಲ್ಗೊಂಡರು.

ನೆಲಮಂಗಲ ತಾಲ್ಲೂಕಿನಲ್ಲಿ ಸ್ವಾತಂತ್ರ್ಯ ಚಳುವಳಿಯು ತೀವ್ರ ಸ್ವರೂಪ ಪಡೆದುಕೊಳ್ಳುತ್ತಿರುವಾಗ ೧೯೪೨ರ ಕ್ವಿಟ್ ಇಂಡಿಯಾ ಚಳುವಳಿ ಮತ್ತು ಮೈಸೂರು ಚಲೋ ಚಳುವಳಿಗಳು ಇಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಏಕೆಂದರೆ ಹಿಂದೆ ನಡೆದ ಚಳುವಳಿಗಳಿಂಗಿತ ಕ್ವಿಟ್ ಇಂಡಿಯಾ ಚಳುವಳಿ ಮತ್ತು ಮೈಸೂರು ಚಲೋ ಚಳುವಳಿಗಳು ನೆಲಮಂಗಲದಲ್ಲಿ ಹೆಚ್ಚು ಬಿರುಸಿನಿಂದ ನಡೆದಿರುವುದಾಗಿವೆ. ರಾಜ್ಯಾದ್ಯಂತ ನಡೆದ ಕ್ವಿಟ್ ಇಂಡಿಯಾ

ಚಳುವಳಿಯಲ್ಲಿ ಗಾಂಧೀಜಿಯವರ ಸಂದೇಶ 'ಮಾಡು ಇಲ್ಲವೇ ಮಡಿ' ಎಂಬ ಕೈ ಬರವಣಿಗೆಯ ಬಿತ್ತಿ ಪತ್ರ ಹಾಗೂ ಕರ ಪತ್ರಗಳನ್ನು ನೆಲಮಂಗಲದ ಚಳುವಳಿಗಾರರು ರಾತ್ರೋರಾತ್ರಿ ಬರೆದು ಹಂಚಿದರು. ಅಹಿಂಸಾತ್ಮಕವಾದ ಈ ಚಳುವಳಿಯಲ್ಲಿ ಉಪವಾಸ ಸತ್ಯಗ್ರಹಗಳು ನಡೆದವು. ಹೆಂಡದಂಗಡಿಗಳ ನಾಶ, ಕಾನೂನು ಭಂಗ, ಶಾಲಾ ಬಂದ್, ಇವೆಲ್ಲವೂ ತೀವ್ರವಾಗಿ ನಡೆದವು. ಚಳುವಳಿ ತೀವ್ರವಾದಂತೆ ಮುಖಂಡರಾದಂತಹ ರಾಜಾ ಶೀಕಂಠ ಶ್ರೇಷ್ಠಿರವರು ಮೊದಲು ದಸ್ತಗಿರಿಯಾಗಿ ಜೈಲು ಸೇರಿದರು. ನಂತರ ಕೆ. ಕೃಷ್ಣಪ್ಪ, ಬಿ.ಎಸ್.ರಾಜರತ್ನಂರವರು ಮತ್ತು ಪರಮೇಶ್ವರಯ್ಯ ಚಳುವಳಿಯನ್ನು ಮುನ್ನೆಡೆಸಿದರು.ಇವರು ಕೂಡ ಬಂಧನಕ್ಕೊಳಗಾಗಿ ಜೈಲು ಸೇರಿದರು. ಹಳ್ಳಿಯ ಮೂಲೆ ಮೂಲೆಗಳಲ್ಲಿಯೂ ಈ ಚಳುವಳಿ ವ್ಯಾಪಿಸಿ ತೀವ್ರವಾದ ಈ ಚಳುವಳಿಯಲ್ಲಿ ಚನ್ನಕೋಟಯ್ಯ, ಟಿ.ಆರ್. ಸತ್ಯಾನಾರಾಯಣ ಗುಪ್ತ, ಚನ್ನಗಿರಿಗೌಡ, ಟಿ.ಎಮ್.ಸಿದ್ದಗಂಗಾರಾಧ್ಯ, ಇವರೇ ಮಾದಲಾದವರು ತಾಲ್ಲೂಕಿನ ಪ್ರಮುಖರಾಗಿ ಭಾಗವಹಿಸಿದರು. ಇವರು ರೈಲು ಹಾಗೂ ಬಸ್ಸು ಸಂಚಾರಗಳಿಗೆ ಅಡ್ಡಿ, ಕಛೇರಿಗಳಿಗೆ, ಕಾರ್ಖಾನೆಗಳಿಗೆ ಜನ ಹೋಗದಂತೆ ಪಿಕೆಟಿಂಗ್ ಮಾಡುವುದು, ಸರ್ಕಾರಿ ಕಛೇರಿಗಳಿಗೆ ಬೆಂಕಿ ಹಚ್ಚುವುದು, ಮಧ್ಯವನ್ನು ತಯಾರಿಸುವ ಈಚಲು ಮರಗಳನ್ನು ಕಡಿಯುವುದು ಇವೇ ಮೊದಲಾದ ಪ್ರಚೋಚನಾಕಾರಿ ಕಾರ್ಯಗಳನ್ನು ಕೈಗೊಂಡರು. ಒಟ್ಟಿನಲ್ಲಿ ಪರಿಣಾಮಕಾರಿಯಾದ ಈ ಚಳುವಳಿಯಲ್ಲಿ ತಾಲ್ಲೂಕಿನ ಗಣ್ಯರು ತಮ್ಮ ಕರ್ತವ್ಯ ನಿಭಾಯಿಸಿದರು.

ಹಾಗೆಯೇ ಮೈಸೂರು ಚಲೋ ಚಳುವಳಿಯ ಜವಾಬ್ದಾರಿ ಸರಕಾರದ ರಚನೆಗಾಗಿ ಹೋರಾಟ ನಡೆಯಿತು. ನೆಲಮಂಗಲ ತಾಲ್ಲೂಕಿನಲ್ಲಿ ಸೆಪ್ಟೆಂಬರ್ ೧೪, ೧೯೪೭ರಂದು ಜವಾಬ್ದಾರಿ ಸರ್ಕಾರದ ರಚನೆಗಾಗಿ ಹೋರಾಟ ಪ್ರಾರಂಭಿಸಿದರು. ರಾಜಾ ಶ್ರೀಕಂಠ ಶ್ರೇಷ್ಠಿ ಮತ್ತು ಕೆ. ಕೃಷ್ಣಪ್ಪನವರ ನೇತೃತ್ವದಲ್ಲಿ ನಡೆಯಿತು. ಕಾರ್ಮಿಕರು, ವಿದ್ಯಾರ್ಥಿಗಳು, ಆಡಳಿತಗಾರರೂ ಸುತ್ತುವರಿದು ತಾಲ್ಲೂಕಿನ ಮಧ್ಯದ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡಲು ಪ್ರಾರಂಭಿಸಿದರು. ಕೊನೆಗೆ ಜವಾಬ್ದಾರಿ ಸರಕಾರ ರಚನೆಗಾಗಿ ಒಪ್ಪಿಗೆ ದೊರೆತ ಅಂಗವಾಗಿ ಚಳುವಳಿಯನ್ನು ಕೈಬಿಡಲಾಯಿತು.

ಭಾರತದ ಪ್ರತಿಯೊಂದು ಪ್ರದೇಶವು ತನ್ನ ಪರಿಮಿತಿಯೊಳಗೆ ಸ್ವಾತಂತ್ರ್ಯ ಹೋರಾಟಕ್ಕೆ ವಿಶಿಷ್ಟ ಕೊಡುಗೆಯನ್ನು ನೀಡಿವೆ. ಈ ದೃಷ್ಟಿಯಿಂದ ನೋಡಿದಾಗ ನೆಲಮಂಗಲ ತಾಲ್ಲೂಕು ಹೊರತಾಗಿ ನಿಲ್ಲುವುದಿಲ್ಲ.

**೩.೨ ರಾಜಕಾರಣ ೧೯೫೭ರವರೆಗೆ**

೧೯೪೭ರಲ್ಲಿ ಜವಾಬ್ದಾರಿ ಸರಕಾರದ ರಚನೆಗಾಗಿ ಜರುಗಿದ ಮೈಸೂರು ಚಲೋ ಚಳುವಳಿ ಯಶಸ್ವಿಯಾಗಿ ಜವಾಬ್ದಾರಿ ಸರ್ಕಾರ ರಚನೆಯಾಯಿತು. ೧೯೪೭ ಅಕ್ಟೋಬರ್ ೨೪ರಂದು ಕೆ.ಸಿ. ರೆಡ್ಡಿಯವರು ಮೈಸೂರು ಸಂಸ್ಥಾನದ ಮೊದಲ ಮುಖ್ಯಮಂತ್ರಿಯಾದರು.

೧೯೫೨ರ ಸಾರ್ವತ್ರಿಕ ಚುನಾವಣೆ ನಡೆಯುವ ತನಕ ಕೆ.ಸಿ. ರೆಡ್ಡಿಯವರ ಈ ಸಚಿವ ಸಂಪುಟವೇ ಮುಂದುವರಿಯಿತು. ಈ ಕಾಲಾವಧಿಯಲ್ಲಿ ನೆಲಮಂಗಲದ ಶ್ರೀಮತಿ ಸೀತಮ್ಮನವರು ಪುರಸಭೆಗೆ ಸದಸ್ಯೆಯಾಗಿ ಆಯ್ಕೆಯಾಗಿದ್ದರು. ಕರ್ನಾಟಕದಲ್ಲಿ ಪ್ರಪ್ರಥಮ ಮಹಿಳಾ (೧೯೪೮) ಪುರಸಭಾ ಸದಸ್ಯೆಯಾದ ಹೆಗ್ಗಳಿಗೆ ಇವರದ್ದು[೭]. ಇವರು ಅನೇಕ ಸಮಾಜ ಮುಖಿಯಾದ ಅಭಿವೃದ್ಧಿಯ ಕಾರ್ಯಗಳಲ್ಲಿ ತೊಡಗಿದರು. ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿಗೆ ಹೆಚ್ಚು ಶ್ರಮಿಸಿದರು. ಕುಡಿಯುವ ನೀರಿನ ವ್ಯವಸ್ಥೆ ಮಾಡಲಾಯಿತು. ಆನಂತರದ ದಿನಗಳ ಚುನಾವಣೆಗಳಲ್ಲಿ ಗೆದ್ದು ತಾಲ್ಲೂಕು ಅಭಿವೃದ್ಧಿ ಮಂಡಳಿಯ ಸದಸ್ಯರಾಗಿಯೂ ಕಾರ್ಯ ನಿರ್ವಹಿಸಿದ್ದರು.

**ಮೊದಲನೇ ಚುನಾವಣೆಗಳು ೧೯೫೨**

ಮೈಸೂರು ರಾಜ್ಯದಲ್ಲಿ ಜವಾಬ್ದಾರಿ ಸರ್ಕಾರ ರಚನೆಯಾದ ನಂತರ ರಾಷ್ಟ್ರೀಯ ಕಾಂಗ್ರೆಸ್ ರಾಜ್ಯದಲ್ಲಿ ಭದ್ರವಾಯಿತು. ಸ್ವಾತಂತ್ರ್ಯ ಹೋರಾಟಗಾರರು, ಜನಸೇವಾ ನಿರಂತರರಿಗೆ ಅಂದಿನ ರಾಜ್ಯದ ಕಾಂಗ್ರೆಸ್ ಮುಖಂಡರಾಗಿದ್ದಂತಹ ಶ್ರೀ ಕೆಂಗಲ್ ಹನುಮಂತಯ್ಯನವರು ಚುನಾವಣೆಯಲ್ಲಿ ಸ್ಪರ್ಧಿಸಲು ಟಿಕೇಟ್ ನೀಡಿ ಅವರ ಸೇವೆಯನ್ನು ಬಳಸಿಕೊಂಡರು. ಇದರಿಂದಾಗಿ ಗ್ರಾಮೀಣ ಪ್ರದೇಶದಲ್ಲಿ ಇವರ ಪ್ರಚಾರ ಅಧಿಕಗೊಂಡಿತು. ಈ ಸಂದರ್ಭದಲ್ಲಿ ರಾಷ್ಟ್ರೀಯ ಕಾಂಗ್ರೆಸಿನ ಚಿಹ್ನೆ 'ಜೋಡಿಎತ್ತು' ಇತ್ತು. ಈ ಗುರುತು ಗ್ರಾಮೀಣ ಪ್ರದೇಶದ ಜನರಿಗೆ ಅತ್ಯಂತ ಪ್ರೀತಿಯ ಹಾಗೂ ಸುಲಭವಾಗಿ ಗುರ್ತಿಸುವ ಚಿಹ್ನೆಯಾಗಿ ಹೊರಹೊಮ್ಮಿತ್ತು ಎಂದು ಹೇಳಬಹುದು.

೧೯೫೨ರ ಜನವರಿ ತಿಂಗಳಿನಲ್ಲಿ ರಾಜ್ಯ ವಿಧಾನಸಭೆಗೆ ಚುನಾವಣೆಗಳು ನಡೆದವು. ಅಂದಿನ ಮೈಸೂರು ರಾಜ್ಯದಲ್ಲಿ ೬೧ ಏಕ ಸದಸ್ಯ,೧೯ ದ್ವಿ ಸದಸ್ಯ ವಿಧಾನಸಭಾ ಕ್ಷೇತ್ರಗಳಿದ್ದವು. ಅದರಲ್ಲಿ ನೆಲಮಂಗಲ ತಾಲ್ಲೂಕು ದ್ವಿ ಸದಸ್ಯ ಕ್ಷೇತ್ರವನ್ನು ಹೊಂದಿತ್ತು. ಆದ್ದರಿಂದ ೧೯೫೨ರ ಚುನಾವಣೆಯಲ್ಲಿ ನೆಲಮಂಗಲದ ಕೇಂದ್ರಸ್ಥಾನದಲ್ಲಿ ಕಾಂಗ್ರೇಸ್ ಪಕ್ಷದ ಪ್ರಭಾಕರ್‌ರವರು ಶಾಸಕರಾಗಿ ಆಯ್ಕೆಯಾದರು. ನೆಲಮಂಗಲ ತಾಲ್ಲೂಕಿನ ಅಭಿವೃದ್ಧಿಗೆ ಭದ್ರ ಬುನಾದಿಯನ್ನು ಹಾಕಿದರು. ಇವರ ಕಾಲದಲ್ಲಿ ನೆಲಮಂಗಲ ಮುಖ್ಯ ರಸ್ತೆಯನ್ನು ಸಿಮೆಂಟ್ ರಸ್ತೆಯನ್ನಾಗಿ ಪರಿವರ್ತಿಸಿ ಅದರ ಜೊತೆಗೆ ಹಳೆಯ ಬಸ್ ನಿಲ್ದಾಣವನ್ನು ಸ್ಥಾಪಿಸಲಾಯಿತು. ಇವೇ ಮುಂತಾದ ಅಗತ್ಯಗಳು ನಿರ್ಮಾಣವಾದುವು.

೧೯೧೩ ಕ್ಕೂ ಮೊದಲು ಗ್ರಾಮಗಳ ಅಭಿವೃದ್ಧಿಗಾಗಿ ಪ್ರತ್ಯೇಕ ಕಾಯಿದೆ ಸಂಸ್ಥೆಗಳು ಇರಲಿಲ್ಲ. ನಂತರ ಮೈಸೂರು ಲೋಕಲ್ ಬೋರ್ಡ್ಸ್ ರೆಗ್ಯುಲೇಷನ್-II ಹಾಗೂ ಅಧೀನ ನಿಯಮಗಳ ಪ್ರಕಾರ ಜಿಲ್ಲಾ ಬೋರ್ಡ್ ಮತ್ತು ತಾಲ್ಲೂಕು ಬೋರ್ಡ್‌ಗಳು ನೆಲಮಂಗಲದಲ್ಲಿ ರಚಿತವಾದುವು. ತಾಲ್ಲೂಕು ಬೋರ್ಡ್‌ಗಳ ಹನ್ನೆರಡು ಸದಸ್ಯರಲ್ಲಿ ನಾಲ್ವರು ಪದನಿಮಿತ್ತ ಅಧಿಕಾರಿಗಳು, ನಾಲ್ವರು ಪ್ರಜೆಗಳಿಂದ ಚುನಾಯಿತರಾದವರು, ಸರಕರಾದಿಂದ ನಾಮಕರಣಗೊಂಡ ಮೂವರು, ಇನ್ನೊಬ್ಬರೂ ತಾಲ್ಲೂಕು ಕೇಂದ್ರ ಸ್ಥಳದ ಪುರಸಭೆಯಿಂದ ಆಯ್ಕೆಯಾದ ಪ್ರತಿನಿಧಿಗಳು ಇರುತ್ತಿದ್ದರು. ನೆಲಮಂಗಲ ತಾಲ್ಲೂಕು ಬೋರ್ಡಿನ ಅಧಕ್ಷರಾದ ಬಸವರಾಜುರವರು ತಾಲ್ಲೂಕಿನ ಅಭಿವೃದ್ಧಿಗಾಗಿ ಶ್ರಮಿಸಿದರು. ಇವರ ಅಧಿಕಾರಾವಧಿಯಲ್ಲಿ ಚರಂಡಿ ವ್ಯವಸ್ಥೆ, ಕುಡಿಯುವ ನೀರಿನ ವ್ಯಸ್ಥೆಯನ್ನು ಮಾಡಲಾಯಿತು.

**೩.೩ ೧೯೫೬ ನಂತರದ ರಾಜಕಾರಣ**

೧೯೫೭ರಲ್ಲಿ ಚುನಾವಣಗಳು ನಡೆಯುತ್ತಿರುವ ಸಂದರ್ಭದಲ್ಲಿ ನೆಲಮಂಗಲ ತಾಲ್ಲೂಕಿನ ಕೆಲವು ಗ್ರಾಮಗಳು ಕೊರಟಗೆರೆ ಮತ್ತು ಸೋಲೂರು ಕ್ಷೇತ್ರಕ್ಕೆ ಸೇರಿದ್ದವು. ೧೯೫೭ರ ಚುನಾವಣೆಯಲ್ಲಿ ಅಲೂರು ಹನುಮಂತಪ್ಪನವರು ಆಯ್ಕೆಯಾದರು. ಇದೇ ಕಾಲಾವಧಿಯಲ್ಲಿ ತಾಲ್ಲೂಕು ಮತ್ತು ಜಿಲ್ಲಾ ಬೋರ್ಡು ರದ್ದಾಗಿ ತಾಲ್ಲೂಕು ಅಭೀವೃದ್ಧಿ ಮಂಡಳಿ ಮತ್ತು ಜಿಲ್ಲಾ ಅಭಿವೃದ್ಧಿ ಮಂಡಳಿ ಇವುಗಳಿಂದ ಕೂಡಿದ ವ್ಯವಸ್ಥೆ ಬಂದಿತು. ಈ ಅವಧಿಯಲ್ಲಿ ಶ್ರೀಮತಿ ಸೀತಮ್ಮನವರು ನೆಲಮಂಗಲ ತಾಲ್ಲೂಕು ಅಭಿವೃದ್ಧಿ ಮಂಡಳಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. ಗ್ರಾಮಾಂತರ ಪ್ರದೇಶಗಳ ಮಕ್ಕಳ ವಿದ್ಯಾಭ್ಯಾಸ ಹಾಗೂ ಅವರ ಏಳಿಗೆಗಾಗಿ ತಾಲ್ಲೂಕಿನಾದ್ಯಂತ ಹಲವಾರು ಅಂಗನವಾಡಿ ಮತ್ತು ಶಾಲೆಗಳನ್ನು ತೆರೆದರು. ನೆಲಮಂಗಲ ಮಹಿಳಾ ಸಮಾಜದ

ಕಾರ್ಯದರ್ಶಿಯಾಗಿ ಮಹಿಳಾ ಸಹಕಾರ ಸಂಘ ಸ್ಥಾಪನೆಗೆ ಭಾಜನರಾದರು. ಅಲ್ಲದೇ ರಾಷ್ಟ್ರೀಯ ಉಳಿತಾಯ ಯೋಜನೆಯ ಬಗ್ಗೆ ಜನರಲ್ಲಿ ಜಾಗೃತಿಯನ್ನು ಮೂಡಿಸಿದರು. ಇದರಿಂದ ಸನ್ಮಾನ್ಯ ಬಿ.ಡಿ. ಜತ್ತಿಯವರಿಂದಲೂ ಸನ್ಮಾನಿತರಾದರು. ತಾಲ್ಲೂಕು ಅಭಿವೃದ್ಧಿ ಮಂಡಲಿಯ ಪ್ರಥಮ ಅಧ್ಯಕ್ಷರಾಗಿ ಶೀಮತಿ ಸೀತಮ್ಮನವರು ೧೯೫೮-೧೯೬೮ ರವರೆಗೆ ಕಾರ್ಯ ನಿರ್ವಹಿಸಿದ್ದಾರೆ.

೧೯೬೨ರ ಸಾರ್ವತ್ರಿಕ ಚುನಾವಣೆಗಳು ನಡೆದವು. ಈ ಚುನಾವಣೆಯಲ್ಲಿ ಎರಡನೇ ಭಾರಿಗೆ ಶಾಸಕರಾಗಿ ಆಯ್ಕೆಯಾದ ಪ್ರಭಾಕರ್‌ರವರು ಸರ್ಕಾರದಲ್ಲಿ ಸಮಾಜ ಕಲ್ಯಾಣ ಇಲಾಖೆಯ ಸಚಿವ ಖಾತೆಯನ್ನು ಹೊಂದಿದರು. ಇವರ ಆಡಳಿತಾವಧಿಯಲ್ಲಿ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ನೆಲಮಂಗಲದಲ್ಲಿ ಅನೇಕ ಶಾಲೆಗಳನ್ನು ತೆರೆಯಲಾಯಿತು. ವಿದ್ಯಾರ್ಥಿಗಳಿಗೆ ಹಾಸ್ಟೇಲ್ ಸೌಲಭ್ಯಗಳನ್ನು ಒದಗಿಸಲಾಯಿತು. ಈ ಅವಧಿಯಲ್ಲಿ ಶ್ರೀಮತಿ ಸೀತಮ್ಮನವರು ತಾಲ್ಲೂಕು ಮಂಡಳಿಯ ಅಧ್ಯಕ್ಷರಾಗಿ ಕಾರ್ಯನಿರ್ವಸಿದರು. ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿಗೆ ಹೆಚ್ಚಿನ ಆರ್ಥಿಕ ಸಹಾಯವನ್ನು ನೀಡಲಾಯಿತು.

೧೯೬೭ರಲ್ಲಿ ಸಾರ್ವತ್ರಿಕ ಚುನಾವಣೆಗಳು ನಡೆದಾಗ ಮೂರನೆಯ ಬಾರಿಗೆ ಪ್ರಭಾಕರ್‌ವರೇ ಕಾಂಗ್ರೇಸ್ ಪಕ್ಷದಿಂದ ಗೆದ್ದು ನೆಲಮಂಗಲದ ಶಾಸಕರಾದರು. ಶ್ರೀಮತಿ ಟಿ. ಲಕ್ಷ್ಮೀನರಸಮ್ಮನವರು ೧೯೬೮ರಿಂದ ೧೯೭೮ರವರೆಗೆ ತಾಲ್ಲೂಕು ಅಭಿವೃದ್ಧಿ ಮಂಡಳಿ ಸದಸ್ಯರಾಗಿ ಆಯ್ಕೆಯಾದರು. ಇವರು ಹಳ್ಳಿಗಳಲ್ಲಿ ಸುತ್ತಾಡಿ ಕಡುಬಡವರ ಕಷ್ಟಗಳಿಗೆ ಸ್ಪಂದಿಸಿದರು.ಮಹಿಳೆಯರಿಗೆ ಸ್ವಯಂ ಉದ್ಯೋಗ ಕೈಗೊಳ್ಳಲು ಆರ್ಥಿಕ ನೆರವನ್ನು ನೀಡಲಾಯಿತು. ಗ್ರಾಮೀಣ ಪ್ರದೇಶಗಳ ಮಕ್ಕಳಿಗೆ ವಿದ್ಯಾಭ್ಯಾಸಕ್ಕಾಗಿ ಶಾಲೆಗಳನ್ನು ಪ್ರಾರಂಭಿಸಿದರು. ಟಿ. ಲಕ್ಷ್ಮಿ ನರಸಮ್ಮನವರು ೧೯೭೮ರಿಂದ ೧೯೮೩ ರವರೆಗೂ ತಾಲ್ಲೂಕಿನ ಅಭಿವೃದ್ಧಿ ಮಂಡಳಿಯ ಸದಸ್ಯರಾಗಿ ಕಾರ್ಯನಿರ್ವಹಿಸಿದರು. ನೆಲಮಂಗಲ ಭೂ ನ್ಯಾಯ ಮಂಡಳಿಯಲ್ಲಿ ನಿರಾಶ್ರಿತರಿಗೆ ಭೂಮಿಯನ್ನು ಕೊಡಿಸಿದರು.

ಕಾಲಾನಂತರ ನೆಲಮಂಗಲ ತಾಲ್ಲೂಕಿನಲ್ಲಿ ಕಾಂಗ್ರೇಸ್ ಪಕ್ಷ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿತು. ಜನತಾ ಪಕ್ಷತನ್ನ ಪ್ರಾಬಲ್ಯವನ್ನು ಪಡೆದುಕೊಂಡು, ಜನತಾ ಪಕ್ಷದವರಾದ ಸತ್ಯನಾರಾಯಣ ಮತ್ತು ಗುರುಪ್ರಸಾದರವರು ಹಂತ ಹಂತವಾಗಿ ನೆಲಮಂಗಲ ತಾಲ್ಲೂಕಿನ ಶಾಸಕರಾಗಿ ಗುರುತಿಸಿಕೊಂಡರು. ನೆಲಮಂಗಲ ತಾಲ್ಲೂಕಿನಲ್ಲಿ ಮೊದಲು ಸಾಮಾನ್ಯ ಕ್ಷೇತ್ರಗಳಿದ್ದು ನಂತರ ಮೀಸಲು ಕ್ಷೇತ್ರವು ಅಸ್ಥಿತ್ವಕ್ಕೆ ಬಂದಿತು.

೧೯೮೬-೮೭ರಲ್ಲಿ ತಾಲ್ಲೂಕು ಅಭಿವೃದ್ಧಿ ಮಂಡಳಿ ವ್ಯವಸ್ಥೆ ಬದಲಾವಣೆಯಾಗಿ ಮಂಡಲ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪರಿಷತ್ತು ಈ ಮೂರು ಹಂತಗಳ ಆಡಳಿತ ವ್ಯವಸ್ಥೆಯಾಯಿತು. ೧೯೯೫ರಲ್ಲಿ ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳು ಅಸ್ಥಿತ್ವಕ್ಕೆ ಬಂದವು.

೧೯೯೪ರ ಚುನಾವಣೆಯಲ್ಲಿ ನೆಲಮಂಗಲ ತಾಲ್ಲೂಕಿನ ಶಾಸಕರಾಗಿ ಜನತಾ ದಳ ಪಕ್ಷದಿಂದ ಎಂ.ಶಂಕರ್‌ನಾಯಕ್‌ರು ಆಯ್ಕೆಯಾಗಿ ಸರ್ಕಾರದಲ್ಲಿ ವೈದ್ಯಕೀಯ ಸಚಿವರಾಗಿ ಸೇವೆ ಸಲ್ಲಿಸದರು. ಇವರ ಅಧಿಕಾರದ ಅವಧಿಯಲ್ಲಿ ೧೯೯೫ರಲ್ಲಿ ಸ್ಥಾಪನೆಯಾದ ತಾಲ್ಲೂಕು ಪಂಚಾಯತಿಯು ತಾಲ್ಲೂಕಿನ ಅಭಿವೃದ್ಧಿಗೆ ಭದ್ರ ಬೂನಾದಿಯನ್ನು ಹಾಕಿತು. ನೆಲಮಂಗಲದ ಅಭಿವೃದ್ಧಿಗಾಗಿ ತಾಲ್ಲೂಕು ಪಂಚಾಯತಿಗೆ ಅದ್ಯಕ್ಷರು, ಉಪಾಧ್ಯಾಕ್ಷರು ಮತ್ತು ಸದಸ್ಯರನ್ನು ಆಯ್ಕೆ ಮಾಡಲಾಯಿತು. ತಾಲ್ಲೂಕು ಪಂಚಾಯತಿ ಅಸ್ಥಿತ್ವಕ್ಕೆ ಬಂದ ನಂತರ ನಾಲ್ಕನೇ ಮೇ ೧೯೯೫ರಿಂದ ೧೯೯೭ರವರೆಗೆ ಬೆಟ್ಟಸ್ವಾಮಿ ಗೌಡ ಅವರು ಅಧ್ಯಕ್ಷರಾಗಿ, ಲಕ್ಷ್ಮಣಯ್ಯನವರು ಉಪಾಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು. ನಂತರದ ಅವಧಿಯಲ್ಲಿ ೧೯೯೭ರಿಂದ

೧೯೯೯ರವರೆಗೆ ಶ್ರೀಮತಿ ಕೆಂಪಮ್ಮ ಅಧ್ಯಕ್ಷರಾಗಿ, ಶ್ರೀಮತಿ ರೇಣುಕರವರು ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದರು ಮೂರನೇ ಅವಧಿಯ ೧೯೯೯ರಿಂದ ಜುಲೈ ೧೪,೨೦೦೦ರವರೆಗೆ ಕೇಶವ ಮೂರ್ತಿ ಅಧ್ಯಕ್ಷರಾಗಿ ಮತ್ತು ಗಂಗಾಧರಯ್ಯ ಉಪಾಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು.

೨೦೦೦ರಲ್ಲಿ ಸಾರ್ವತ್ರಿಕ ಚುನಾವಣೆಗಳು ನಡೆದಾಗ ಅಂಜನಾ ಮೂರ್ತಿಯವರು ಕಾಂಗ್ರೇಸ್ ಪಕ್ಷದ ಅಭ್ಯರ್ಥಿಯಾಗಿ ಜಯಗಳಿಸಿದರು. ಈ ಅವಧಿಯಲ್ಲಿ ತಾಲ್ಲೂಕು ಪಂಚಾಯತಿಯಲ್ಲಿ ಅಧ್ಯಕ್ಷರು ಮತ್ತು ಉಪಾಧ್ಯಕ್ಷರು ಆಯ್ಕೆಯಾದರು. ಮೊದಲನೇ ಅವಧಿಯ ೨೦೦೦ರಿಂದ ೨೦೦೨ರವರೆಗೆ ಟಿ.ಎಚ್.ವೀರಬಸವಯ್ಯ ಅಧ್ಯಕ್ಷರು ಮತ್ತು ಬಸವರಾಜು ಉಪಾಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. ಎರಡನೆಯ ಆವಧಿಯ ೨೦೦೨ ರಿಂದ ೨೦೦೪ರವರೆಗೆ ಡಿ.ಎಚ್. ರಾಧ ಅಧ್ಯಕ್ಷರಾಗಿ ಮತ್ತು ರಾಜಣ್ಣ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಈ ಮಧ್ಯೆಯಲ್ಲಿ ಅಂಜನಾಮೂರ್ತಿಯವರೇ ಎರಡೆನೆಯ ಆವಧಿಗೆ ಶಾಸಕರಾಗಿ ಆಯ್ಕೆಯಾದರು ಇವರು ಕರ್ನಾಟಕ ಸರ್ಕಾರದ ವಸತಿ ಸಚಿವರು ಆಗಿದ್ದರು.ತಾಲ್ಲೂಕು ಪಂಚಾಯಿತಿ ಮೂರನೇ ಅವಧಿಗೆ ೨೦೦೪-೨೦೦೫ರವರೆಗೆ ಗಂಗಲಕ್ಷ್ಮಿ ಅಧ್ಯಕ್ಷರಾಗಿ ಮತ್ತು ರಾಜಣ್ಣ ಉಪಾಧ್ಯಾಕ್ಷರಾಗಿ ಸೇವೆ ಸಲ್ಲಿಸಿದರು.[೧೦] ಜನವರಿ ೨೧,೨೦೦೬ರಿಂದ ಇಲ್ಲಿಯವರೆಗೆ ಮೊದಲನೇ ಅವಧಿಗೆ ಸರಸ್ವತಮ್ಮ ಅಧ್ಯಕ್ಷರಾಗಿ ಮತ್ತು ಶ್ರೀನಿವಾಸಯ್ಯ ಉಪಾಧ್ಯಕ್ಷರಾಗಿ ಕಾರ್ಯ ನಿರ್ವಯಿಸಿದರು. ಈ ಮದ್ಯೆದ ಅವಧಿಯಲ್ಲಿ ಮಧ್ಯತಂರ ಸರ್ಕಾರ ಬಂದಿತು. ೨೦೦೮ ನೇ ಸಾಲಿನ ಸಾಮಾನ್ಯ ಚುನಾವಣೆಯಲ್ಲಿ ೧೮೧ನೇ ಹೊಸ ಅಸೆಂಬ್ಲಿಯ ಪುನರ್ ವಿಂಗಡನೆ ಆಯಿತು. ಇದರಲ್ಲಿ ಕೊರಟಗೆರೆ ಕ್ಷೇತ್ರಕ್ಕೆ ಸೇರಿದ ಗ್ರಾಮಗಳು ನೆಲಮಂಗಲ ತಾಲ್ಲೂಕಿನ ಕ್ಷೇತ್ರಕ್ಕೆ ಸೇರಿದವು. ಈ ಕ್ಷೇತ್ರದಲ್ಲಿ ಬಿ.ಜೆ.ಪಿ. ಅಭ್ಯರ್ಥಿ ಎಂ.ವಿ. ನಾಗರಾಜ್ ಶಾಸಕರಾಗಿ ಆಯ್ಕೆಯಾದರು. ಮೂರನೇ ಅವಧಿಗೆ ತಾಲ್ಲೂಕು ಪಂಚಾಯಿತಿ ಅಧ್ಯಕ್ಷರಾಗಿ ಕೆ.ಸಿ. ಉಮೇಶ್ ಮತ್ತು ಉಪಾಧ್ಯಕ್ಷರಾಗಿ ರತ್ನಮ್ಮ ಕಾರ್ಯ ನಿರ್ವಹಿಸುತ್ತಿದ್ದಾರೆ.

ನೆಲಮಂಗಲ ತಾಲ್ಲೂಕು ದರ್ಶನ ಮಾಡುತ್ತಾ ತಾಲ್ಲೂಕು ಪಂಚಾಯಿತಿಯ ೧೯೯೫ರ ಮೊದಲ ಸದಸ್ಯರಾಗಿರುವ (ಅಧ್ಯಕ್ಷರು-ಬೆಟ್ಟಸ್ವಾಮಿ ಗೌಡ, ಉಪಾಧ್ಯಕ್ಷರು-ಲಕ್ಷ್ಮಣಯ್ಯ) ಎಂ.ಜಿ. ತಿಮ್ಮರಾಜುರವರನ್ನು ಮಾತಾನಾಡಿಸಿದಾಗ ತಾಲ್ಲೂಕಿನಾದ್ಯಂತ ಆಗಿರುವ ಪ್ರಗತಿ ಕಾರ್ಯಗಳ ಬಗ್ಗೆ ಸಂಕ್ಷೀಪ್ತ ವಿವರ ನೀಡಿದರು. ರಸ್ತೆ ದೀಪ, ಕುಡಿಯುವ ನೀರು ಈ ಮೂಲಭೂತ ಅಗತ್ಯತೆಗಳು ಪೂರೈಕೆಯೊಂದಿಗೆ ಸೇತುವೆಗಳು, ಬಸ್ಸು ನಿಲ್ದಾಣ, ಶಾಲ ಕಟ್ಟಡಗಳ ಮೊದಲಾದವುಗಳನ್ನು ನಿರ್ಮಿಸಿರುವ ಬಗ್ಗೆ ತಿಳಿಸಿದರು.

ನೆರಳಿಲ್ಲದವರಿಗೆ ನೆರಳು ನೀಡುವ ಉದ್ದೇಶದ ಸರ್ಕಾರದ ವಿಶಿಷ್ಠ ಯೋಜನೆಯಲ್ಲಿ ಅಂಬೇಡ್ಕರ್, ಇಂದಿರಾ ಆವಾಸ್, ನೆರಳು ಭಾಗ್ಯ, ಆಶ್ರಯ ಯೊಜನೆಗಳನ್ನು ತಾಲ್ಲೂಕಿನಲ್ಲಿ ಅನುಷ್ಠಾನಗೊಳಿಸಲಾಯಿತು. ಪರಿಶಿಷ್ಟ ಜಾತಿ, ವರ್ಗ, ಬುಡಕಟ್ಟು ಜನಾಂಗದವರಿಗೆ, ಆರ್ಥಿಕವಾಗಿ ಹಿಂದುಳಿದವರಿಗೆ ಮನೆಗಳುನ್ನು ನೀಡುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಸ್ವಲ್ಪಮಟ್ಟಿನ ಯಶಸ್ಸು ಕಂಡ ನಂತರ ವೈಫಲ್ಯವು ಆಯಿತು. ಏಕೆಂದರೆ ಸರರ್ಕಾರದ ವತಿಯಿಂದ ಮನೆ ಕಟ್ಟಲು ಕಂತುಗಳಲ್ಲಿ ಮೂರು ನಾಲ್ಕು ತಿಂಗಳಿಗೆ ಹಣ ನೀಡಿದ್ದರಿಂದ ಸುಸಜ್ಜಿತ ಮನೆ ಕಟ್ಟಲು ಆಗಲಿಲ್ಲ. ಅಲ್ಲದೇ ಇದರ ಫಲವನ್ನು ಬಡವರಿಗಂತ ಉನ್ನತ ವರ್ಗದವರೇ ಪಡೆದರು ಎಂಬ ಅಪವಾದವು ಕೇಳಿ ಬರುತ್ತಿದೆ. ಗ್ರಾಮೀಣ ಪ್ರದೇಶದ ದಲಿತರಿಗೆ ಸರ್ಕಾರದ ಯೋಜನೆಗಳು ತಿಳಿದಿರುವುದೇ ಇಲ್ಲ. ಇದರ ಉಪಯೋಗವನ್ನು ಆಳುವವರು ಹಾಗೂ ಅಧಿಕಾರ ವರ್ಗ ದುರುಪಯೋಗ ಮಾಡಿಕೊಂಡಿರೆನ್ನ ಬಹುದಾಗಿದೆ.

ನೆಲಮಂಗಲ ತಾಲ್ಲೂಕಿನ ವ್ಯಾಪ್ತಿಯಲ್ಲಿ ೨೨ ಗ್ರಾಮ ಪಂಚಾಯಿತಿಗಳಿವೆ. ಗ್ರಾಮ ಪಂಚಾಯಿತಿಗಳ ವ್ಯಾಪ್ತಿಯಲ್ಲಾಗುತ್ತಿರುವ ಪ್ರಗತಿ ಕಾರ್ಯಗಳು ಒದಗಿಸಬೇಕಾದ ಅಗತ್ಯತೆಗಳು ಇರುವ ಸಮಸ್ಯೆಗಳು ಪರಿಹಾರೋಪಾಯ ಇವೇ ಮೊದಲಾದವುಗಳ ಬಗ್ಗೆ ಕ್ರಮ ಕೈಗೊಳ್ಳಲು ತಾಲ್ಲೂಕು ಪಂಚಾಯಿತಿ ಹಾಗೂ ಗ್ರಾಮ ಪಂಚಾಯಿತಿಗಳು ನಡುವೆ ನಿರಂತರ ವಿಚಾರ ವಿನಿಮಯ ಅತೀ ಅಗತ್ಯ. ಅದಕ್ಕಾಗಿ ತಿಂಗಳು, ಎರಡು ತಿಂಗಳಿಗೊಮ್ಮೆ ತಾಲ್ಲೂಕು ಪಂಚಾಯಿತಿ ಸಭಾಂಗಣದಲ್ಲಿ ತಾಲ್ಲೂಕು ಪಂಚಾಯಿತಿ ಅಧ್ಯಕ್ಷರು, ಉಪಾಧ್ಯಕ್ಷರು ಹಾಗೂ ಇನ್ನಿತರ ಸಂಬಂದಪಟ್ಟ ಅಧಿಕಾರಿಗಳು ಹಾಗೂ ಎಲ್ಲಾ, ಗ್ರಾಮ ಪಂಚಾಯತಿ ಅಧ್ಯಕ್ಷರು, ಉಪಾಧ್ಯಕ್ಷರು ಕಾರ್ಯದರ್ಶಿಗಳನ್ನೊಗೊಂಡ ಸಭೆ ಸೇರಿ ಪರಸ್ಪರ ವಿಚಾರ ವಿನಿಮಯ ನಡೆಸುವ ವಿಶಿಷ್ಟ ಕಾರ್ಯಕ್ರಮ ಜಾರಿಗೆ ತಂದಿರುವುದು ಸೂಕ್ತವಾಗಿದೆ.

ತಾಲ್ಲೂಕಿನ ಸರ್ವತೋಮುಖ ಅಭಿವೃದ್ಧಿಯಲ್ಲಿ ಮುಖ್ಯ ವ್ಯಕ್ತಿ ತಹಶೀಲ್ದಾರರ ಪಾತ್ರವು ಮುಹತ್ವಪೂರ್ಣದ್ದಾಗಿದೆ. ನೆಲಮಂಗಲ ತಾಲ್ಲೂಕು ೨೫ನೇ ಆಗಸ್ಟ್೧೯೫೬ರಲ್ಲಿ ಎನ್. ನರಸಿಂಹಯ್ಯನವರು ಪ್ರಥಮ ತಹಶೀಲ್ದಾರರಾಗಿ ನೇಮಕಗೊಂಡರು. ಇದುವರೆಗೂ ಮೂವತ್ತಾರು ಮಂದಿ ತಹಶೀಲ್ದಾರರು ಕಾರ್ಯ ನಿರ್ವಹಿಸಿದ್ದಾರೆ. ಪ್ರಸ್ತುತದಲ್ಲಿ ನೆಲಮಂಗಲ ತಾಲ್ಲೂಕು ಮೂವತ್ತೇಳನೇ ತಹಶೀಲ್ದಾರಾಗಿ ಶ್ರೀಮತಿ ಎಸ್.ಎಂ. ಆಶಾಪರ್ವಿನ್‌ರವರು ೮ನೇ ಮೇ ೨೦೦೮ ರಿಂದ ಕಾರ್ಯ ನಿರ್ವಹಿಸುತ್ತಿದ್ದಾರೆ. ಇವರು ಸಾಮಾಜಿಕ, ಸಾಂಸ್ಕೃತಿಕ ಶೈಕ್ಷಣಿಕ ಹಾಗೂ ಧಾರ್ಮಿಕ ಹೀಗೆ ಎಲ್ಲಾ ಕ್ಷೇತ್ರಗಳ ಆರೋಗ್ಯಕರ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಾ ತಾಲ್ಲೂಕಿನ ಅಭುವೃದ್ಧಿ ಕಾರ್ಯದಲ್ಲಿ ನಿರತರಾಗಿದ್ದಾರೆ. ಸಕಲ ಸಿಬ್ಬಂದಿ ವರ್ಗದವರ ನೆರವಿನೊಂದಿಗೆ ನೆಲಮಂಗಲ ತಾಲ್ಲೂಕು ಕಛೇರಿಯ ಕೆಲಸಗಳು ಸುಗಮವಾಗಿ ಸಾಗುತ್ತಿವೆ.

ರಾಜಕೀಯ ಪಕ್ಷಗಳಲ್ಲದೆ ಸಾಮಜಿಕ, ಸಾಂಸ್ಕೃತಿಕ, ಧಾರ್ಮಿಕ, ರೈತ ಮೊದಲಾದ ಸಂಘಟನೆಗಳಿದ್ದು ಪ್ರಗತಿಪರ ಅಂಶಗಳನ್ನು ಮುಂದಿಟ್ಟುಕೊಂಡು ಕಾರ್ಯ ನಿರತವಾಗಿರುವ ಮಂದಿ ತಾಲ್ಲೂಕಿನಲ್ಲಿ ಸಾಕಾಷ್ಟಿದ್ದಾರೆ, ನರಸಿಂಹಮೂರ್ತಿ, ಎಂ. ವಿಜಯಕುಮಾರ್, ತಿಮ್ಮೇಗೌಡರು, ಜಯರಾಮಯ್ಯ (ಜಯಣ್ಣ) ಲಕ್ಷ್ಮೀವೆಂಕಟೇಶ್, ಮುನಿರ್‌ಪಾಪ, ನಾಗರಾಜ್ (ಜಾಗೃತಿ ಎನ್.ಜಿ.ಒ.) ಹೇಮಾವತಿ ಬೈಲಪ್ಪ, ರಂಗಸ್ವಾಮಯ್ಯ ಇವರೇ ಮೊದಲಾದವರು ಸಾರ್ವಜನಿಕ ವಲಯದ ವಿವಿಧ ಕ್ಷೇತ್ರಗಳಲ್ಲಿ ಕಾರ್ಯ ಕೈಗೊಳ್ಳುತ್ತಿದ್ದಾರೆ. ಯುವಜನ ಒಕ್ಕೂಟದ ಅಧ್ಯಕ್ಷ ತೋಪಯ್ಯ ಸದಸ್ಯರು ಆರ್, ಕಿಟ್ಟಿ, (ನಿರಂತರ ಪತ್ರಿಕೆ) ಬಿ.ಎಸ್.ಶಿವಕುಮಾರ್, ದಲಿತ ಸಂಘಟನೆಗಳ ಒಕ್ಕೂಟದ ಅಧ್ಯಕ್ಷ ಬಿ.ಆರ್. ಬಾಸ್ಕರ್ ಪ್ರಸಾದ್ ಮುಂತಾದ ಉತ್ಸಾಹಿಗಳು ತಮ್ಮತಮ್ಮ ನಿಸ್ವಾರ್ಥ ಗುರಿ ಸಾಧಿಸಲು ಸಂಘಟನೆಯ ಮೂಲಕ ಪ್ರಯತ್ನಿಸುತ್ತಿದ್ದಾರೆ.

ನೆಲಮಂಗಲ ತಾಲ್ಲೂಕಿನಲ್ಲಿ ಬ್ರಿಟಿಷರ ಕಾಲದಿಂದಲೂ ಸ್ವತಂತ್ರಕ್ಕಾಗಿ ಹೋರಾಟ ನಡೆಸಿದ ಹೋರಾಟಗಾರರ ಕಾರ್ಯಗಳನ್ನು ತಿಳಿಸುತ್ತ ನಂತರ ಸರ್ಕಾರ ಸ್ಥಾಪನೆಯಾಗಿ ಆಡಳಿತಾತ್ಮಕ ಕಾರ್ಯಗಳು ಹಂತ ಹಂತವಾಗಿ ಬೆಳೆದು ಬಂದು ತಾಲ್ಲೂಕಿನ ಅಭಿವೃದ್ಧಿ ಕಾರ್ಯಗಳ ಬಗ್ಗೆ ತಿಳಯಬಹುದಾಗಿದೆ.

**ಅಡಿ ಟಿಪ್ಪಣಿಗಳು**

೧.ಸೂರ್ಯನಾಥ ಯು.ಕಾಮತ್, ೧೯೮೬, ಫ್ರಿಡಮ್ ಮೂಮೆಂಟ್, ಬೆಂಗಳೂರು ರೂರಲ್ ಡಿಸ್ಟ್ರಿಕ್ ಗೆಜೆಟಿಯರ್ (ಇಂಗ್ಲೀಷ್ ಆವೃತ್ತಿ) ಬೆಂಗಳೂರು, ಪು. ೧೦೦

೨. ಅದೇ., ಪು.೧೦೪

೩. ತ್ಯಾಮಗೊಂಡ್ಲು ಅಂಬರೀಶ್ (ಸಂ.), ೨೦೦೪, ಶತಮಾನದ 'ರಾಜಾ' ಅಭಿನಂದನಾ ಕಿರುಹೊತ್ತಿಗೆ, ಶ್ರೀರಾಜಾ ಶ್ರೀಕಂಠ ಶ್ರೇಷ್ಠಿ ಜನ್ಮಶತಮಾನೋತ್ಸವ ಸಮಿತಿ, ತ್ಯಾಮಗೊಂಡ್ಲು, ಪು. ೧೫

೪. ಇಂದಿರಾ ಬಿ.ಪಿ., ೨೦೦೩, ಸಾಧನೆಯ ಹಾದಿಯಲ್ಲಿ ಬಿ.ಆರ್. ಪ್ರಾಣೇಶರಾವ್ ಬದುಕು ಚಿತ್ರಣ, ಭಾರತಿ ಪ್ರಕಾಶನ, ಮೈಸೂರು, ಪು.೯

೫. ಅದೇ., ಪು. ೧೩

೬. ಅದೇ., ಪು. ೨೩

೭. ಮಂಗಳ ಗಂಗ, ಸ್ಮರಣ ಸಂಚಿಕೆ, ೨೦೦೨, ಪ್ರಕಾಶಕರು-ಅಧ್ಯಕ್ಷರು ಮತ್ತು ಪದಾಧಿಕಾರಿಗಳು, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು ನೆಲಮಂಗಲ, ಪು.೬೧

# ಅಧ್ಯಾಯ ನಾಲ್ಕು

## ಧಾರ್ಮಿಕ ಇತಿಹಾಸ

೪.೧. ಧರ್ಮ ಮತ್ತು ಸಮಾಜ

೪.೨. ಯಾತ್ರಾಸ್ಥಳಗಳು

೪.೩. ಮಠಗಳು

೪.೪. ದೇವಾಲಯಗಳು

**ಧ**ರ್ಮ ಆತ್ಮಮುಖಿ ಹಾಗೂ ಸಮಾಜಮುಖಿಯಾದುದು. ಧರ್ಮ ಜನಜೀವನದ ಸಂಸ್ಕೃತಿಯ ಜೀವಾಳ. ಮಾನವನು ನೈತಿಕ ಜೀವನ ನಡೆಸುವಲ್ಲಿ ಧರ್ಮದ ಪಾತ್ರ ಬಲು ಹಿರಿದು. ಏಕೆಂದರೆ ಧರ್ಮವು ಭೌಗೋಳಿಕ ಮತ್ತು ನೈತಿಕ ನೆಲೆಗಟ್ಟುಗಳ ಮೇಲೆ ಪ್ರಭಾವ ಬೀರುತ್ತದೆ. ಒಂದು ಪರಿಸರದಲ್ಲಿ ಮಾನವನು ಯಾವುದೋ ಒಂದು ಒಪ್ಪಿತ ಆಧ್ಯಾತ್ಮಿಕ ಬದುಕನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡಿರುತ್ತಾನೆ. ಸಂಸ್ಕೃತಿಯ ಬಹು ಪ್ರಮುಖ ವಿಚಾರಗಳು, ಧಾರ್ಮಿಕ ಆಚರಣೆಗಳಲ್ಲಿ ವ್ಯಕ್ತವಾಗುತ್ತವೆ. ಧರ್ಮದ ನಂಬಿಕೆ, ಆಚರಣೆಗಳು ಅತಿರೇಕಕ್ಕೆ ಹೋದಾಗ ಬೇರೆ ಬೇರೆ ಧರ್ಮಗಳು ಹುಟ್ಟಿಕೊಳ್ಳಲು ಕಾರಣವಾಗುತ್ತವೆ.

**೪.೧ ಧರ್ಮ ಮತ್ತು ಸಮಾಜ**

ಪ್ರತಿಯೊಂದು ಪ್ರದೇಶವು ಹಲವು ರೀತಿಯ ಧರ್ಮಗಳನ್ನು ಒಳಗೊಂಡಿರುತ್ತದೆ. ಅದರಂತೆ ಬೌದ್ಧ, ಜೈನ, ಶೈವ, ವೈಷ್ಣವ, ವೀರಶೈವ ಪಂಥಗಳು ನೆಲಮಂಗಲ ತಾಲ್ಲೂಕಿನ ಧಾರ್ಮಿಕ ಚರಿತ್ರೆಯಲ್ಲಿ ನೆಲೆಗೊಂಡಿವೆ. ಧರ್ಮದ ಸಂಘರ್ಷವಿದ್ದರೂ ಸಾರ್ವಜನಿಕವಾಗಿಲ್ಲ. ಶೈವ ಪ್ರಾಬಲ್ಯವಿದ್ದರೂ, ವೈಷ್ಣವ, ವೀರಶೈವ, ಜೈನ, ಬೌದ್ಧ ಧರ್ಮದವರು ಸಾಮರಸ್ಯದಿಂದ ಇದ್ದಾರೆ. ಎಲ್ಲಾ ಧರ್ಮೀಯರನ್ನು, ಧರ್ಮಗಳನ್ನು ಸಮಾನವಾಗಿ ಕಾಣಲಾಗಿ ಧರ್ಮ ಸಮನ್ವಯತೆಗೆ ನೆಲಮಂಗಲ ಹೆಸರಾಗಿದೆ.

**ಬೌದ್ಧ ಪಂಥ :** ನೆಲಮಂಗಲ ತಾಲ್ಲೂಕಿನ ಪ್ರದೇಶಗಳು ಬೌದ್ಧಧರ್ಮದ ಪ್ರಭಾವಕ್ಕೆ ಒಳಗಾದ ಪ್ರದೇಶಗಳಾಗಿದ್ದರೂ ಸಹ ಪ್ರಾಚೀನ ಕಾಲದಿಂದಲೂ ಇಲ್ಲಿ ಬೌದ್ಧ ಧರ್ಮ ನೆಲೆಗೊಂಡಿದ್ದರ ಬಗೆಗೆ ಕುರುಹುಗಳು ಹೆಚ್ಚಾಗಿ ದೊರೆತಿಲ್ಲ. ಶಿವಗಂಗೆಯ ಮೂಲಸ್ಥಾನವನ್ನು ಅವಲೋಕನ ಮಾಡಿದಾಗ ಬೌದ್ಧ ಧರ್ಮದ ಚೈತ್ಯಾದ ಮಾದರಿ ಕಂಡುಬರುತ್ತದೆ. ಇದರಿಂದ ಬೌದ್ಧ ಧರ್ಮ ಇಲ್ಲಿ ಸ್ವಲ್ಪ ಮಟ್ಟಿಗೆ ನೆಲೆಯೂರಿರುವ ಸಾಧ್ಯತೆಗಳಿವೆ ಎನ್ನಬಹುದು ಇದರಿಂದ ನೆಲಮಂಗಲದಲ್ಲಿ ಈ ಧರ್ಮ ಅಷ್ಟಾಗಿ ಪ್ರಭಾವ ಬೀರಿಲ್ಲ ಎನ್ನಬಹುದು.

**ಜೈನಪಂಥ :** ಪ್ರಾಚೀನ ಕಾಲದಲ್ಲಿ ಜೈನಧರ್ಮ ಭದ್ರವಾಗಿ ಇಲ್ಲಿನ ಪ್ರದೇಶಗಳಲ್ಲಿ ಬೇರೂರಿತ್ತು. ನೆಲಮಂಗಲ ತಾಲ್ಲೂಕಿನ ಮಣ್ಣೆಯ ಗಂಗರ ರಾಜಧಾನಿಗಳಲ್ಲೊಂದಾಗಿದ್ದು, ಜೈನರ ಶೈಕ್ಷಣಿಕ ಮತ್ತು ಧಾರ್ಮಿಕ ಕೇಂದ್ರವಾಗಿತ್ತು. ಇಲ್ಲಿ ಆಳ್ವಿಕೆ ಮಾಡಿದ ಇಮ್ಮಡಿ ಶಿವಮಾರನು ಜೈನ ಧರ್ಮಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದನು. ವೀರಸೇನಾಚಾರ್ಯ ವಿದ್ವಾಂಸನು ಜೈನ ಧರ್ಮದ ಪ್ರಚಾರಕ್ಕೆ ಕಾರಣರಾದರು. ಇಲ್ಲಿ ಆಳ್ವಿಕೆ ಮಾಡಿದ ರಾಜರು ಅನೇಕ ಜೈನ ಬಸದಿಗಳನ್ನು ನಿರ್ಮಾಣ ಮಾಡಿ ದಾನ-ದತ್ತಿಗಳನ್ನು ನೀಡಿರುವ ಕುರುಹುಗಳನ್ನು ಕಾಣಬಹುದು. ಮಾಯಸಿಂಹನ ಕಾಲದಲ್ಲಿ ಜೈನ ಧರ್ಮದ ಕುರುಹಾಗಿ ಶ್ರೀವಿಜಯ ಜಿನಾಲಯ ನಿರ್ಮಾಣವಾಗಿದೆ. ಇದನ್ನು ಮಾರಸಿಂಹನ ಅಧಿಕಾರಿಯಾದ ಶ್ರೀವಿಜಯನು ಕಟ್ಟಿಸಿದನು. ಈ ಜಿನಾಲಯಕ್ಕೆ ದಾನ-ದತ್ತಿಗಳನ್ನು ನೀಡಲಾಗಿದೆ ಎಂಬುದನ್ನು ಇಲ್ಲಿನ ಶಾಸನಗಳು ತಿಳಿಸುತ್ತವೆ. ಶಿವಗಂಗೆಯಲ್ಲೂ ಜೈನಧರ್ಮ ಪ್ರಭಾವ ಬೀರಿತ್ತು. ಹೊಯ್ಸಳರ ಅರಸನಾದ ವಿಷ್ಣುವರ್ಧನ ರಾಣಿಯಾದ ಶಾಂತಲೆಯು ಜೈನ ಧರ್ಮೀಯಳಾಗಿದ್ದು ತನ್ನ ಜೀವಿತದ ಕೊನೆಯ

ದಿನಗಳನ್ನು ಶಿವಗಂಗೆಯಲ್ಲಿ ಕಳೆದು ಆತ್ಮಾರ್ಪಣೆ ಮಾಡಿಕೊಂಡಳು. ಇವಳ ನೆನಪಿಗಾಗಿ ಬಸದಿಯು ನಿರ್ಮಾಣವಾಗಿದೆ. ಕಾಲ ಕಾಲಕ್ಕೆ ತಕ್ಕಂತೆ ಜೈನಧರ್ಮವು ಹಲವು ಪಂಗಡಗಳಾಗಿ ಹೊಡೆದು ಹೋಯಿತು. ಇದರಿಂದ ಜನರು ನಂಬಿಕೆಗಳನ್ನು ಕಳೆದುಕೊಂಡರು. ಜೈನ ಧರ್ಮವು ಹಂತ ಹಂತವಾಗಿ ಕ್ಷೀಣಿಸುತ್ತಾ ಹೋಯಿತು. ಇಂದಿನ ದಿನಗಳಲ್ಲಿ ನೆಲಮಂಗಲ ತಾಲ್ಲೂಕಿನ ಪ್ರದೇಶಗಳು ಅಷ್ಟಾಗಿ ಜೈನ ಧರ್ಮದ ಪ್ರಭಾವಕ್ಕೆ ಒಳಗಾಗಿಲ್ಲ.

**ವೈಷ್ಣವ ಪಂಥ :** ನೆಲಮಂಗಲದ ಪ್ರದೇಶಗಳಲ್ಲಿ ವೈಷ್ಣವ, ಶ್ರೀವೈಷ್ಣವ ಪಂಥದ ಬಗ್ಗೆ ಪುಷ್ಟೀಕರಿಸುವ ಹಲವು ದಾಖಲೆಗಳು ದೊರೆತಿವೆ. ಆರಂಭದಲ್ಲಿ ವೈದಿಕ ಧರ್ಮವೇ ಇಲ್ಲಿ ನೆಲೆಗೊಂಡಿತ್ತು. ವೇದಗಳ ಕಾಲದಿಂದಲೂ ಮಾನವನ ಜೀವನಕ್ರಮವನ್ನು ನಿರ್ದಿಷ್ಟಪಡಿಸಲು ಧರ್ಮಶಾಸ್ತ್ರಗಳು ರಚಿತವಾಗಿವೆ. ವೈದಿಕ ಧರ್ಮದ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತ ಗ್ರಂಥಗಳ ಸಂಗತಿಗಳು ಇಲ್ಲಿನ ಜನಮನದಲ್ಲಿ ಬೇರೂರಿದ್ದವು. ನೆಲಮಂಗಲದ ಐತಿಹಾಸಿಕ ಸ್ಥಳವಾದ ಹೆಗ್ಗುಂದದಲ್ಲಿ ಶ್ರೀರಾಮನ ಪಾದುಕೆಗಳ ಶಿಲ್ಪಗಳು ಕಂಡು ಬಂದಿದ್ದರಿಂದ ವೈದಿಕ ಧರ್ಮ ನೆಲೆಗೊಂಡಿತ್ತೆಂದು ತಿಳಿಯಬಹುದು. ಬ್ರಾಹ್ಮಣ ವರ್ಗವು ಅಗ್ರಹಾರಗಳು, ಮಠಮಾನ್ಯಗಳ ಮೂಲಕ ಧರ್ಮದ ಬೆಳವಣಿಗೆಗೆ ಅಡಿಪಾಯ ಹಾಕಿದರು. ನೆಲಮಂಗಲ ಪ್ರದೇಶಗಳಲ್ಲಿ ಇಂದಿಗೂ ವೈಷ್ಣವ ಪಂಥವು ನೆಲೆಗೊಂಡಿದೆ. ಈ ಪಂಥದ ಹಿನ್ನೆಲೆಯಾಗಿ ಅನೇಕ ದೇವಾಲಯಗಳು, ಮಠಮಾನ್ಯಗಳು ಇಲ್ಲಿ ನೆಲೆಗೊಂಡಿವೆ. ಇಲ್ಲಿನ ವೈಷ್ಣವ ಪಂಥದ ಜನರು ತಮ್ಮ ಪಂಥಕ್ಕೆ ಅನುಗುಣವಾಗಿ ದೇವಾಲಯಗಳನ್ನು ನಿರ್ಮಿಸಿಕೊಂಡಿದ್ದಾರೆ.



**ಶೈವಪಂಥ :** ಅತ್ಯಂತ ಪ್ರಾಚೀನವಾದ ಶೈವಪಂಥವು ನೆಲಮಂಗಲ ತಾಲ್ಲೂಕಿನ ಪ್ರದೇಶಗಳಲ್ಲಿ ಹೆಚ್ಚಿನ ಪ್ರಭಾವ ಬೀರುತ್ತ ನೆಲೆಗೊಂಡಿದೆ. ಶಿವನನ್ನು ಸತ್ಯದ ಸಾಕಾರಮೂರ್ತಿ ಎಂದು ಪ್ರತಿಪಾದಿಸಲಾಗುತ್ತದೆ. ಪ್ರತಿಯೊಬ್ಬ ಮಾನವನು ಆತ್ಮ, ಮಾಯೆ, ಕಾಯಕ ಎನ್ನುವ ಮೂರು ಮೂಲಗಳಿಂದ ಸುತ್ತುವರಿದು ಕೊನೆಗೆ ಮರಣ ಹೊಂದುತ್ತಾನೆ. ಆದರೂ ಅನೇಕ ಜನ್ಮಗಳನ್ನು ಪಡೆಯುತ್ತಾನೆ. ಇವನನ್ನು ಜನನ-ಮರಣಗಳಿಂದ ರಕ್ಷಿಸುವವನೇ ಶಿವ ಎಂಬ ಭಾವನೆ ಜನರಲ್ಲಿ ಮೂಡಿದೆ. ಸತತ ಭಕ್ತಿಯಿಂದ ಶಿವನ ಪ್ರೀತಿಗೆ ಪಾತ್ರರಾಗಿ ಮೋಕ್ಷ ಪಡೆಯಬಹುದು ಎಂಬ ನಂಬಿಕೆ ಶೈವ ಧರ್ಮದಲ್ಲಿದೆ. ಈ ನೆಲಮಂಗಲ ಪ್ರದೇಶದಲ್ಲಿ ಹೆಚ್ಚಾಗಿ ಶೈವ ಧರ್ಮದ ಜನರು ನೆಲೆಸಿ ಶಿವನ ಆರಾಧಕರಾಗಿದ್ದಾರೆ. ಇಲ್ಲಿನ ಶೈವ ಪಂಥದ ಜನಾಂಗದವರು ತಮ್ಮ ಪಂಥಕ್ಕೆ ಅನುಗುಣವಾಗಿ ಅನೇಕ ಮಠಗಳು, ಸಂಘ-ಸಂಸ್ಥೆಗಳು ಮತ್ತು ದೇವಾಲಯಗಳನ್ನು ನಿರ್ಮಿಸಿಕೊಂಡಿದ್ದಾರೆ. ಒಟ್ಟಿನಲ್ಲಿ ಇಂದಿಗೂ ಶೈವ ಪಂಥವು ನೆಲಮಂಗಲ ತಾಲ್ಲೂಕಿನ ಪ್ರದೇಶಗಳಲ್ಲಿ ನೆಲೆಗೊಂಡಿದೆ ಎಂಬುದನ್ನು ತಿಳಿಯಬಹುದು.

**ವೀರಶೈವ ಪಂಥ:** ನೆಲಮಂಗಲ ತಾಲ್ಲೂಕಿನ ಪ್ರದೇಶಗಳಲ್ಲಿ ವೀರಶೈವ ಪಂಥವು ಕೂಡ ಶೈವ ಪಂಥದಂತೆಯೇ ಹೆಚ್ಚಿನ ಪ್ರಭಾವ ಬೀರಿದೆ. ವೀರಶೈವದ ಸರಳ ತತ್ತ್ವಗಳನ್ನು ನಂಬಿ ಇಲ್ಲಿನ ಜೈನ, ವೈಷ್ಣವ, ಶೈವ ಧರ್ಮದವರು ವೀರಶೈವ ಧರ್ಮದ ಅನುಯಾಯಿಗಳಾದರು. ಶೈವದಲ್ಲಿನ ಎಲ್ಲಾ ಪರಂಪರೆಯನ್ನು ವೀರಶೈವ ಧರ್ಮ ಸ್ವೀಕರಿಸಿದೆ.[೨] ಗುಗ್ಗಳ ಸೇವೆಯು ವೀರಶೈವ ಧರ್ಮದ ವಿಶಿಷ್ಟ ಲಕ್ಷಣವಾಗಿದೆ. ವೀರಶೈವ ಪಂಥವು ಜನಪ್ರಿಯವಾಗಿದ್ದು ಈ ಪಂಥದ ಜನರು ನೆಲಮಂಗಲದಲ್ಲಿ ಹೆಚ್ಚಾಗಿ ನೆಲೆಸಿದ್ದಾರೆ. ವೀರಶೈವದ ಪಂಥಕ್ಕೆ ಅನುಗುಣವಾಗಿ ಮಠಮಾನ್ಯಗಳು ಮತ್ತು ದೇವಾಲಯಗಳನ್ನು ನಿರ್ಮಿಸಿಕೊಂಡಿರುವುದನ್ನು ಇಂದಿಗೂ ಕಾಣಬಹುದು. ನೆಲಮಂಗಲದ ಕವಾಡಿ ಮಠ, ಬಸವಣ್ಣ ದೇವರ ಮಠ ಮತ್ತು ಶಿವಗಂಗೆಯ ಮೇಲಣಗವಿ ಮಠಗಳು ಇಂದಿಗೂ ಜೀವಂತವಾಗಿವೆ. ಇವು ಧರ್ಮಕ್ಕೆ ಅನುಗುಣವಾಗಿ ಪೂಜೆ-ಜಾತ್ರೆ ಉತ್ಸವಗಳನ್ನು ನಡೆಸುತ್ತಾ ಬಂದಿವೆ. ದೇವಾಲಯಗಳು ಕೂಡ ಆಯಾಯ ಧರ್ಮದ ಪ್ರತೀಕಗಳಾಗಿ ನೆಲೆಗೊಂಡಿವೆ.

**ನಾಥಪಂಥ:** ನಾಥಪಂಥವು ಶೈವ ಧರ್ಮದ ಭಾಗವಾಗಿ ಪರಿಗಣಿಸಲಾಗಿದೆ. ಅಲ್ಲದೇ ಶೈವ ಸಂಸ್ಕೃತಿಯ ಭಾಗವಾಗಿರುವ ಶಾಕ್ತಪಂಥವು ಅದರೊಳಗೆ ಸಹಜವಾಗಿ ಸೇರಿತು. ನಾಥಪಂಥವು ನೆಲಮಂಗಲದಲ್ಲಿ ಸ್ವಲ್ಪಮಟ್ಟಿನ

ಪ್ರಭಾವವನ್ನು ಬೀರಿತ್ತು. ನೆಲಮಂಗಲದ ಶಿವಗಂಗೆಯಲ್ಲಿ ನಾಥಪಂಥವು ತನ್ನ ಪ್ರಭಾವವನ್ನು ಬೀರಿ ಇಲ್ಲಿನ ಗಂಗಾಧರೇಶ್ವರನನ್ನು 'ಸಿವಗಂಗನಾಥ' ಎಂದು ಕರೆದಿದೆ ಎನ್ನುವುದನ್ನು ಶಾಸನಗಳು ಉಲ್ಲೇಖಿಸಿವೆ. ಇತ್ತೀಚಿಗೆ ನೆಲಮಂಗಲದಲ್ಲಿ ನಾಥಪಂಥವು ತನ್ನ ಪ್ರಭಾವವನ್ನು ಕಳೆದುಕೊಂಡಿದೆ.

ಮೇಲಿನ ರೀತಿಯಲ್ಲಿ ಅನೇಕ ಧಾರ್ಮಿಕ ಪಂಥಗಳು ಸ್ಥಾಪನೆಗೊಂಡು ಕಾರ್ಯ ನಿರ್ವಹಿಸುತ್ತಿದ್ದರೂ ಸಹ ನೆಲಮಂಗಲ ತಾಲ್ಲೂಕಿನ ಪ್ರದೇಶಗಳಲ್ಲಿ ಮುಸ್ಲಿಂ, ಕ್ರೈಸ್ತ ಧರ್ಮಗಳು ಕೂಡ ತಮ್ಮದೇ ಆದ ಆಚಾರ-ವಿಚಾರಗಳನ್ನು ಒಳಗೊಂಡಿದ್ದು, ಮಸೀದಿ ಮತ್ತು ಚರ್ಚ್‌ಗಳನ್ನು ಕೂಡ ಕಾಣಬಹುದಾಗಿದೆ. ಈ ರೀತಿಯಾಗಿ ನೆಲಮಂಗಲದಲ್ಲಿ ಈ ಎಲ್ಲಾ ಧರ್ಮಗಳು ಮಿಳಿತವಾಗಿವೆ. ಒಟ್ಟಿನಲ್ಲಿ ನೆಲಮಂಗಲ ತಾಲ್ಲೂಕಿನಲ್ಲಿ ಹಿಂದೂ, ಮುಸ್ಲಿಂ ಹಾಗೂ ಕ್ರೈಸ್ತ ಧರ್ಮೀಯರೊಂದಿಗೆ ಹಿಂದುಗಳಲ್ಲಿ ಬ್ರಾಹ್ಮಣರು, ಲಿಂಗಾಯತರು, ವೈಶ್ಯರು, ಬೇಡರು, ಗೊಲ್ಲರು, ಭೋವಿ, ಒಕ್ಕಲಿಗರು, ಕುರುಬ, ಆದಿಕರ್ನಾಟಕ, ಆದಿದ್ರಾವಿಡ, ಉಪ್ಪಾರರು, ಗಾಣಿಗರು, ಮಡಿವಾಳರು, ಅಕ್ಕಸಾಲಿಗರು, ರೆಡ್ಡಿ, ಲಂಬಾಣಿ, ವಿಶ್ವಕರ್ಮ, ಕೊರಚ, ಕೊರಮ ಮುಂತಾದ ಜನಾಂಗಗಳನ್ನು ಕಾಣಬಹುದು. ನೆಲಮಂಗಲ ತಾಲ್ಲೂಕಿನಲ್ಲಿ ಶೇ.೭೦ ರಷ್ಟು ಜನರ ಭಾಷೆ ಕನ್ನಡವಾಗಿದ್ದು, ತೆಲುಗು, ತಮಿಳು, ಉರ್ದು, ಮರಾಠಿ, ಹಿಂದಿ, ಗುಜರಾತಿ, ಬಂಜಾರಿ, ಮಾರವಾಡಿ, ತುಳು ಮೊದಲಾದ ಭಾಷೆಗಳನ್ನು ಆಡುವ ಜನರು ಈ ತಾಲ್ಲೂಕಿನಲ್ಲಿದ್ದಾರೆ.

**೪.೨. ಯಾತ್ರಾಸ್ಥಳಗಳು**

ಮಾನವನು ತನ್ನ ಜೀವಿತಾವಧಿಯ ಕೊನೆಯವರೆಗೂ ಒಂದಲ್ಲ ಒಂದು ಕಾಯಕವನ್ನು ಕೈಗೊಂಡಿರುತ್ತಾನೆ. ಈ ಕಾಯಕದಲ್ಲಿ ಪಾಪ-ಪುಣ್ಯಗಳೆಂಬ ಅಂಶಗಳು ಕಂಡುಬರುವುದರಿಂದ ಅವುಗಳನ್ನು ಸರಿದೂಗಿಸಿ ಮಾನವನು ಮೋಕ್ಷ ಪಡೆಯಲು ಯಾತ್ರೆಯನ್ನು ಕೈಗೊಳ್ಳುತಾನೆ. ಯಾತ್ರೆ ಹೋಗುವ ಸ್ಥಳಗಳು ಪುಣ್ಯಕ್ಷೇತ್ರಗಳೆಂಬ ಭಾವನೆ ಜನರಲ್ಲಿ ಮೂಡಿದೆ. ಪ್ರತಿಯೊಂದು ಪ್ರದೇಶವು ತಮ್ಮದೇ ಆದ ಒಂದಲ್ಲ ಒಂದು ಯಾತ್ರಾಸ್ಥಳವನ್ನು ಹೊಂದಿರುತ್ತದೆ. ಅದರಂತೆಯೇ ನೆಲಮಂಗಲ ತಾಲ್ಲೂಕು ಕೂಡ ಪ್ರಮುಖ ಯಾತ್ರಾಸ್ಥಳಗಳನ್ನು ಹೊಂದಿದೆ.

**೪.೨.೧. ಶಿವಗಂಗೆ**

ಶಿವಗಂಗೆಯು ಬಹುಪ್ರಸಿದ್ಧವಾದ ಶೈವ ಯಾತ್ರಾಸ್ಥಳವಾಗಿದ್ದು, ನಮ್ಮ ನಾಡಿನ ಸಾಂಸ್ಕೃತಿಕ ಜೀವನದಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿದೆ. ನೆಲಮಂಗಲ ತಾಲ್ಲೂಕಿನಲ್ಲಿರುವ ಶಿವಗಂಗೆಯು ರಾಷ್ಟ್ರೀಯ ಹೆದ್ದಾರಿ -೪ ಕ್ಕೆ ಹೊಂದಿಕೊಂಡಂತೆ ಬೆಂಗಳೂರು-ತುಮಕೂರು ಮಾರ್ಗದಲ್ಲಿರುವ ದಾಬಸಪೇಟೆಯಿಂದ ಆರು ಕಿ.ಮೀ. ದೂರದಲ್ಲಿದೆ. ಈ ಶಿವಗಂಗಾ ಕ್ಷೇತ್ರಕ್ಕೆ ದಕ್ಷಿಣಕಾಶಿಯೆಂತಲೂ ಉತ್ತರ ಕಾಶಿಗಿಂತಲೂ ಒಂದಂಶ ಪುಣ್ಯ ಹೆಚ್ಚು ಎಂದು ಪುರಾಣದಲ್ಲಿ ತಿಳಿಸಿದೆ.

ಶಿವಗಂಗೆ ಶಿವನ ಗಂಗೋತ್ರಿ, ಭಕ್ತರ ಮಂಗಳಗಂಗೋತ್ರಿ. ದೇವಗಂಗೆ ಶಿವನ ಮುಡಿಯಿಂದ ಇಳಿದು ಬಂದು ಇಲ್ಲಿನ ಪವಿತ್ರ ತೀರ್ಥಗಳಲ್ಲಿ ಶಿವಗಂಗೆಯಾಗಿ ನೆಲೆ ನಿಂತಿರುತ್ತಾಳೆ. ಶೈವ, ವೀರಶೈವ, ಜೈನರಿಗೂ ಇದು ಪವಿತ್ರ ಯಾತ್ರಾಸ್ಥಳವಾಗಿದೆ. ಪುರಾಣ, ಇತಿಹಾಸ, ಶಾಸನ, ಸಾಹಿತ್ಯ, ಜಾನಪದ, ಶಿಲ್ಪ ಮತ್ತು ಭೂವಿಜ್ಞಾನ ಇತ್ಯಾದಿ ವಿಷಯಗಳನ್ನು ತನ್ನ ಗರ್ಭದಲ್ಲಿ ಅಡಗಿಸಿಕೊಂಡಿರುವ 'ರತ್ನಗರ್ಭ' ದಕ್ಷಿಣಕಾಶಿ. ಹೀಗಾಗಿ ಜನರನ್ನು ಧಾರ್ಮಿಕತೆಯ ಕಡೆ ತಿರುಗಿಸುವ ಪವಿತ್ರ ಕ್ಷೇತ್ರವಾಗಿದೆ.

ಶಿವಗಂಗೆ ಬೆಟ್ಟ ಸಮುದ್ರ ಮಟ್ಟಕ್ಕಿಂತ ಸುಮಾರು ೪೫೬೦ ಅಡಿಗಳಷ್ಟು ಎತ್ತರವಾಗಿದೆ. ಸುತ್ತಮುತ್ತಲ ಪ್ರದೇಶದಿಂದ ೧೬೦೦ ಅಡಿಗಳಷ್ಟು ಎತ್ತರದಲ್ಲಿದೆ. ಈ ಬೆಟ್ಟವು ತನ್ನದೇ ಆದ ವೈಶಿಷ್ಟ್ಯತೆಯನ್ನು ಪಡೆದಿದೆ. ಈ ಗಿರಿಯನ್ನು ಕೃತಯುಗದಲ್ಲಿ 'ಮಂದಾಕಿನಿ ಕ್ಷೇತ್ರ'ವೆಂತಲೂ ಕರೆಯಲಾಗಿದೆ. ವಶಿಷ್ಠ, ತ್ರಿಶಂಕು, ಹರಿಶ್ಚಂದ್ರ ತೀರ್ಥಯಾತ್ರೆಗೆ ಬಂದಿದ್ದರು. ತ್ರೇತಾಯುಗದಲ್ಲಿ 'ಏಕ ಶೃಂಗಾದ್ರಿ' ಎಂದು ಕರೆದಿದ್ದು ಜಮದಗ್ನಿ, ಅಗಸ್ತ್ಯ,

ಪರಶುರಾಮ, ಶ್ರೀರಾಮ ಯಾತ್ರೆ ಕೈಗೊಂಡಿದ್ದರು. ದ್ವಾಪರ ಯುಗದಲ್ಲಿ ಈ ಶಿವಗಂಗೆಯನ್ನು 'ಪುಂಗಾದ್ರಿ' ಕ್ಷೇತ್ರವೆಂದು ಕರೆಯಲಾಗಿದ್ದು, ಶ್ರೀಕೃಷ್ಣ, ಧರ್ಮರಾಯರು ಬಂದು ಯಾತ್ರೆ ಮಾಡಿ ಹೋಗಿರುತ್ತಾರೆ ಎಂದು ಪುರಾಣಗಳು ತಿಳಿಸುತ್ತವೆ. ವ್ಯಾಸ ಮಹರ್ಷಿ, ಜನಮೇಜಯ, ವಿಕ್ರಮಾದಿತ್ಯ, ಅಶೋಕ ಮುಂತಾದವರು ಗಂಗಾಧರೇಶ್ವರ ಮತ್ತು ಹೊನ್ನಾದೇವಿಯನ್ನು ಪೂಜಿಸಿದರೆಂದು ಹೇಳಲಾಗಿದೆ. ಕಲಿಯುಗದಲ್ಲಿ ಈ ಕ್ಷೇತ್ರವನ್ನು 'ಕಕುದ್ಗಿರಿ' ಎಂದು ಕರೆದಿದೆ. ಕಕುದ್ಗಿರಿ ಎಂದು ಹೆಸರು ಬರಲು ಪುರಾಣದಲ್ಲಿ ಒಂದು ಕಥೆಯಿದೆ. ಪ್ರಾಚೀನ ಕಾಲದಲ್ಲಿ ಜನರು ದಾನಧರ್ಮಗಳಿಂದ ಬಾಳುತ್ತಿದ್ದು ಮರಣಾನಂತರ ಸ್ವರ್ಗಕ್ಕೆ ಹೋಗುತ್ತಿದ್ದರು. ಇದರಿಂದ ಸ್ವರ್ಗ ತುಂಬಿ ಹೋಗಲು ಇಂದ್ರನು ಶಿವನ ಮೊರೆಯಿಟ್ಟನು. ಶಿವನು ಮಾಯೆ ಮತ್ತು ನಂದೀಶ್ವರನನ್ನು ಕಳುಹಿಸಿದನು. ಮಾಯೆಯು ಮೋಹ ಬೀರಿದಳು. ಇದರಿಂದ ಜನ ಪಾಪಕಾರ್ಯಗಳಲ್ಲಿ ತೊಡಗಿ ನರಕವನ್ನು ಸೇರಿದರು. ಕೊನೆಗೆ ನಂದೀಶ್ವರನು ಮಾಯೆಯ ಭ್ರಮೆಗೆ ಒಳಗಾದನು. ಇದರಿಂದ ಶಾಪಕ್ಕೆ ಗುರಿಯಾಗಿ, ಪಶ್ಚಾತ್ತಾಪ ಉಂಟಾಗಿ ತಲೆ ಕೆಳಗಾಗಿ ತಪಸ್ಸು ಮಾಡಿ ಶಾಪದಿಂದ ಮುಕ್ತಿ ಹೊಂದಿದನು. ಅಂದಿನಿಂದ ಆ ಸ್ಥಳ 'ಕಕುದ್ಗಿರಿ' ಎಂದು ಹೆಸರಾಗಲೀ ಎಂದು ಶಿವನು ವರ ನೀಡಿದನು.[೨] ಇದರಿಂದ ಶಿವಗಂಗೆಗೆ ಯಾತ್ರೆ ಹೋದರೆ ಪಾಪ ಪರಿಹಾರವಾಗುತ್ತದೆ ಎಂದು ಜನರಲ್ಲಿ ನಂಬಿಕೆ ಈಗಲೂ ಇದೆ. ಶಿವನು ತ್ರಿಪುರಾಸುರ ಬ್ರಹ್ಮಹತ್ಯಾದೋಷ ಪರಿಹಾರಕ್ಕೆ ಭೂಪ್ರದಕ್ಷಿಣೆ ಮಾಡುವಾಗ ಅವನ ತ್ರಿಶೂಲ ನಂದಿಯ ಮೇಲೆ ಬಿದ್ದು, ನಂದಿ ನಾಲ್ಕು ಭಾಗವಾಯಿತು. ಆಗ ನಂದಿಗೆ ವರ ನೀಡಲಾಗಿ ಪೂರ್ವಕ್ಕೆ ವೃಷಭನಂತೆ, ಪಶ್ಚಿಮದಿಂದ ಗಣೇಶನಂತೆ, ಉತ್ತರದಿಂದ ಸರ್ಪದಂತೆ ಹಾಗೂ ದಕ್ಷಿಣದಿಂದ ಲಿಂಗದಂತೆ ಕಾಣುತ್ತದೆ.[೩] ಜನರ ಮನಸ್ಸಿನಲ್ಲಿರುವ ದೈವಭಕ್ತಿಗೆ ಅನುಗುಣವಾಗಿ ಯಾತ್ರೆ ಮಾಡಿ ಪಾಪವನ್ನು ಪರಿಹರಿಸಿಕೊಳ್ಳಲು ಬಯಸುತ್ತಾರೆ.

ಇನ್ನೊಂದು ವೈಶಿಷ್ಟ್ಯವೆಂದರೆ ಯಾವ ಬಂಡೆಕಲ್ಲು ನೋಡಿದರೂ ಲಿಂಗಾಕಾರವಾಗಿಯೂ ಅಥವಾ ಬಸವಣ್ಣನ ಆಕಾರವಾಗಿಯೂ ಶೋಭಿಸುತ್ತದೆ. ಆದ್ದರಿಂದ ಇದಕ್ಕೆ ಕಲ್ಲೆಲ್ಲಾ ದೇವರು, ಗಿಡವೆಲ್ಲಾ ಪತ್ರೆ, ನೀರೆಲ್ಲಾ ತೀರ್ಥವೆಂತಲೂ ಕರೆಯುತ್ತಾರೆ. ಶಿವಗಂಗಾ ಬೆಟ್ಟದ ತಪ್ಪಲಿನ ಬುಡದಲ್ಲಿ ಕಮಲತೀರ್ಥ, ಅಗಸ್ತ್ಯೇಶ್ವರ ತೀರ್ಥವೆಂಬ ಎರಡು ಕಲ್ಯಾಣಿಗಳಿವೆ. ಇದರಲ್ಲಿ ಸ್ನಾನ ಮಾಡಿದರೆ ಬ್ರಹ್ಮಹತ್ಯಾ ದೋಷವು ಪರಿಹಾರವಾಗುವುದೆಂಬ ನಂಬಿಕೆ ಇದೆ. ಬಲಭಾಗದಲ್ಲಿ ವೀರಭದ್ರನ ದೇವಸ್ಥಾನವಿದೆ. ವೀರಭದ್ರನ ಪಾದವನ್ನು ತೊಳೆದು ತೀರ್ಥವನ್ನು ಕುಡಿದರೆ ಪಿಶಾಚಿಗಳ ಬಾಧೆ ಪರಿಹಾರವಾಗುವುದು ಎಂದು ನಂಬಲಾಗಿದೆ. ಅಲ್ಲಿಯೇ ಪಾತಾಳಗಂಗೆ ಸಿಗುತ್ತದೆ. ಈ ಪಾತಾಳಗಂಗೆಗೆ ಒಂದು ಪುರಾಣ ಕಥೆಯಿದೆ. ಹಿಂದೆ ಆದಿಶಕ್ತಿಯು ರಕ್ತ ಬೀಜಾಸುರನೊಂದಿಗೆ ಬಹಳ ವರ್ಷಗಳ ಕಾಲ ಯುದ್ಧ ಮಾಡಿ ಅವನನ್ನು ಸಂಹರಿಸಿದಳು. ಆಗ ಆದಿಶಕ್ತಿಗೆ ತುಂಬಾ ಆಯಾಸವಾಗಿ ಬಾಯಾರಿಕೆ ಉಂಟಾಗಿ ಗಂಗಾಧರನನ್ನು ಕುಡಿಯಲು ನೀರು ಕೇಳಿದಾಗ, ಗಂಗೆಯ ಹತ್ತಿರ ಹೋಗು ಎಂದನು. ಗಂಗೆಯ ಕಡೆ ಮುಖ ಮಾಡಿದಾಗ ಗಂಗೆಯು ವಾರೆಮುಖ ಮಾಡಿದಳು. ಆಗ ಆದಿಶಕ್ತಿಗೆ ಕೋಪ ಬಂದು ತನ್ನ ತ್ರಿಶೂಲದಿಂದ ಬಂಡೆಗಳನ್ನು ಒಡೆದಾಗ ಅಲ್ಲಿ ಇಬ್ಭಾಗವಾಗಿ ಪಾತಾಳದಿಂದ ನೀರು ಉಕ್ಕಿಬಂತಂತೆ. ಆಗ ಆದಿಶಕ್ತಿ ನೀರು ಕುಡಿದು ವೀರಭದ್ರನನ್ನು ಕರೆದು ಕಾವಲಾಗಿರು, ಇಲ್ಲಿಂದ ಮೇಲೆ ಬರದಂತೆ ನೋಡಿಕೋ ಎಂದು ಅಪ್ಪಣೆ ಕೊಟ್ಟಳಂತೆ. ಈ ತೀರ್ಥದಲ್ಲಿ ಸ್ನಾನ ಮಾಡಿದರೆ ಬಾಲಗ್ರಹ, ಗ್ರಹದೋಷ, ಬ್ರಹ್ಮಹತ್ಯಾ ದೋಷ ಹೋಗುತ್ತದೆಂದು ಪುರಾಣಿಕರು ಬರೆದಿದ್ದಾರೆ.[೪] ಈ ದೋಷಗಳನ್ನು ಪರಿಹರಿಸಿಕೊಳ್ಳಲು ಜನರು ಯಾತ್ರೆ ಬರುತ್ತಾರೆ. ಇದರಿಂದ ಶಿವಗಂಗೆ ಯಾತ್ರಾಸ್ಥಳವಾಗಿದೆ. ಗಂಗಾಧರೇಶ್ವರ ಮತ್ತು ಹೊನ್ನಾದೇವಿ ಶಿವಗಂಗಾ ಕ್ಷೇತ್ರದಲ್ಲಿ ನೆಲೆಗೊಂಡಿರುತ್ತಾರೆ. ಇಲ್ಲಿಯ ಗಿರಿಜಾಕಲ್ಯಾಣ ಮಂಟಪ, ಯೋಗ ಮಂಟಪ, ಗರ್ಭ ಗುಡಿಯು ವೃತ್ತಾಕಾರದ ಪಾಣಿಪಟ್ಟದ ಮೇಲೆ ಲಿಂಗಾಕಾರವಿದೆ. ಇಲ್ಲಿನ ಶಿವಲಿಂಗದ ಮೇಲೆ ತುಪ್ಪ ಅಭಿಷೇಕ ಮಾಡಿದರೆ ಬೆಣ್ಣೆಯಾಗುತ್ತದೆ. ಇದಕ್ಕೆ ಒಂದು

ಇತಿಹಾಸವಿದೆ. ಹಿಂದೆ ದ್ವಾಪರಯುಗದಲ್ಲಿ ಜನಮೇಜಯರಾಜನು ಸರ್ಪಯಾಗ ಮಾಡಿ ಅದರ ದೋಷದಿಂದ ಕುಷ್ಠರೋಗಿಯಾಗಿ ದೇಶ ವಿದೇಶ ತಿರುಗುತ್ತಾ ಈ ಗಿರಿಗೆ ಬಂದು ಲಿಂಗಕ್ಕೆ ಕಳಶದ ಬಟ್ಟಲನ್ನು ಮಾಡಿಸಿದನಂತೆ. ಅಂದಿನಿಂದ ಈ ಲಿಂಗಕ್ಕೆ ತುಪ್ಪ ಅಭಿಷೇಕ ಮಾಡಿದರೆ ಬೆಣ್ಣೆಯಾಗುತ್ತದೆ. ಇದರಿಂದ ಈ ರೋಗವಿರುವವರು ಇಲ್ಲಿಗೆ ಯಾತ್ರೆ ಕೈಗೊಳ್ಳುತ್ತಾರೆ. ಹೊನ್ನಾದೇವಿಯು ಮೊದಲು ಉಗ್ರರೂಪಳಾಗಿದ್ದು, ಶಾಂತಳಾಗುವಂತೆ ಶ್ರೀ ಜಗದ್ಗುರು ಮರುಳಸಿದ್ಧರು ಮಾಡಿದ್ದರಿಂದ ಭಕ್ತಾದಿಗಳು ಈ ಮಂದಿರಕ್ಕೆ ಪ್ರವೇಶಿಸತೊಡಗಿದರು. ಇದರಿಂದ ಮಕ್ಕಳು ಚಂಡಿ ಮಾಡುವುದನ್ನು ನಿಲ್ಲಿಸಲು ಈ ದೇಗುಲಕ್ಕೆ ಬರುವರು.

ಅಗಸ್ತ್ಯಮುನಿಗಳು ಹಾಗೂ ರುದ್ರಮುನಿಗಳು ನೆಲಮಂಗಲ ತಾಲ್ಲೂಕಿನ ಪ್ರಸಿದ್ಧ ಯಾತ್ರಾಸ್ಥಳಗಳ ಖ್ಯಾತಿಯ ಕುರುಹುಗಳಾಗಿದ್ದಾರೆ. ಹಿಮಾಲಯದಲ್ಲಿ ಗಿರಿಜಾಕಲ್ಯಾಣ ನೋಡಲು ತ್ರಿಲೋಕದ ಜನರು ಸೇರಿದರು. ಇದರಿಂದ ಇಳೆಯ ತೂಕ ಪಲ್ಲಟವಾಯಿತು. ಆಗ ಅಗಸ್ತ್ಯರನ್ನು ದಕ್ಷಿಣಕ್ಕೆ ಕಳುಹಿಸಿದರೆ ಜನರು ಜೊತೆಗೆ ಹೋಗಿ ಅಲ್ಲಿಂದಲೇ ಗಿರಿಜಾ ಕಲ್ಯಾಣ ನೋಡಲಿ ಎಂದು ಸಲಹೆ ನೀಡಲಾಗಿ, ಶಿವಗಂಗೆಯಲ್ಲಿ ಗಿರಿಜಾಕಲ್ಯಾಣ ನೋಡಲಿ ಎಂದು ಸಲಹೆ ನೀಡಲಾಗಿ, ಶಿವಗಂಗೆಯಲ್ಲಿ ಗಿರಿಜಾಕಲ್ಯಾಣ ನಡೆಸಲಾಯಿತು. ಅಂದಿನಿಂದ ಮಕರ ಸಂಕ್ರಾಂತಿಯಂದು ಗಿರಿಜಾಕಲ್ಯಾಣ ನಡೆಯುತ್ತದೆ. ಆ ದಿನ ಭಕ್ತಾದಿಗಳು ಅನ್ನ ಸಂತರ್ಪಣೆ ಮಾಡಿ ತಮ್ಮ ಪಾಪವನ್ನು ಕಳೆದುಕೊಳ್ಳುವ ವಾಡಿಕೆ ಇದೆ.

ರೇವಣಸಿದ್ಧರು ರುದ್ರಮುನಿ ಶಿವಾಚಾರ್ಯರಿಗೆ ದೀಕ್ಷೆಯನ್ನು ಕೊಡುವ ಸಮಯದಲ್ಲಿ ಪವಿತ್ರಜಲದ ಅವಶ್ಯಕತೆ ಕಂಡು ಬಂದಿತು. ಆಗ ರೇವಣಸಿದ್ಧರು ತಮ್ಮ ತಪೋಶಕ್ತಿಯಿಂದ ಬಂಡೆಯನ್ನು ದಂಡದಿಂದಲೇ ಸೀಳಿ ಕಮಂಡಲಿನಿಂದ ಗಂಗೆಯನ್ನು ತೆಗೆದು ಶಿವದೀಕ್ಷೆಯನ್ನು ಶ್ರೀ ರುದ್ರಮುನಿ ಶಿವಾಚಾರ್ಯರಿಗೆ ಅನುಗ್ರಹಿಸಿದರು. ಅಲ್ಲದೆ 'ನೀನು ಪಾಪಿಗಳ ಕೈಗೆ ಸ್ಪರ್ಶವಾಗಬೇಡ' ಎಂದು ಹರಸಿದ್ದರು."[೫] ಈ ತೀರ್ಥವನ್ನು ಒಳಗಲ್ ತೀರ್ಥವೆಂದು ಕರೆಯುತ್ತಾರೆ. ಈಗಲೂ ಬಂದ ಯಾತ್ರಿಕರು ಗಂಗೆಯನ್ನು ಪೂಜಿಸಿ ಕೈಯಿಂದ ತೆಗೆಯುತ್ತಾರೆ. ಪುಣ್ಯವಿಶೇಷವಿದ್ದವರಿಗೆ ಕೈಗೆ ಗಂಗೆ ಸಿಗುತ್ತದೆ. ಇಲ್ಲದವರಿಗೆ ತಂಬಿಗೆಯಿಂದ ಎತ್ತಿ ತೀರ್ಥ ನೀಡುತ್ತಾರೆ.ಈ ತೀರ್ಥಕ್ಷೇತ್ರ ಭಕ್ತಾದಿಗಳಿ ಇಷ್ಟಾರ್ಥವನ್ನು ಅನುಗ್ರಹಿಸುವ ಪವಿತ್ರ ಕ್ಷೇತ್ರ ಎಂಬ ನಂಬಿಕೆ ಜನರಿಗೆ ಈಗಲೂ ಇದೆ.

ಬೆಟ್ಟದ ತುದಿಯಲ್ಲಿ ಕೋಡಗಲ್ ಬಸವಣ್ಣ ಪಶ್ಚಿಮಾಭಿಮುಖವಾಗಿ ಕುಳಿತಿದ್ದಾನೆ. ಈ ಬಸವಣ್ಣನ ಹತ್ತಿರ ಹೋಗಬೇಕಾದರೆ ಹತ್ತು ಹನ್ನೆರಡು ಮೆಟ್ಟಿಲುಗಳನ್ನು ಹತ್ತಿ ಬಸವಣ್ಣನಿಗೆ ಸುತ್ತು ಹಾಕಬೇಕು. ಪುರಾಣದಲ್ಲಿ ಈ ಬಸವಣ್ಣನಿಗೆ ಒಂದು ಸುತ್ತು ಹಾಕಿದರೆ ಒಂದು ಭೂಮಿ ಸುತ್ತು ಪ್ರದಕ್ಷಿಣೆ ಬಂದಷ್ಟು ಪುಣ್ಯ ಎಂದು ಹೇಳುತ್ತಾರೆ. ಅಲ್ಲದೇ ಮಕ್ಕಳಾಗದ ಹೆಂಗಸರು ಪ್ರದಕ್ಷಿಣೆ ಮಾಡಿದರೆ ಮಕ್ಕಳಾಗುತ್ತವೆ ಎಂಬ ಪ್ರತೀತಿ ಇದೆ.

ಯಾವ ಮಾನವನೇ ಆಗಲಿ ಪಾತಾಳಗಂಗೆಯಲ್ಲಿ ಸ್ನಾನ ಮಾಡಿ ನಿರಾಕಾರವಾಗಿ ಗಿರಿಯನ್ನು ಏರಿ ಮಲ್ಲಿಕಾರ್ಜುನನ ಸನ್ನಿಧಿಯಲ್ಲಿ ಅಭಿಷೇಕಪೂಜೆ, ಭಜನೆ, ರಾತ್ರಿಯಲ್ಲಿ ಜಾಗರಣೆ ಮಾಡಿದ ನಂತರ ಗಿರಿಯಿಂದ ಕೆಳಗಿಳಿದು ಮತ್ತೆ ಪಾತಾಳಗಂಗೆಯಲ್ಲಿ ಸ್ನಾನಮಾಡಿ ಗವಿ-ಗಂಗಾಧರೇಶ್ವರ, ಹೊನ್ನಾದೇವಿಗೆ ಅಭಿಷೇಕ ಮಾಡಿಸಿ ನಂತರ ಪ್ರಸಾದ ವಿನಿಯೋಗಸಿದ್ದೇ ಆದರೆ ಅಂತಹ ಮಾನವರಿಗೆ ಬ್ರಹ್ಮಹತ್ಯ ದೋಷ, ಗುರುಹತ್ಯಾದೋಷ, ಸ್ತ್ರೀಹತ್ಯಾದೋಷ ಯಾವುದೇ ಇದ್ದರೂ ನಿವಾರಣೆ ಆಗುತ್ತದೆ ಎಂದು ಹಿಂದೆ ಕ್ರಿಸ್ತಪೂರ್ವದಲ್ಲಿ ದತ್ತಾತ್ರೇಯರು ತಮ್ಮ ಶಿಷ್ಯರಿಗೆ ಬೋಧಿಸಿದ್ದಾರೆ.[೬] ಇಂದಿಗೂ ಜನರು ಇದರಲ್ಲಿ ನಂಬಿಕೆ ಇಟ್ಟಿದ್ದಾರೆ. ಈಗಲೂ ಗಿರಿಯ ಮೇಲೆ ಶಿವರಾತ್ರಿ, ಭೀಮನ ಅಮಾವಾಸ್ಯೆ, ಕಾರ್ತಿಕ ಮಾಸದಲ್ಲಿ ವಿಶೇಷ ಪೂಜೆ ದಾಸೋಹಗಳು ನಡೆಯುತ್ತವೆ.

ಒಟ್ಟಿನಲ್ಲಿ ಶಿವಗಂಗಾ ಕ್ಷೇತ್ರ ದಕ್ಷಿಣ ಕಾಶಿಯಾಗಿ ಯಾತ್ರಿಗಳ ಕ್ಷೇತ್ರವಾಗಿದೆ. ಪ್ರತಿನಿತ್ಯ ಸಾವಿರಾರು ಭಕ್ತರು ಯಾತ್ರೆಗೆ ಈ ಕ್ಷೇತ್ರಕ್ಕೆ ಬಂದು ಇಷ್ಟಾರ್ಥಗಳನ್ನು ಪಡೆದು ಧನ್ಯರಾಗುತ್ತಿದ್ದಾರೆ ಎಂದರೆ ಅತಿಶಯೋಕ್ತಿಯಾಗಲಾರದು.

**೪.೧.೨ ಮಹಿಮಾಪುರ**

ಮಹಿಮಾಪುರವು ನೆಲಮಂಗಲದ ಬಹುಮುಖ್ಯವಾದ ಯಾತ್ರಾಸ್ಥಳವಾಗಿ ಗುರುತಿಸಿಕೊಂಡಿದೆ. ನೆಲಮಂಗಲ-ತುಮಕೂರು ರಾಷ್ಟ್ರೀಯ ಹೆದ್ದಾರಿಯ ಪಕ್ಕದಲ್ಲಿ ನೆಲಮಂಗಲದಿಂದ ಸುಮಾರು ೧೩ ಕಿ.ಮೀ. ದೂರಕ್ಕೆ ಮಹಿಮಾಪುರವಿದೆ. ಮಹಿಮಾಪುರದಲ್ಲಿ ಮಹಿಮೆರಂಗನ ಬೆಟ್ಟವಿದ್ದು, ಈ ಬೆಟ್ಟವು ೩೦೦ ಅಡಿ ಎತ್ತರವನ್ನು ಹೊಂದಿದೆ. ಹತ್ತಲು ಮೆಟ್ಟಿಲುಗಳೂ ಇದ್ದು ಸಮತಟ್ಟಾದ ಬೆಟ್ಟದ ಮೇಲ್ಭಾಗದಲ್ಲಿ ರಂಗನಾಥನ ದೇವಾಲಯವಿದೆ. ವಿವಿಧ ಪಂಗಡದ ಜನರು ಇಲ್ಲಿನ ರಂಗನಾಥನನ್ನು ಮನದೇವರಾಗಿ ಪೂಜಿಸುತ್ತಾರೆ. ಇಲ್ಲಿ ಗರುಡನ ಮೂರ್ತಿಯನ್ನು ಕಾಣಬಹುದಾಗಿದೆ. ಈ ದೇವಾಲಯಕ್ಕೆ ಜನರು ಯಾತ್ರೆ ಕೈಗೊಂಡರೆ ಸರ್ಪದೋಷ ಪರಿಹಾರವಾಗುತ್ತದೆ ಎಂಬ ಪ್ರತೀತಿ ಸೇರಿಕೊಂಡಿದ್ದು, ಈಗಲೂ ಜನರು ಇದನ್ನು ನಂಬುತ್ತಾರೆ. ರಂಗನಾಥನ ಶಿಲ್ಪವು ಶಂಖ, ಚಕ್ರ, ಅಭಯ ಹಾಗೂ ವರದ ಲಕ್ಷಣಗಳನ್ನು ಹೊಂದಿರುವ ವೆಂಕಟರಮಣನ ಶಿಲ್ಪವೇ ಆಗಿದೆ. ರಥಸಪ್ತಮಿಯಿಂದ ಒಂಭತ್ತು ದಿನಗಳಿಗೆ ಸರಿಯಾಗಿ ಮಹಿಮೆರಂಗನ ರಥೋತ್ಸವ ನಡೆಯುತ್ತದೆ. ಈ ರಥೋತ್ಸವದ ದಿನ ಉತ್ಸವ ಮೂರ್ತಿಯಾದ ಮಹಿಮೆರಂಗನಾಥನನ್ನು ರಥದಲ್ಲಿ ಪ್ರತಿಷ್ಠಾಪಿಸಿ, ಅಲಂಕಾರ ಮಾಡಲಾಗಿ ರಥವನ್ನು ಎಳೆಯಲಾಗುತ್ತದೆ. ಈ ರಥ ಎಳೆಯುವ ಮೊದಲು ಗರುಡ ಪಕ್ಷಿಯೂ ಬಂದು ಈ ರಥದ ಸುತ್ತಲೂ ಮೂರು ಸುತ್ತು ಹಾಕಿದ ನಂತರ ಮುಂದಕ್ಕೆ ಚಲಿಸುತ್ತದೆ. ಈ ನೋಟವನ್ನು ಈಗಲೂ ನೋಡಬಹುದಾಗಿದೆ. ರಥವು ಮುಂದಕ್ಕೆ ಚಲಿಸಿದಂತೆ ಭಕ್ತಾದಿಗಳು ದಾವನಪತ್ರೆಯನ್ನು ಸೇರಿಸಿದ ಬಾಳೆಹಣ್ಣನ್ನು ಎಸೆಯುತ್ತಾರೆ. ಇದರಿಂದ ನಮ್ಮ ಪಾಪಗಳು ನಾಶವಾಗುತ್ತವೆ ಎಂಬ ನಂಬಿಕೆ ಜನರಲ್ಲಿ ಈಗಲೂ ಇದ್ದು, ಜನರು ಯಾತ್ರೆ ಕೈಗೊಳ್ಳುವ ಪ್ರಮುಖ ಯಾತ್ರಾಸ್ಥಳವಾಗಿದೆ.

**೪.೨. ನೆಲಮಂಗಲ ತಾಲ್ಲೂಕಿನ ಮಠಗಳು**

ನಮ್ಮ ನಾಡಿನಲ್ಲಿ ಬಹಳ ಹಿಂದೆ ವಿವಿಧ ಮಠಗಳು ಆಶ್ರಮಗಳು ಮತ್ತು ಧಾರ್ಮಿಕ ಕೇಂದ್ರಗಳು ತಮ್ಮ ಸಮುದಾಯದವರ ಅನುಯಾಯಿಗಳ ಆಚಾರ-ವಿಚಾರ, ನಡೆ-ನುಡಿ, ಜೀವನಕ್ರಮಗಳ ಬಗ್ಗೆ ಮಾರ್ಗದರ್ಶನ ನೀಡುವ ಕೇಂದ್ರಗಳಾಗಿದ್ದವು. ಕಾಲಕ್ರಮೇಣ ಈ ಗುರಿ, ಉದ್ದೇಶಗಳು ಮತ್ತಷ್ಟು ವಿಶಾಲವಾದ ವ್ಯಾಪ್ತಿಯನ್ನು ಪಡೆದು ಇಂದು ಅವು ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳ ಹಾಗೂ ಶಿಕ್ಷಣಾಭಿವೃದ್ಧಿಯ ಕೇಂದ್ರಗಳೂ ಆಗಿವೆ. ಇತ್ತೀಚಿನ ದಶಕಗಳಲ್ಲಿ ರಾಜಕೀಯ ಕ್ಷೇತ್ರದಲ್ಲೂ ಇವು ಪ್ರಭಾವ ಬೀರುತ್ತಿವೆ.[೮] ಇದರಿಂದ ಮಠಗಳು ಬಹುಮುಖಿ ಚಟುವಟಿಕೆಗಳಲ್ಲಿ ಪಾಲ್ಗೊಂಡಿವೆ ಎಂದರೆ ತಪ್ಪಾಗಲಾರದು.

ನೆಲಮಂಗಲ ತಾಲ್ಲೂಕಿನಲ್ಲಿ ವೀರಶೈವ ಮಠಗಳು ಅಧಿಕ ಸಂಖ್ಯೆಯಲ್ಲಿದ್ದು ಇವು ಇಲ್ಲಿನ ಧಾರ್ಮಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಗೆ ವಿಶೇಷ ಕೊಡುಗೆಯನ್ನು ನೀಡಿವೆ. ಅವುಗಳನ್ನು ಇಲ್ಲಿ ವಿವರಿಸಬಹುದಾಗಿದೆ.

**೪.೨.೧ ಬಸವಣ್ಣ ದೇವರ ಮಠ**

ನೆಲಮಂಗಲದ ಕೇಂದ್ರಸ್ಥಾನದಲ್ಲಿ ಬಸವಣ್ಣ ದೇವರ ಮಠ ಎಂದು ಕರೆಯಲಾಗುವ ಪ್ರಾಚೀನ ವೀರಶೈವ ಪೀಠವಿದೆ. ಈ ಮಠವು ಧಾರ್ಮಿಕವಾಗಿ ಶಿವನ ಆರಾಧನೆ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ಹೊಂದಿದೆ. ಅಲ್ಲದೇ

ಶೈಕ್ಷಣಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದು, ಬಡ ವಿದ್ಯಾರ್ಥಿಗಳಿಗಾಗಿ ಒಂದು ಉಚಿತ ವಿದ್ಯಾರ್ಥಿನಿಲಯ ಮತ್ತು ಎರಡು ಶಾಲೆಗಳನ್ನು ನಡೆಸುತ್ತಿದೆ. ಹಾಗೆಯೇ ಇತ್ತೀಚೆಗೆ ಬಾಲಕಿಯರ ವಿದ್ಯಾಭ್ಯಾಸಕ್ಕಾಗಿ ಬಾಲಕಿಯರ ಪದವಿ ಪೂರ್ವ ಕಾಲೇಜನ್ನು ಸ್ಥಾಪಿಸಿದೆ. ಬಸವಣ್ಣ ದೇವರ ಮಠವು ಬಡಮಕ್ಕಳ ವಿದ್ಯಾಭ್ಯಾಸಕ್ಕೆ ಸೌಲಭ್ಯಗಳನ್ನು ಒದಗಿಸುತ್ತಿದ್ದು, ಇದನ್ನು 'ಮಕ್ಕಳ ಬಸವಣ್ಣ ದೇವರ ಮಠ' ಎಂದೂ ಸಹ ಕರೆಯಲಾಗುತ್ತಿದೆ.

### ೪.೨.೨. ಮೇಲಣಗವಿ ಮಠ

ನೆಲಮಂಗಲ ತಾಲ್ಲೂಕಿನ ಶಿವಗಂಗೆಯಲ್ಲಿ ಅರವತ್ತನಾಲ್ಕು ವೀರಶೈವ ಮಠಗಳಿದ್ದವು ಎಂದು ಶಾಸನಗಳಲ್ಲಿ ಉಲ್ಲೇಖವಿದ್ದು, ಇಲ್ಲಿ ಇಂಥ ಕಾರ್ಯಗಳು ನಡೆದಿದ್ದವು ಎಂಬುದನ್ನು ಸಮರ್ಥಿಸುತ್ತವೆ. ಈ ಎಲ್ಲಾ ಮಠಗಳು ಧರ್ಮ, ದರ್ಶನ, ಸಾಹಿತ್ಯ, ಸಂಸ್ಕೃತಿಗಳ ಬೋಧನಾ ಕೇಂದ್ರಗಳಾಗಿದ್ದವು. ಗುಬ್ಬಿಯ ಮಲ್ಲಣಾಚಾರ್ಯನ ವೀರಶೈವ ಮಹಾಪುರಾಣ, ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ, ಸಿದ್ಧನಂಜೇಶನ ಗುರುರಾಜ ಚಾರಿತ್ರಯ, ಶಾಂತೇಶನ ಸಿದ್ಧೇಶ್ವರ ಪುರಾಣ, ಚೆನ್ನವೀರ ಜಂಗಮನ ಷಟ್‌ಸ್ಥಲವಲ್ಲಭ, ವಿರಕ್ತ ತೋಂಟದಾರ್ಯನ ಸಿದ್ಧೇಶ್ವರಪುರಾಣ, ಸುಪ್ಪಿಮಲ್ಲನ ಸಾಂಗತ್ಯ, ಕಳಲೆ ನಂಜರಾಜನ ಕಕುದ್ಗಿರಿ ಮಹಾತ್ಮೆ ಕೃತಿಗಳು ಇಲ್ಲಿ ರಚನೆಯಾಗಿವೆ. ಆದರೆ ಅರವತ್ತನಾಲ್ಕರಲ್ಲಿ ಇಂದು ನಾಲ್ಕು ಮಠಗಳೂ ಉಳಿದಿಲ್ಲ. ಅಂದಿನಿಂದಲೂ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿರುವ ಏಕೈಕ ಮಠವೆಂದರೆ ಮೇಲಣಗವಿ ಮಠ.

ಮೇಲಣಗವಿ ಮಠವನ್ನು ಶಿವಗಂಗೆಯಲ್ಲಿ ರೇಣುಕಾಚಾರ್ಯರು ತಮ್ಮ ಸಂಚಾರದ ಸಮಯದಲ್ಲಿ ಅನುಷ್ಠಾನ ಮಾಡಿ ಸ್ಥಾಪಿಸಿದರು. ರೇವಣಸಿದ್ಧರು ರುದ್ರಮುನಿಗಳಿಗೆ ಶಿವದೀಕ್ಷೆ ನೀಡಿದ ಮಹತ್ವದ ಸ್ಥಾನ ಎಂದು ಪರಂಪರೆಯ ಗಟ್ಟಿಯಾದ ನಂಬಿಕೆ ಇದ್ದು, ಷಟ್ಸ್ಥಲ ಸಿದ್ಧಾಂತವನ್ನು ಉಪದೇಶ ಮಾಡಿದ ಗುರುಸ್ಥಾನವಾಗಿದೆ. ಈ ಮಠವನ್ನು ವಾಸ್ತು ಪ್ರಕಾರ ನಿರ್ಮಿಸಲಾಗಿದ್ದು, ಇದು ತನ್ನದೇ ಆದ ಕಲಾಶೈಲಿಯನ್ನು ಒಳಗೊಂಡಿದೆ. ಗವಿಯ ದ್ವಾರದಲ್ಲಿ ಗಾರೆ ಗೋಪುರವಿದೆ. ದ್ವಾರದ ಶಿರೋಭಾಗದಲ್ಲಿ 'ಬಸವ ಲಿಂಗು' ಉಬ್ಬುಶಿಲ್ಪವಿದ್ದು ಬಾಗಿಲಿನ ಮೇಲೆ ಗಜಲಕ್ಷ್ಮಿಯ ಕೆತ್ತನೆ, ಸುತ್ತಲೂ ಸುಂದರವಾದ ಬಳ್ಳಿಗಳನ್ನೂ ಬಿಡಿಸಲಾಗಿದೆ. ಕಂಬದ ಮೇಲ್ಭಾಗದಲ್ಲಿ ಪದ್ಮ, ಶಿವಯೋಗಿ, ಗಿರಿಜಾಕಲ್ಯಾಣ, ಭೈರವ, ನಂದಿ, ಶಿವ-ಪಾರ್ವತಿ, ಗಣಪತಿ ಮುಂತಾದ ಉಬ್ಬುಶಿಲ್ಪಗಳಿವೆ.[೮] ಇತ್ತೀಚಿಗೆ ಗರ್ಭಗುಡಿಯಲ್ಲಿ ರೇಣುಕರ ವಿಗ್ರಹ ಮತ್ತು ಗಣಪತಿ ವಿಗ್ರಹಗಳನ್ನು ಸ್ಥಾಪನೆ ಮಾಡಲಾಗಿದೆ. ಇದು ಸುಂದರವಾದ ವಾಸ್ತುವಿನ್ಯಾಸವನ್ನು ಹೊಂದಿರುವ ಮಠವಾಗಿದೆ. ಮೇಲಣಗವಿಮಠದ ವಿಶೇಷವಾದ ಹಬ್ಬ ಅಂದರೆ 'ಶಾಂತಮ್ಮನ ಆರಾಧನೆ'. ಈ ತಾಯಿಯು ದೇಮುಂಡನಹಳ್ಳಿ ಪಾಳೇಗಾರನ ಮಗಳು ಎಂಬುದು ಪರಂಪರೆಯಿಂದ ತಿಳಿಯುತ್ತದೆ. ಶಾಂತಮ್ಮ ರೇಣುಕಾಚಾರ್ಯರನ್ನು ನೋಡಲು ಬಂದಾಗ ಇಲ್ಲಿಯೇ ಐಕ್ಯವಾದಳು. ಇದರ ನೆನಪಿಗಾಗಿ ಶಿವರಾತ್ರಿ-ಯುಗಾದಿ ಅಮಾವಾಸ್ಯೆಯ ಮಧ್ಯದಲ್ಲಿ ಶುಕ್ರವಾರ ಅಥವಾ ಮಂಗಳವಾರ ಹಬ್ಬ ಮಾಡುವ ರೂಢಿಯಿದೆ. ಹೊಂಬಾಳೆ ಕಳಸ ಮಾಡಿ, ಒಡವೆ, ವಸ್ತ್ರವಿಟ್ಟು ಪೂಜೆ ಮಾಡಿ ಪ್ರಸಾದವನ್ನು ನೈವೇದ್ಯ ಮಾಡುವುದು ಇದರ ವಿಶೇಷವಾಗಿದೆ. ಈ ರೀತಿಯಾಗಿ ಇಂದಿಗೂ ಜಾತ್ರೆ ಉತ್ಸವಗಳು ನಡೆಯುತ್ತಿದ್ದು, ಜನರು ಸಾಂಸ್ಕೃತಿಕವಾಗಿ ಒಂದುಗೂಡಲು ಈ ಮಠವು ಸಹಕಾರಿಯಾಗಿದೆ.

ವೀರಶೈವ ಪರಂಪರೆಯಲ್ಲಿ ಮಹತ್ವದ ಸ್ಥಾನವನ್ನು ಪಡೆದಿರುವ ಮೇಲಣಗವಿ ಮಠವು ಸುತ್ತಮುತ್ತಲಿನ ಪ್ರದೇಶಗಳಿಗೆ ಹೆಸರಾಗಿದ್ದು, ಅಂದು ಮಠದಲ್ಲಿ ನಡೆಯುತ್ತಿದ್ದ ಕಾರ್ಯಕ್ರಮಗಳು, ಜಯಂತ್ಯೋತ್ಸವಗಳು, ಗೋಷ್ಠಿಗಳು ವಿಜೃಂಭಣೆಯಿಂದ ನಡೆದುಕೊಂಡು ಬರುತ್ತಿದ್ದವು. ಗುಬ್ಬಿ ಮಲ್ಲಣಾರ್ಯರು ಮೇಲಣಗವಿ

ಮಠದಲ್ಲಿ ನೆಲೆಸಿ ಅನೇಕ ಗ್ರಂಥಗಳನ್ನು ರಚಿಸಿದ್ದಾನೆ. ಕ್ರಿ.ಶ. ೧೫೩೦ರಲ್ಲಿ 'ವೀರಶೈವಾಮೃತ' ಪುರಾಣವನ್ನು ರಚಿಸಲಾಯಿತು. ಈ ಕೃತಿಯು ವೀರಶೈವ ಧರ್ಮದ ವಿಶ್ವಕೋಶವೆನಿಸಿದೆ.

ಧರೆಗೆ ದಕ್ಷಿಣ ಮಹಾಕೈಲಾಸ ವೀರೇಶ
ಗುರುಪಂಚಕ ಕಳಸ ಮುದ್ರಾಚಿತಾಧಿಕ ಗುಪ್ತ
ಸರಸಿನದಿ ಶಿಖರದ ಸಂಭವ ತೀರ್ಥಕುಂಭಜಕೃಪಾವರದ ದರುಶ ಗಂಗಾ
ಧರಪಾದಾಗ್ರ ಪರಿಷನ್ಮಹಿಷ ದುಷ್ಪನಂ
ಹರಣ ಹೊನ್ನಾಂಬಿಕಾನಾಥ ವಿಲಸತ್ಕಕುದ್ಗಿರಿಯ
ಮೇಲಣ ಗವಿಯ ಸಿಂಹಾಸನದ ಪರಮಮಹತ್ತೆಸೆದಧು

(ಗುಬ್ಬಿಯ ಮಲ್ಲಣಾರ್ಯ, ವೀರಶೈವಾಮೃತ ಮಹಾಪುರಾಣ)

ಇದರಿಂದ ಈ ಮಠವು ಶೈಕ್ಷಣಿಕ ಚಟುವಟಿಕೆಗಳಲ್ಲಿ ಪ್ರಮುಖ ಪಾತ್ರ ವಹಿಸಿ ಅನೇಕ ಕವಿಗಳಿಗೆ ಆಶ್ರಯತಾಣವಾಗಿತ್ತು ಎಂಬುದನ್ನು ತಿಳಿಯಬಹುದಾಗಿದೆ. ಇಂದು ಕೂಡ ಶ್ರೀಮಠದ ವತಿಯಿಂದ ಗ್ರಾಮಾಂತರ ಪ್ರದೇಶಗಳಲ್ಲಿ ಶಿಕ್ಷಣ ನೀಡುವ ಸದುದ್ದೇಶದಿಂದ ಎಸ್.ಜೆ.ಆರ್.ಎಸ್. ವಿದ್ಯಾಸಂಸ್ಥೆಯನ್ನು ಸ್ಥಾಪಿಸಲಾಗಿದೆ. ನೆಲಮಂಗಲ ತಾಲ್ಲೂಕಿನ ಕುಲುವನಹಳ್ಳಿಯಲ್ಲಿ ಪ್ರೌಢಶಾಲೆ ಹಾಗೂ ಶ್ರೀಮಠದಲ್ಲಿಯೇ ವಿಶ್ವಾರಾಧ್ಯ ಪ್ರೌಢಶಾಲೆಗಳು ನಡೆಯುತ್ತಿವೆ.

ಶಿವಗಂಗೆಯ ಮಠಗಳಲ್ಲಿ ಮೇಲಣಗವಿ ವೀರಸಿಂಹಾಸನವು ಪ್ರಮುಖವಾಗಿದ್ದು, ಆ ಮಠಕ್ಕೆ ಹೊಯ್ಸಳರಾಜರು, ವಿಜಯನಗರದ ರಾಜರು, ಕೆಳದಿಯ ಅರಸರು ದಾನ-ದತ್ತಿಗಳನ್ನು ನೀಡಿದ್ದಾರೆ.

ಮೇಲಣಗವಿ ಮಠವು ಶಾಸನಗಳಲ್ಲೂ ಬಿಂಬಿತವಾಗಿವೆ. ಮಹಾದ್ವಾರದ ಕಲ್ಲು ಆನೆಗಳ ಪಾವಟಿಗ ಹತ್ತಿರ ಒಂದೇ ಒಂದು ಮುಂಭಾಗದ ಕಂಬದಲ್ಲಿ ಶಾಸನ ಕೆತ್ತಲಾಗಿದೆ. ಇದು ವೀರಭದ್ರಸ್ವಾಮಿಯ ಸೇವೆಗೆ ಕೊಟ್ಟ ಗಂಟೆಯ ಶಾಸನ (ನೆಲ-೭೬)ವಾಗಿದೆ. ಕ್ರಿ.ಶ. ೧೫೪೪ರ ಶಾಸನ (ನೆಲ -೮೧) ವಿಜಯನಗರದ ವೀರ ಸದಾಶಿವ ಮಹಾರಾಯರು ರಾಜ್ಯವಾಳುತ್ತಿದ್ದು, ಮೇಲಣಗವಿ ಮಠಕ್ಕೆ ಸಲ್ಲುವ ಪುರಗಳನ್ನು "ಭಂತಿಯ ಬಸವಣ್ಣ ನಾಯಕರ ಮಗನಿಗೆ ಸದಾಶಿವಮಹಾರಾಯರು" ನೀಡಿದ ಕೊಡುಗೆಯನ್ನು ತಿಳಿಸುತ್ತದೆ.[೮] ಇನ್ನೂ ಹಲವು ಶಾಸನಗಳು ಈ ಮಠಕ್ಕೆ ದಾನದತ್ತಿ ನೀಡಿರುವ ಉಲ್ಲೇಖವನ್ನು ತಿಳಿಸುತ್ತವೆ.

ಪ್ರಮುಖವಾಗಿ ಶಿವಗಂಗೆಯಲ್ಲಿ ಇಂದು ವಿಶಿಷ್ಟಾದ್ವೈತ ಹಾಗೂ ಅದ್ವೈತಗಳ ಪ್ರಾತಿನಿಧಿಕ ಮಠಗಳಿವೆ. ಶ್ರೀಶೃಂಗೇರಿ ಪೀಠದ ಶಾರದಾ ಮಠ, ಉಜ್ಜಯನಿ ಪೀಠದ ಶಾಖೆಯಿಂದ ಹೊನ್ನಮ್ಮನ ಗವಿ ಮಠಗಳಿವೆ. ಇವುಗಳು ಕೂಡ ಮೇಲಣಗವಿ ಮಠದ ಜೊತೆ ಕಾರ್ಯಗಳಲ್ಲಿ ಭಾಗವಹಿಸುತ್ತವೆ. ಶ್ರೀಮಠದಲ್ಲಿ ಅಮಾವಾಸ್ಯೆಯ ದಿನಗಳಂದು ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತದೆ. ಅಷ್ಟೇ ಅಲ್ಲದೇ ಮಠಾಧಿಪತಿಗಳು ಗ್ರಾಮಾಂತರ ಪ್ರದೇಶಗಳಲ್ಲಿ ರೇಣುಕರ ಮತ್ತು ಬಸವಣ್ಣನವರ ಸಂದೇಶಗಳನ್ನು ಸಮಾನವಾಗಿ ಕಾಣಲಾಗಿ, ಪ್ರಸಾರ ಮಾಡಿ ಧರ್ಮ ಜಾಗೃತಿಯ ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇಂದಿಗೂ ಮಕರ ಸಂಕ್ರಾಂತಿಯಂದು ಶಿವಗಂಗೆ ಜಾತ್ರೆಗೆ ಬರುವ ಭಕ್ತಾದಿಗಳಿಗೆ ಮೇಲಣಗವಿ ಮಠವು ಅನ್ನ ದಾಸೋಹ ನಡೆಸುತ್ತದೆ. ಒಟ್ಟಾರೆಯಾಗಿ ಮೇಲಣಗವಿಯು ಪ್ರಶಾಂತ ವಾತಾವರಣ ಆಧ್ಯಾತ್ಮಿಕ ಸಾಧನೆಗೆ ತಕ್ಕ ಸನ್ನಿವೇಶವನ್ನು ಒದಗಿಸಿ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಸಂವರ್ಧನೆಗೆ ಕಾರಣೀಭೂತವಾಗಿದೆ ಎನ್ನಬಹುದು.

**೪.೨.೩ ಕಂಬಾಳು ಮಠ**

ಶಿವಗಂಗಾ ಕ್ಷೇತ್ರದ ಪೂರ್ವಭಾಗದಲ್ಲಿ ಕಂಬಾಳು ಮಠವಿದೆ. ಇದು ಶ್ರೀಶೈಲಸೂರ್ಯ ಸಿಂಹಾಸನದ ಶಾಖಾಮಠವಾಗಿದ್ದು, ಇಲ್ಲಿ ಮಲ್ಲಿಕಾರ್ಜುನ ಸ್ವಾಮಿ ಮತ್ತು ಶ್ರೀಮಠರಳು ಸಿದ್ದೇಶ್ವರ ಸ್ವಾಮಿಯನ್ನು ಪೂಜಿಸುತ್ತಾರೆ. ರುದ್ರಮುನಿ ಸ್ವಾಮಿಯ ಗುಹಾಂತರ ದೇವಾಲಯದ ಹೊರವಲಯದಲ್ಲಿ ಒಂದು ಕಲ್ಲಿನ ಮಂಟಪವಿದೆ. ಅದನ್ನು ಕಟ್ಟಿಸಿದ ಕಾರಣಕ್ಕೆ ಒಬ್ಬ ದೊರೆಯ ಮಗಳ ಕಥೆಯಿದೆ. ಅದು ಶಾಂತಮ್ಮನ ಹಬ್ಬದ ಕಥೆಯಾಗಿದ್ದು, ಶಾಂತಮ್ಮ ಮೇಲಣಗವಿ ಮಠದ ರೇಣುಕಾಚಾರ್ಯರನ್ನು ನೋಡಲು ಬಂದು ಶಿವಗಂಗೆಯಲ್ಲಿ ಐಕ್ಯವಾದಳು. ಇವಳ ನೆನಪಿಗಾಗಿ ಪ್ರತಿ ಯುಗಾದಿಯ ಶುಕ್ರವಾರ ಅಥವಾ ಮಂಗಳವಾರ ಶಾಂತಮ್ಮ ಎಂಬ ಮಹಿಳೆಯ ಹೆಸರಿನಲ್ಲಿ ಕಲಶಾರಾಧನೆ ಮಾಡಿ ಮುತ್ತೈದೆಯರಿಗೆ ಬಾಗಿನ ಕೊಡುತ್ತಾರೆ.[೯೯] ಶಿವಗಂಗೆಯ ಮಠವು ನಡೆಸುವ ರೀತಿಯಾಗಿಯೇ ಕಂಬಾಳು ಮಠವು ಈ ಹಬ್ಬವನ್ನು ಇಲ್ಲಿ ನಡೆಸುತ್ತಿದೆ.

**ಆಶ್ರಮಗಳು**

ಯಾವುದೇ ಒಂದು ಹೊಸ ಊರು ಸ್ಥಾಪನೆಗೊಂಡರೆ ಅದರ ಜೊತೆ ಮೊದಲು ದೇವಸ್ಥಾನಗಳು ಮತ್ತು ಭಜನಾ ಮಂದಿರಗಳು ಹುಟ್ಟಿಕೊಳ್ಳುತ್ತಿದ್ದವು. ಎಲ್ಲರೂ ಮೊದಲು ಧಾರ್ಮಿಕ ಕಟ್ಟುನಿಟ್ಟುಗಳಿಗೆ ಬದ್ಧರಾಗಿದ್ದರು. ತಮ್ಮ ತಮ್ಮ ಜಾತಿ-ಗುಂಪು ಶಕ್ತಿಯುತವಾದಾಗ ಅಥವಾ ರಕ್ಷಣೆ ಅವಶ್ಯಕ ಎನಿಸಿದಾಗ ತಮ್ಮದೇ ಆದ ಸಂಘ ಸಂಸ್ಥೆಗಳನ್ನು ಕಟ್ಟಿಕೊಂಡರು. ಇಂಗ್ಲಿಷರ ಆಗಮನ, ಕ್ರಿಶ್ಚಿಯನ್ ಸಂಸ್ಕೃತಿಯ ಹರಡುವಿಕೆಯಿಂದ ಹಿಂದಿನ ಸಂಸ್ಕೃತಿಯನ್ನು, ಆಚಾರ-ಸಂಪ್ರದಾಯ-ನಂಬಿಕೆಗಳನ್ನು, ಕಟ್ಟು-ಪಾಡುಗಳನ್ನು ಅಲುಗಾಡಿಸಿತು. ಧರ್ಮ ಬಿಟ್ಟು ಹೋಗುವುದು ಪ್ರಾರಂಭವಾಯಿತು. ಇದರಿಂದ ಅನೇಕ ಆಶ್ರಮಗಳು ಉದಯವಾದವು. ಈ ಆಶ್ರಮಗಳು ನೆಲಮಂಗಲದ ಧಾರ್ಮಿಕತೆ, ಸಾಂಸ್ಕೃತಿಕ ಪರಂಪರೆಗೆ ತಮ್ಮದೇ ಆದ ಕೊಡುಗೆಗಳನ್ನು ನೀಡಿವೆ.

**ವಿಶ್ವಶಾಂತಿ ಆಶ್ರಮ**

ನೆಲಮಂಗಲದ ಅರಸಿನಕುಂಟೆಯ ಹೊರಭಾಗದಲ್ಲಿ ರಾಷ್ಟ್ರೀಯ ಹೆದ್ದಾರಿ ೪ಕ್ಕೆ ಹೊಂದಿಕೊಂಡಂತೆ ಇರುವ ಈ ಆಶ್ರಮವು ಸುಮಾರು ೩೦ ಅಡಿ ಎತ್ತರದ ವಿಠಲನ ವಿಗ್ರಹದ ಮೂಲಕ ಪ್ರಸಿದ್ಧವಾದುದು. ಭದ್ರಗಿರಿ ಅಚ್ಯುತದಾಸ ಹಾಗೂ ಕೇಶವದಾಸರ ಪರಿಶ್ರಮದ ಫಲವಾಗಿ ವಿಶ್ವಶಾಂತಿ ಆಶ್ರಮ ಸ್ಥಾಪನೆಯಾಯಿತು. ಇಲ್ಲಿ ಶ್ರೀಕೃಷ್ಣನ ವಿಶ್ವರೂಪ ದರ್ಶನದ ಬೃಹತ್ ವಿಗ್ರಹ ಇಲ್ಲಿದೆ. ಈ ಆಶ್ರಮದ ಒಳಗಡೆ ಗೋಡೆಯ ಸುತ್ತಲೂ ಶ್ರೀಕೃಷ್ಣನು ಅರ್ಜುನನಿಗೆ ಬೋಧಿಸಿದ ಭಗವದ್ಗೀತೆಯ ಶ್ಲೋಕಗಳನ್ನು ಬರೆಯಲಾಗಿದೆ. ಶ್ಲೋಕಗಳಿಗೆ ಸಂಬಂಧಿಸಿದ ಸಾರಾಂಶದ ಪಟ್ಟಿಯನ್ನು ನೀಡಲಾಗಿದೆ. ಇಲ್ಲಿ ಗಣೇಶ, ಗಾಯತ್ರಿ, ರಾಮ, ಆಂಜನೇಯ, ದತ್ತಾತ್ರೇಯ ಇತ್ಯಾದಿ ಚಿಕ್ಕದೇವಾಲಯಗಳೂ ಕೂಡ ಇವೆ. ಈ ಆಶ್ರಮದ ವಿಠಲನ ಮಂದಿರದ ಮುಂದೆ ಶ್ರೀಕೃಷ್ಣನು ಕುರುಕ್ಷೇತ್ರ ಯುದ್ಧದಲ್ಲಿ ಅರ್ಜುನನಿಗೆ ಸಾರಥಿಯಾಗಿ ಭಗವದ್ಗೀತೆಯನ್ನು ಬೋಧಿಸುತ್ತಿರುವ ದೃಶ್ಯವನ್ನು ಬಿಡಿಸಲಾಗಿ ಜನರ ಆಕರ್ಷಣೆಗೆ ಒಳಗಾಗಿದೆ. ಭಗವದ್ಗೀತೆಯ ಶ್ಲೋಕಗಳ ಸಾರಾಂಶವು ಮಾನವನ ಜೀವನವನ್ನು ಹಸನುಗೊಳಿಸುತ್ತದೆ. ಈ ಆಶ್ರಮವು ಧಾರ್ಮಿಕವಾಗಿ ವೈಷ್ಣವ ಧರ್ಮದ ಕೇಂದ್ರವಾಗಿದೆ. ಇಲ್ಲಿಯೇ ನೆಲೆಸಿರುವ ವೈಷ್ಣವದ ಎಲ್ಲಾ ಜನರು ಹಬ್ಬ ಹರಿದಿನಗಳನ್ನು ಈ ಆಶ್ರಮದ ವತಿಯಿಂದ ಸಾಮೂಹಿಕವಾಗಿ ಪೂಜಾ ಕೈಂಕರ್ಯಗಳನ್ನು ಕೈಗೊಳ್ಳುತ್ತಾರೆ.

**ಮಸೀದಿಗಳು**

ಮುಸ್ಲಿಂರು ಪ್ರಾರ್ಥನೆ ಸಲ್ಲಿಸಿ ಧಾರ್ಮಿಕ ಚಟುವಟಿಕೆಗಳನ್ನು ಕೈಗೊಳ್ಳುವ ಮಂದಿರಕ್ಕೆ ಮಸೀದಿ ಎಂದು ಕರೆಯುತ್ತಾರೆ. ದರ್ಗಾ ಮಸೀದಿಯಲ್ಲಿ ಅಜಾ ಕೂಗುವ ಗುರುಗಳು ಸತ್ತಾಗ ಅವರಿಗೆ ಗೋರಿ ಕಟ್ಟುತ್ತಾರೆ. ಈ

ಗೋರಿಗೆ ದರ್ಗಾಗಳೆಂದು ಕರೆಯುತ್ತಾರೆ. ನೆಲಮಂಗಲದಲ್ಲಿ **'ಹಾಜಿ ಸೈಯದ್‌ಷಾ ಸದ್ರುದ್ದೀನ್ ಹುಸೈನಿ'** ಎಂಬ ದರ್ಗವಿದೆ. ಇಲ್ಲಿ ಅವರ ಉರುಸ್ ವರ್ಷಕ್ಕೊಮ್ಮೆ ನಡೆಯುತ್ತದೆ. ನೆಲಮಂಗಲದ ನಿಜಗಲ್ಲು ಗ್ರಾಮದಲ್ಲಿ **'ಸೈಯ್ಯದ್ ಬಾಷಾ'** ಮತ್ತು **'ಷಾ ಕರೀಂ'**ರವರ ದರ್ಗಾಗಳಿವೆ.

ನೆಲಮಂಗಲದ ಪ್ರದೇಶದಲ್ಲಿನ ಮಸೀದಿಗಳು ಧಾರ್ಮಿಕತೆಯ ನೆಲೆಯಲ್ಲಿ ಹೆಚ್ಚಾಗಿ ಗುರ್ತಿಸಿಕೊಂಡಿವೆ. ಮಸೀದಿಯ ಗೋಡೆಗಳ ಮೇಲೆ ಹಿನ್ಸರಿದ ಕಮಾನಿನ ಕೋಷ್ಟಗಳನ್ನು ಕಾಣಬಹುದು. ಮಸೀದಿಯ ಧರ್ಮಶಾಲೆಯ ದಕ್ಷಿಣಕ್ಕೆ ಗುಮ್ಮಟವೊಂದು ಕಂಡುಬರುತ್ತದೆ. ಮಸೀದಿಯ ತಳಭಾಗ ಚೌಕಾಕರವನ್ನು ಹೊಂದಿದೆ. ಈ ಮಸೀದಿಯಲ್ಲಿ ಮುಸ್ಲಿಂರ ಸಮಾರಂಭಗಳೂ ಜರುಗುತ್ತವೆ. ಮಸೀದಿಗಳಲ್ಲಿ ದಿನನಿತ್ಯ ಐದು ಬಾರಿಗೆ ಪ್ರಾರ್ಥನೆ ಮಾಡಲಾಗುತ್ತದೆ. ಈ ಪಾರ್ಥನೆಯನ್ನು ಕೈಗೊಳ್ಳಲು ಮಸೀದಿಗೆ ಬರಬೇಕು. ದೈವಿಕ ಪ್ರೇಮದಲ್ಲಿ ಸದಾಕಾಲ ಮಗ್ನರಾಗಿ ತನ್ನ ಅರಿವನ್ನೇ ಮರೆಯುವವರಿಗೆ ಮಜೂಬ್ಸ್ ಎನ್ನುತ್ತಾರೆ. ಈ ಸಿದ್ಧಿಯನ್ನು ಪ್ರಾಪ್ತಿಸಿದ ಸಂತ ತನ್ನ ಮೇಲೆ ಕಡ್ಡಾಯವಾಗಿರುವ ಧಾರ್ಮಿಕ ಆಚರಣೆ, ಉದಾಃ ನಮಾಜ್, ರೋಜ್ ಹಜ್ ಮುಂತಾದವುಗಳಿಂದ ಸಂಪೂರ್ಣವಾಗಿ ಮುಕ್ತನಾಗುತ್ತಾನೆ.

ಮರಣದ ನಂತರ ಮುಸಲ್ಮಾನರು ಸಮಾಧಿಯ ಬಳಿ ಫಾತೇಹಾ ಸಲ್ಲಿಸಿ ಧನ್ಯರಾಗುತ್ತಾರೆ. ಉರಸ್ ವರ್ಷಕ್ಕೊಮ್ಮೆ ನಡೆಯುತ್ತದೆ. ಅತ್ಯಂತ ಶ್ರದ್ಧೆ, ಭಕ್ತಿಗಳಿಂದ ಆರಾಧಿಸುತ್ತಾರೆ. ಮನೆ, ಕಟ್ಟಡಗಳನ್ನು ಬಲೂನ್‌ಗಳಿಂದ ಅಲಂಕರಿಸಲಾಗುತ್ತದೆ. ಉರಸ್ ನಂತರ ಮರುದಿನ ಖವ್ವಾಲಿ, ಧಾರ್ಮಿಕ ಸಂಗೀತ ಕಛೇರಿ ಎನ್ನಬಹುದು. ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುತ್ತವೆ.

**೪.೩. ದೇವಾಲಯಗಳು**

ಒಂದು ಪ್ರದೇಶದ ಧಾರ್ಮಿಕ ಮತ್ತು ಸಾಂಸ್ಕೃತಿಕ ಸಂಪತ್ತು ಎನಿಸಿಕೊಂಡಿರುವ ದೇವಾಲಯಗಳು ಆ ಪ್ರದೇಶದ ಸಂಸ್ಕೃತಿಯನ್ನು ಶ್ರೀಮಂತಗೊಳಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಧಾರ್ಮಿಕ ಕಲ್ಪನೆಗಳ ಮೂಲಕ ಸಂಸ್ಕೃತಿಯನ್ನು ನಿರ್ಮಿಸಿಕೊಂಡ ಭಾರತೀಯರು ಪ್ರದೇಶದ ತುಂಬೆಲ್ಲಾ ದೇವಾಲಯಗಳನ್ನು ನಿರ್ಮಾಣ ಮಾಡಿದರು. ತಮ್ಮದೇ ಆದ ಆಚಾರ, ವಿಚಾರ, ನಂಬಿಕೆ, ಆಚರಣೆಗಳನ್ನು ಹೊಂದಿರುವ ಧರ್ಮದ ಹಿನ್ನೆಲೆಯಲ್ಲಿ ದೇವಾಲಯಗಳನ್ನು ನಿರ್ಮಾಣ ಮಾಡಿದ್ದರಿಂದ ಧಾರ್ಮಿಕವಾಗಿ ಭವ್ಯ ಪರಂಪರೆಯನ್ನು ಹೊಂದಿವೆ. ದೇವಾಲಯಗಳ ಅಧ್ಯಯನದಿಂದ ಅದರ ಕಲೆ ಮತ್ತು ವಾಸ್ತುಶಿಲ್ಪ, ಮೂರ್ತಿಶಿಲ್ಪ, ದೇವಾಲಯಗಳ ರಾಜಾಶ್ರಯ, ದಾನ-ದತ್ತಿ, ಧರ್ಮ, ಸಾಂಸ್ಕೃತಿಕವಾದ ಹಬ್ಬಹರಿದಿನಗಳು, ಜಾತ್ರೆ-ಉತ್ಸವಗಳು, ಸಂಗೀತ, ಸಾಹಿತ್ಯ, ಶಿಕ್ಷಣ ಮತ್ತು ನ್ಯಾಯಿಕ ಅಂಶಗಳನ್ನು ತಿಳಿಯಲು ಸಹಕಾರಿಯಾಗಿವೆ.

ವಿವಿಧ ಧರ್ಮಗಳ ಜನರಿಗೆ ಪ್ರತಿನಿತ್ಯ ಜೀವನದಲ್ಲಿ ಬರುವ ಹಲವಾರು ಕಷ್ಟಕಾರ್ಪಣ್ಯಗಳ ನಿವಾರಣೆಗೆ ಧಾರ್ಮಿಕ ಹಿನ್ನೆಲೆಯ ದೇವಾಲಯಗಳು ಆಧಾರವಾಗಿರುತ್ತವೆ. ಬೌದ್ಧ, ಜೈನ, ವೈಷ್ಣವ, ಶೈವ, ವೀರಶೈವ, ನಾಥ ಪಂಥ ಮುಂತಾದ ಬಹುಧಾರ್ಮಿಕ ಸಂಸ್ಕೃತಿಯ ಅಭಿವ್ಯಕ್ತಿ ರೂಪಗಳಾಗಿ ಮುಖ್ಯ ದೇವಾಲಯಗಳು ಬೆಳೆದುಬಂದಿವೆ.

ನೆಲಮಂಗಲ ತಾಲ್ಲೂಕು ಧಾರ್ಮಿಕವಾಗಿ ಸಾಮರಸ್ಯವನ್ನು ಹೊಂದಿದ್ದು, ಕೋಮುಸೌಹಾರ್ದಕ್ಕೆ ಮಾದರಿಯಾಗಿದೆ. ಈ ಪ್ರದೇಶದಲ್ಲಿ ಬೌದ್ಧ, ಜೈನ, ವೈಷ್ಣವ, ವೀರಶೈವ, ನಾಥಪಂಥಗಳು ನೆಲೆಗೊಂಡಿದ್ದು, ಈ ಎಲ್ಲಾ ಧರ್ಮಗಳ ಹಿನ್ನೆಲೆಯಲ್ಲಿ, ದೇವಾಲಯಗಳ ಅಧ್ಯಯನವನ್ನು ಮಾಡಲಾಗಿದೆ.

### ೪.೩.೧. ಬೌದ್ಧ ದೇವಾಲಯಗಳು

ನೆಲಮಂಗಲ ತಾಲ್ಲೂಕಿನಲ್ಲಿ ಬೌದ್ಧ ಧರ್ಮವು ಪ್ರಭಾವ ಬೀರಿತ್ತು. ಅಂದು ಶಿವಗಂಗೆಯು ಬೌದ್ಧ ಧರ್ಮದ ಮಹಾನ್ ಧಾರ್ಮಿಕ ಕೇಂದ್ರವಾಗಿದ್ದು, ಬೌದ್ಧರ ದೃಷ್ಟಿಯಿಂದ 'ವಜ್ರಯಾನ' ಮಾರ್ಗ ಇಲ್ಲಿ ಪ್ರಭಾವಶಾಲಿಯಾಗಿತ್ತು. ನಾಗಾರ್ಜುನನ 'ಪ್ರಜ್ಞಾ ಪಾರಮಿತಾ'ದ ವಿಕಸಿತ ರೂಪ 'ತಾರಾ ಭಗವತಿ' ಗ್ರಂಥದಲ್ಲಿ ಬೌದ್ಧ ಸಿದ್ಧರು 'ಶಾಕ್ತಪಂಥ'ವನ್ನು ತಾರಾಭಗವತಿ ರೂಪದಲ್ಲಿ ಹರಡಿದ್ದಾರೆ. ತಾರಾಭಗವತಿಯಲ್ಲಿ ವಜ್ರಯಾನ ಮುಖವಾದರೂ, ಲಕ್ಷ್ಮೀ, ಪಾರ್ವತಿ ಗೌರಿಯ ರೂಪವನ್ನು ಅವಳಲ್ಲಿ ಕಾಣಲು ಅನುಕೂಲವಾಯಿತು. ಮಹಾಕಾಳಿಯೂ ಕೂಡ ಬೌದ್ಧ ಧರ್ಮದಲ್ಲಿ ಜನಪದೀಯವಾದಳು. ಕ್ರಿ.ಶ. ೧೩೪೯ ರ ನೆಲಮಂಗಲದ ಶಾಸನದಲ್ಲಿ 'ಸಿವಗಂಗಿನಾಥ ದೇವರ ಗಿರಿ' ಎಂದಿರುವುದು, ಅಲ್ಲದೇ ಬೌದ್ಧ ಧರ್ಮದ ಚಿಹ್ನೆಯಾದ ಸುತ್ತುತ್ತಿರುವ ಚಕ್ರವು ಲಲಿತಾ ಪರಮೇಶ್ವರಿಯ ರೂಪ. ಶಿವಗಂಗೆಯ ಹೊನ್ನಾದೇವಿ ಹಿಂಭಾಗದಲ್ಲಿ ಈ ಚಕ್ರವನ್ನು ಆದಿಶಂಕರರು ಕೆತ್ತಿಸಿದರೆಂದು ಪ್ರತೀತಿ ಇದೆ. ಬೌದ್ಧ ಧರ್ಮದ ಸುತ್ತುತ್ತಿರುವ ಚಕ್ರ ಹೊನ್ನಾದೇವಿಯ ಹಿಂದೆ ಇದ್ದು, ಇಲ್ಲಿ ಬೌದ್ಧ ಧರ್ಮ ನೆಲೆಗೊಂಡಿದ್ದರ ಕುರುಹು ಆಗಿದೆ. ಸೀತೆ ಮತ್ತು ಹೊನ್ನಾದೇವಿಯ ಪಾದದ ಗುರುತು ಗಂಗಾತೀರ್ಥದ ಬಳಿಯಿದೆ. ಸ್ತಂಭಗಳನ್ನಿಟ್ಟು ಪಾದಗಳನ್ನು ಕೆತ್ತುವುದು ಬೌದ್ಧಧರ್ಮದ ಪದ್ಧತಿ.[೧೧]

ಸ್ಥಳ: ಶಿವಗಂಗೆ ಬೆಟ್ಟ

ಹೆಸರು: ಬೌದ್ಧ ಚೈತ್ಯದ ಮಾದರಿ

ಜಾಗ: ಶಿವಗಂಗೆ ಬೆಟ್ಟದ ಹೊನ್ನಾದೇವಿಯ

ದೇವಾಲಯದ ಮುಂಭಾಗದಲ್ಲಿ

ದಿಕ್ಕು: ಪಶ್ಚಿಮಾಭಿಮುಖವಾಗಿ

ಪಂಥ: ಬೌದ್ಧ

ಶಿವಗಂಗೆಯ ಮೂಲಸ್ಥಾನವನ್ನು ಸೂಕ್ಷ್ಮವಾಗಿ ಗಮನಿಸಿದರೆ ಬೌದ್ಧಧರ್ಮದ ಚೈತ್ಯಾದ ಮಾದರಿ ಕಂಡುಬರುತ್ತದೆ. ಇದನ್ನು ಗಮನಿಸಿದರೆ ಬೌದ್ಧ ಸಿದ್ಧರು ಈ ಗಿರಿಯನ್ನು ನೆಲೆಯಾಗಿಸಿಕೊಂಡು ಜನಾರಾಧನೆಗೆ ಅನುವು ಮಾಡಿದ್ದಾರೆ ಎಂಬುದರ ಪ್ರತೀಕ ತಿಳಿಯುತ್ತದೆ. ಅಶೋಕನ ಕಾಲದಲ್ಲಿ ಬೌದ್ಧ ಧರ್ಮ ಹೆಚ್ಚು ಪ್ರಚಲಿತವಾಯಿತು. ಅಶೋಕನು ಶಿವಗಂಗೆಗೆ ಬಂದು ಗಂಗಾಧರೇಶ್ವರ ಮತ್ತು ಹೊನ್ನಾದೇವಿಗೆ ಪೂಜೆ ಸಲ್ಲಿಸಿದನೆಂದು ಜನರ ನಂಬಿಕೆ ಇದೆ. ಇದು ಬೌದ್ಧ ಭಿಕ್ಷುಗಳ ಯಾತ್ರಾಸ್ಥಳವೂ ಆಗಿದೆ.

### ೪.೩.೨. ಜೈನ ದೇವಾಲಯಗಳು

ಜೈನ ದೇವಾಲಯಗಳು ನೆಲಮಂಗಲ ತಾಲ್ಲೂಕಿನ ಕೆಲವು ಪ್ರದೇಶಗಳಲ್ಲಿ ಕಂಡುಬರುತ್ತವೆ. ಮುಖ್ಯವಾಗಿ ಮಣ್ಣೆ ಅಥವಾ ಮಾನ್ಯಪುರದಲ್ಲಿ ಜೈನ ಧರ್ಮವು ಪ್ರಭಾವ ಬೀರಿದ್ದು, ಅನೇಕ ಜೈನ ಬಸದಿಗಳು ನಿರ್ಮಾಣವಾಗಿವೆ. ಮಣ್ಣೆಯನ್ನು ಗಂಗರು ತಮ್ಮ ತಾತ್ಕಾಲಿಕ ರಾಜಧಾನಿಯನ್ನಾಗಿ ಮಾಡಿಕೊಂಡು, ಜೈನ ಧರ್ಮಕ್ಕೆ ಸಾಕಷ್ಟು ಪ್ರೋತ್ಸಾಹ ನೀಡಿ ಅನೇಕ ಬಸದಿಗಳನ್ನು ನಿರ್ಮಾಣ ಮಾಡಿದ್ದಾರೆ. ನೆಲಮಂಗಲ ತಾಲ್ಲೂಕಿನ ಮಣ್ಣೆಯು ಜೈನರ ಧಾರ್ಮಿಕ ಕೇಂದ್ರವಾಗಿದ್ದು, ಇಲ್ಲಿನ ಜೈನರು ಎಲೆಕ್ಯಾತನಹಳ್ಳಿಯ ಮೂಲದವರಾಗಿದ್ದಾರೆ. ಇಲ್ಲಿ ಆಳ್ವಿಕೆ ಮಾಡಿದ ಶ್ರೀಪುರುಷ ಮಾರಸಿಂಹ, ನೀತಿಮಾರ್ಗ, ಭೂತುಗ ಜೈನ ಸಿದ್ಧಾಂತಗಳಲ್ಲಿ ಪಾರಂಗತರಾಗಿದ್ದು, ಜೈನ ಧರ್ಮದ ಬಸದಿಗಳ ನಿರ್ಮಾಣಕ್ಕೆ ದಾನ-ದತ್ತಿಗಳನ್ನು ನೀಡಿದ್ದಾರೆ.

ಸ್ಥಳ: ಮಣ್ಣೆ (ಮಾನ್ಯಪುರ)

ಹೆಸರು: ಶ್ರೀವಿಜಯ ಜಿನಾಲಯ ( ಜಿನೇಂದ್ರ ಭವನ)

ಜಾಗ: ಊರಿನ ಮಧ್ಯಭಾಗ

ದಿಕ್ಕು: ಪಶ್ಚಮಾಭಿಮುಖವಾಗಿ

ಪಂಥ: ಜೈನ

ಇಲ್ಲಿನ ಶ್ರೀವಿಜಯ ಜಿನಾಲಯ ಅಥವಾ ಈಗಿನ ಸೂಳೆಯರ ಗುಡಿ ಜೈನ ಧರ್ಮದ ಕುರುಹು ಆಗಿದೆ. ಯುವರಾಜ ಮಾರಸಿಂಹನ ಶಾಸನದ ಪ್ರಕಾರ ಮಾರಸಿಂಹನ ಅನುಮತಿಯಂತೆ, ಶ್ರೀವಿಜಯ ಎಂಬ ಅಧಿಕಾರಿಯು ಮಾನ್ಯಪುರದಲ್ಲಿ ಜಿನಾಲಯ (ಜಿನೇಂದ್ರ ಭವನ)ವನ್ನು ಕಟ್ಟಿಸಿದನು. ಆ ಜಿನಾಲಯಕ್ಕೆ ದೇವಭೋಗವಾಗಿ ಕಿರುವೆಕ್ಕೂರ ಗ್ರಾಮವನ್ನು ದಾನವಾಗಿ ನೀಡಿದ ವಿವರಗಳು ಶಾಸನದಲ್ಲಿವೆ. ಕ್ರಿ.ಶ. ೮೦೨ ರ ಶಾಸನ ರಾಷ್ಟ್ರಕೂಟ ಪ್ರಭೂತವರ್ಷನ ಆಳ್ವಿಕೆಯನ್ನು ಉಲ್ಲೇಖಿಸಿದ್ದು ಈ ಜಿನಾಲಯಕ್ಕೆ ಎಡೆದಂಡೆಯ ವಿಷಯದ ಪೆರ್ವ್ವಡಿಯನ್ನು ದಾನವಾಗಿ ನೀಡಿರುವುದನ್ನು ಉಲ್ಲೇಖಿಸಿದೆ.[೨] ರಂಗಭೋಗಕ್ಕಾಗಿ ಅಂದರೆ ಗಾಯನ, ನೃತ್ಯದ ಮೂಲಕ ಸೇವೆ ಮಾಡಲು ದಾನವಾಗಿ ನೀಡಿರುವುದನ್ನು ದಾಖಲಿಸಿದೆ.

ನೆಲಮಂಗಲದ ಶಿವಗಂಗೆಯಲ್ಲಿಯೂ ಜೈನಧರ್ಮ ಪ್ರಭಾವ ಬೀರಿತ್ತು. ಹೊಯ್ಸಳರ ವಿಷ್ಣುವರ್ಧನನ ರಾಣಿ ಶಾಂತಲೆಯು ಜೈನ ಧರ್ಮೀಯಳಾಗಿದ್ದು, ಶಿವಗಂಗೆಯಲ್ಲಿ ತನ್ನ ಜೀವಿತದ ಕೊನೆಯ ದಿನಗಳನ್ನು ಕಳೆದು ಆತ್ಮಾರ್ಪಣೆ ಮಾಡಿಕೊಂಡವಳಾಗಿದ್ದು, ಇವಳ ನೆನಪಿಗಾಗಿ ಜೈನ ಬಸದಿಯೊಂದನ್ನು ವಿಷ್ಣುವರ್ಧನನು ಕಟ್ಟಿಸಿದನು. ಈಗ ಇದು ಶಾಂತಲೇಶ್ವರ ದೇವಾಲಯವಾಗಿದೆ. ಜೈನರ ಪ್ರಭಾವವೂ ಜಿನಾಲಯಕ್ಕೆ ಶಾಸನೋಕ್ತ ದಾನವೂ ನೀಡಲಾಗಿದ್ದನ್ನು ಶ್ರವಣಬೆಳಗೊಳದ ಶಾಸನ ತಿಳಿಸುತ್ತದೆ. ಇದರಿಂದ ಶಾಂತಲೇಶ್ವರ ದೇವಾಲಯ ಜೈನ ದೇವಾಲಯದ ಪ್ರತೀಕ ಆಗಿದೆ.

**೪.೩.೩. ವೈಷ್ಣವ ದೇವಾಲಯಗಳು**

ವೈಷ್ಣವ ಪಂಥದವರು ವಿಷ್ಣುವಿನ ಆರಾಧಕರಾಗಿದ್ದು ಇವರ ಧರ್ಮದಲ್ಲಿ ವಿಷ್ಣು ಮತ್ತು ಅವನ ಅವತಾರಗಳ ದೇವಾಲಯಗಳನ್ನು ನಿರ್ಮಿಸಿದ್ದಾರೆ ಹೊಯ್ಸಳರ ಕಾಲದಲ್ಲಿ ವೈಷ್ಣವ ಧರ್ಮ, ನೆಲೆಯೂರಲು ರಾಮಾನುಜಾಚಾರ್ಯರು ಕಾರಣರಾಗಿ ಹೆಚ್ಚಾಗಿ ನರಸಿಂಹನ ಪೂಜೆಗೆ ವಿಶೇಷತೆ ನೀಡಿದರು. ನೆಲಮಂಗಲದ ಹಳೇ ನಿಜಗಲ್ಲು, ಮಣ್ಣೆ, ಮಹಿಮಾಪುರ ಗ್ರಾಮಗಳಲ್ಲಿ ವೈಷ್ಣವ ದೇವಾಲಯಗಳು ಕಂಡುಬಂದಿವೆ.

ನೆಲಮಂಗಲದ ಗಡಿಠಾಣೆಯಾಗಿರುವ ಹಳೇ ನಿಜಗಲ್ಲುನಲ್ಲಿ ಲಕ್ಷ್ಮೀ ನರಸಿಂಹನ ದೇವಾಲಯವಿದೆ.

ಸ್ಥಳ: ಹಳೇ ನಿಜಗಲ್ಲು

ಹೆಸರು: ಲಕ್ಷ್ಮೀ ನರಸಿಂಹ ದೇವಾಲಯ

ಜಾಗ: ಊರಿನ ಹೊರಗಡೆ

ದಿಕ್ಕು: ಪೂರ್ವಾಭಿಮುಖವಾಗಿ

ಪಂಥ: ವೈಷ್ಣವ

ಕ್ರಿ.ಶ. ೧೭೦೫ ರ ಮೈಸೂರಿನ ದಳವಾಯಿಗಳ ಆಡಳಿತದ ಸಮಯದಲ್ಲಿ ದಳವಾಯಿ ದಾಸರಾಚಯ್ಯನು ಈ ದುರ್ಗದ ಮೇಲೆ ಲಕ್ಷ್ಮೀನರಸಿಂಹ ದೇವಾಲಯವನ್ನು ಕಟ್ಟಿಸಿದನು. ಕೆಲವು ದಿನಗಳ ನಂತರ ಈ ದೇವಾಲಯ ಹಾಳಾದ ಮೇಲೆ ಅದೇ ಮಾದರಿಯಲ್ಲಿ ಊರಿನ ಬಳಿ ನಿರ್ಮಾಣವಾಯಿತು.

ಗಂಗರು ವೈಷ್ಣವ ಪಂಥಕ್ಕೆ ಸೇರಿದವರಾಗಿದ್ದು ಆರಂಭದ ಗಂಗರ ದೊರೆಗಳೆಲ್ಲಾ ವೈಷ್ಣವರಾಗಿದ್ದರು. ಮೊದಲನೇ ಮಾಧವ ತನ್ನನ್ನು ಗೋಬ್ರಾಹ್ಮಣ ರಕ್ಷಕನೆಂದು ಕರೆದುಕೊಂಡಿದ್ದಾನೆ. ವಿಷ್ಣುಗೋಪ ಅವನೀತ ವೈಷ್ಣವರಾಗಿದ್ದಾರೆ. ಮಣ್ಣೆಯಲ್ಲಿ ಇತ್ತೀಚಿಗೆ ಗರುಡ ಶಿಲ್ಪ ದೊರಕಿದೆ. ವಿಷ್ಣುವಿನ ದೇವಾಲಯದ ದೇವರ ಎದುರಿಗೆ ಗರುಡ ಮೂರ್ತಿ ಇರುವುದು ವಾಡಿಕೆ. ಮಣ್ಣೆಯಲ್ಲಿರುವ ಗರುಡಮೂರ್ತಿ ನಾಲ್ಕೂವರೆ ಅಡಿ ಎತ್ತರವಿದೆ.[೧೬] ಈ ಗರುಡ ಮೂರ್ತಿಯೂ ಮಣ್ಣೆಯಲ್ಲಿ ದೊರಕಿರುವುದರಿಂದ ವಿಷ್ಣುವಿನ ಆರಾಧನಾ ಕೇಂದ್ರವೂ ಇತ್ತು ಎಂಬುದು ಸ್ಪಷ್ಟವಾಗುತ್ತದೆ. ಈ ಮೂರ್ತಿ ದೊರೆಯದೇ ಇದ್ದಾಗ ವೈಷ್ಣವ ಪಂಥದ ಪ್ರಭಾವವಿತ್ತು ಎಂಬುದು ತಿಳಿಯುತ್ತಿರಲಿಲ್ಲ.

ದೇವರ ಹೊಸಹಳ್ಳಿಯಲ್ಲಿ ಆಂಜನೇಯ ಮೂರ್ತಿಯನ್ನು ನೋಡಬಹುದು. ಕಂಬಗಳ ಮೇಲೆ ಮೂರ್ತಿಗಳಿದ್ದು, ವೈಷ್ಣವ ದೇವಾಲಯವಾಗಿದೆ. ಮಹಿಮಾಪುರದಲ್ಲಿ ಮಹಿಮೆರಂಗನ ಬೆಟ್ಟದಲ್ಲಿ ರಂಗನಾಥನ ದೇವಾಲಯವಿದೆ. ಇದು ವೈಷ್ಣವ ಪಂಥದ ಪ್ರಭಾವವನ್ನು ಪಡೆದಿದೆ. ವಿಶಾಲವಾದ ನವರಂಗ ಮತ್ತು ಚೌಕಾಕಾರದ ಗರ್ಭಗೃಹ ಹೊಂದಿದ್ದು, ಇಟ್ಟಿಗೆ, ಗಾರೆಯಿಂದ ನಿರ್ಮಿತವಾಗಿದೆ. ಇಲ್ಲಿ ಗರುಡ ಮೂರ್ತಿಯೂ ಇದ್ದು, ರಂಗನಾಥನ ಮೂರ್ತಿಯ ಎದುರಿಗೆ ಗರುಡ ಕಂಬವಿದೆ. ಇದು ವೈಷ್ಣವ ದೇವಾಲಯಕ್ಕೆ ಸಾಕ್ಷಿಯಾಗಿದೆ. ಈ ದೇವಾಲಯ ಪಶ್ಚಿಮಕ್ಕೆ ಇರುವ ಆಲದಹಳ್ಳಿ ರಂಗನಾಥ ದೇವಾಲಯವು ವೈಷ್ಣವ ದೇವಾಲಯವಾಗಿದೆ.

**೪.೩.೪. ಶೈವ ದೇವಾಲಯಗಳು**

ಶೈವಪಂಥಕ್ಕೆ ಶಿವನೇ ಸಾಕಾರ ಮೂರ್ತಿ. ನೆಲಮಂಗಲದಲ್ಲಿ ಹೆಚ್ಚಾಗಿ ಶೈವರು ನೆಲೆಸಿದ್ದಾರೆ. ನೆಲಮಂಗಲ ಶಿವಗಂಗೆ ಮಣ್ಣೆಯ ದೇವಾಲಯಗಳು ಶೈವ ಧರ್ಮದ ಪ್ರತೀಕಗಳಾಗಿ ನಿಂತಿವೆ. ಶೈವ ದೇವಾಲಯಗಳಲ್ಲಿ ಶಿವಗಂಗೆ ವಿಶೇಷ ಸ್ಥಾನ ಪಡೆದಿದೆ.

೧. ಸ್ಥಳ: ಶಿವಗಂಗೆ
ಹೆಸರು: ಗಂಗಾಧರೇಶ್ವರ ದೇವಾಲಯ
ಜಾಗ: ಶಿವಗಂಗೆ ಬೆಟ್ಟದ ತಪ್ಪಲಿನಲ್ಲಿ
ದಿಕ್ಕು: ಪೂರ್ವಾಭಿಮುಖವಾಗಿ
ಪಂಥ: ಶೈವ

ಗಂಗಾಧರೇಶ್ವರನು ಶೈವ ಜನರ ಆರಾಧನಾ ದೈವನಾಗಿದ್ದಾನೆ. ಶಿವ ಶ್ರೀಶೈಲದಿಂದ ಗಂಗೆ-ಗೌರಿಯೊಡನೆ ಲಿಂಗಸ್ವರೂಪಿಯಾಗಿ ಕಕುದ್ಗಿರಿಯ ಗವಿಯಲ್ಲಿ ವಾಸಿಸುವೆ ಎಂದು ಋಷಿಗಳಿಗೆ ಹೇಳಿ ಬಂದನು ಎಂದು ಸ್ಥಳಪುರಾಣವಿದೆ. ಶಿವನು ಶಿವಲಿಂಗಾಕಾರವಾಗಿ ನೆಲೆಸಿದ್ದಾನೆ. ಶಿವಲಿಂಗದ ಮೇಲೆ ತುಪ್ಪದ ಅಭಿಷೇಕ ಮಾಡಿದರೆ ಬೆಣ್ಣೆಯಾಗುತ್ತದೆ. ಶಾಸನಗಳಲ್ಲಿ 'ಅಮೃತಲಿಂಗ ಗಂಗಾಧರ' ಎಂದು ಕರೆಯಿಸಿಕೊಂಡಿರುತ್ತಾನೆ. ಪ್ರತಿವರ್ಷವೂ ಇಲ್ಲಿ ಮಕರ ಸಂಕ್ರಾಂತಿಯಂದು ಜಾತ್ರೆ, ಉತ್ಸವಗಳು ನಡೆಯುತ್ತವೆ. ಸಾವಿರಾರು ಜನರು ಸಾಂಸ್ಕೃತಿಕವಾಗಿ ಒಂದುಗೂಡುತ್ತಾರೆ.

೨. ಶಿವಗಂಗೆಯ ಹೊನ್ನಾದೇವಿಯ ದೇವಾಲಯ ಶಕ್ತಿ ದೇವತೆಯ ರೂಪದಲ್ಲಿ ನೆಲೆಗೊಂಡಿರುವ ಶೈವ ದೇವಾಲಯವಾಗಿದೆ. ಅಲ್ಲದೇ ಶಾಕ್ತ ಪಂಥದ ಪ್ರತೀಕವೂ ಆಗಿದೆ.

ಸ್ಥಳ: ಶಿವಗಂಗೆ

ಹೆಸರು: ಹೊನ್ನಾದೇವಿ ದೇವಾಲಯ

ಜಾಗ: ಶಿವಗಂಗೆ ಬೆಟ್ಟದ ಕೆಳಭಾಗದಲ್ಲಿ

ದಿಕ್ಕು: ಪೂರ್ವಾಭಿಮುಖವಾಗಿ

ಪಂಥ: ಶೈವ (ಶಾಕ್ತ ಪಂಥ)

ಹೊಯ್ಸಳರ ಕಾಲಕ್ಕೆ ಮುಂಚೆಯೇ ಅತ್ಯಂತ ಪ್ರಾಚೀನವಾದ ದೇವಿಯ ನೆಲೆಬೀಡು ಈ ದೇವಾಲಯವಾಗಿದೆ. 'ಗಿರಿಜಾಕಲ್ಯಾಣ'ದ ನಂತರ ಹೊನ್ನಾಂಬಿಕೆ (ಸ್ವರ್ಣಾಂಬಿಕೆ) ಎಂದು ಹೆಸರು ಪಡೆದಿದ್ದಾಳೆ. ಈ ದೇವಿ ಶಕ್ತಿ ಸರಸ್ವತಿ, ಲಕ್ಷ್ಮಿಯ ಪ್ರತಿರೂಪ. ಈ ದೇವಿಯ ಹಿಂಭಾಗದಲ್ಲಿ ಶ್ರೀಚಕ್ರವಿದ್ದು, ಶಕ್ತಿಯ ಅವತಾರ ಹೊಂದಿದ್ದಾಳೆ. ಆಯುಧಪಾಣಿಯಾಗಿ ಖಡ್ಗ, ಗುರಾಣಿ, ಗಂಟೆ, ಶಂಖ, ತ್ರಿಶೂಲಗಳು ಹಸ್ತದಲ್ಲಿವೆ. ಒಳಗೆ ಬರಲು ಹೆದರುತ್ತಿದ್ದರು. ಅನಂತರ ಜಗದ್ಗುರು ಮರುಳಸಿದ್ಧರು ಶಾಂತಳಾಗುವಂತೆ ಅನುಗ್ರಹಿಸಿದರು ಎಂಬ ಪ್ರತೀತಿಯಿದ್ದು, ಆನಂತರ ಹೊನ್ನಮ್ಮ ಗವಿಮಠದಲ್ಲಿ ಶಿವಲಿಂಗ, ಗಜಲಕ್ಷ್ಮಿಯಂತೆ ಆಸೀನಳಾದಳು. ಪ್ರತಿವರ್ಷವು ಮಕರ ಸಂಕ್ರಾಂತಿಯಂದು ಗಿರಿಜಾಕಲ್ಯಾಣ ನಡೆಯುತ್ತದೆ. ಇದನ್ನು ಜನರು ಆಡುಭಾಷೆಯಲ್ಲಿ ಗಂಗಪ್ಪನ ಧಾರೆ ಎನ್ನುತ್ತಾರೆ.

೩. ನೆಲಮಂಗದಲ್ಲಿ ಶೈವ ಧರ್ಮ ತನ್ನ ಪ್ರಭಾವವನ್ನು ಬೀರಿದ್ದು, ಹೆಚ್ಚಾಗಿ ಶೈವ ದೇವಾಲಯಗಳು ನಿರ್ಮಾಣವಾಗಿವೆ.

ಸ್ಥಳ: ನೆಲಮಂಗಲ

ಹೆಸರು: ಕಾಶೀ ವಿಶ್ವೇಶ್ವರ ದೇವಾಲಯ

ಜಾಗ: ಪೂರ್ವಾಭಿಮುಖವಾಗಿ

ಪಂಥ: ಶೈವ

ಈ ದೇವಾಲಯವನ್ನು ಕಟ್ಟಿಸಿದವನು ಬಾಗೇನಹಳ್ಳಿ ಅಪ್ಪಯ್ಯನ ಪುತ್ರ ತಿಪ್ಪಯ್ಯ. ಬಾಗೇನಹಳ್ಳಿ ಈಗಿನ ಬಾಗೇಪಲ್ಲಿ ಆಗಿದೆ. ಬಾಗೇಪಲ್ಲಿಯಲ್ಲಿ ಹೆಚ್ಚಾಗಿ ವೈಶ್ಯ ಜನಾಂಗದವರೇ ಅಧಿಕವಾಗಿಯೇ ನೆಲೆಸಿದ್ದಾರೆ. ಈ ಜನಾಂಗ ನೆಲಮಂಗಲದಲ್ಲಿ ವ್ಯಾಪಾರದ ಸಂಪರ್ಕ ಹೊಂದಿದ್ದು, ಈ ಜನಾಂಗದ ಭಕ್ತರನ್ನು ಇಲ್ಲಿನ ದೇವಾಲಯ ಹೊಂದಿದೆ. ಈ ದೇವಾಲಯದಲ್ಲಿ ನಿತ್ಯ ಪೂಜೆ ನಡೆಯುತ್ತದೆ. ಶೈವ ಜನಾಂಗದವರು ತಮ್ಮ ಕುಲದೇವರಾಗಿ ಸ್ವೀಕರಿಸಿದ್ದಾರೆ.

೪. ನೆಲಮಂಗಲದ ಭಿನ್ನಮಂಗಲದ ಬಳಿ ಇರುವ ಮುಕ್ತಿನಾಥೇಶ್ವರ ದೇವಾಲಯದಲ್ಲಿ ಶೈವಪಂಥದ ಪ್ರಭಾವವನ್ನು ಕಾಣಬಹುದಾಗಿದೆ. ಆದರೂ ವೈಷ್ಣವ ಧರ್ಮದ ಚಿಹ್ನೆಗಳು ಮಿಳಿತವಾಗಿವೆ.

ಸ್ಥಳ: ಭಿನ್ನಮಂಗಲ

ಹೆಸರು: ಮುಕ್ತಿನಾಥೇಶ್ವರ ದೇವಾಲಯ

ಜಾಗ: ಕೆರೆಯ ಹಿಂಭಾಗ

ದಿಕ್ಕು: ಪೂರ್ವಾಭಿಮುಖವಾಗಿ

ಪಂಥ: ಶೈವ

ಇಲ್ಲಿ ಶೈವ ದೇವಾಲಯವಿದ್ದರೂ, ವೈಷ್ಣವದ ಕುರುಹುಗಳನ್ನು ಕಾಣಬಹುದು. ವೈಷ್ಣವದ ಲಾಂಛನ ಸೂರ್ಯನ ಚಿಹ್ನೆಗಳಿವೆ. ನಟರಾಜ ಮೂರ್ತಿಯೂ ಇದೆ. ಶಿವನಿಗೆ ಮೂರು ನೇತ್ರ ಇರುವ ರೀತಿ ವೆಂಕಟೇಶ್ವರ

ಮೂರ್ತಿಗೆ ಇದೆ. ವಿಷ್ಣು, ಶಿವನ ಲಕ್ಷಣವನ್ನು ಹೋಲಿದ್ದು, ಹಣೆಯಲ್ಲಿ ಮೂರನೆಯ ಕಣ್ಣು ಇದೆ. ಚನ್ನಕೇಶವ, ಭೈರವಮೂರ್ತಿ, ಗೋಪಾಲ, ಶಕ್ತಿದೇವತೆಗಳಾದ ಮಹಿಷಾಸುರಮರ್ಧಿನಿ, ಕಾಳಿ, ಲಕ್ಷ್ಮಿ ಪಾರ್ವತಿ ಮೂರ್ತಿಗಳನ್ನು ಕಾಣಬಹುದು. 'ಮುಕ್ತಿನಾಥೇಶ್ವರ ದೇವಾಲಯ' ನೆಲಮಂಗಲದ ಹರಿ-ಹರ ಸಮನ್ವಯದ ಮಹತ್ವದ ದೇವಾಲಯವೆಂದೂ ಹೇಳಬಹುದು. ಇಲ್ಲಿ ನಿತ್ಯ ಪೂಜೆ ನಡೆಯುತ್ತದೆ. ಅನೇಕ ಭಕ್ತರನ್ನು ಕೂಡ ಹೊಂದಿದೆ.

೫. ಮಣ್ಣೆಯು ಶೈವ ಧರ್ಮದ ಪ್ರಭಾವ ಹೊಂದಿದ್ದು, ಅನೇಕ ಶೈವ ದೇವಾಲಯಗಳನ್ನು ಇಲ್ಲಿ ಗುರುತಿಸಬಹುದು.

ಸ್ಥಳ: ಮಣ್ಣೆ (ಮಾನ್ಯಪುರ)

ಹೆಸರು: ಸೋಮೇಶ್ವರ ದೇವಾಲಯ

ಜಾಗ: ಊರಿ ಹೊರಗಡೆ

ದಿಕ್ಕು: ಪೂರ್ವಾಭಿಮುಖವಾಗಿ

ಪಂಥ: ಶೈವ

ಈ ಸೋಮೇಶ್ವರ ದೇವಾಲಯವು ಮಣ್ಣೆಯ ಶೈವ ಧರ್ಮದ ಕುರುಹು ಆಗಿ ಉಳಿದಿರುವ ದೇವಾಲಯವಾಗಿದೆ. ಈ ದೇವಾಲಯದಲ್ಲಿ ಕೃಷ್ಣಶಿಲೆಯ ಭವ್ಯವಾದ ಲಿಂಗವೊಂದಿದೆ.[೧೪] ಮಹಾಶಿವರಾತ್ರಿಯಂದು ಈ ಧರ್ಮದ ಜನರು ನೆರೆಹೊರೆಯ ಭಕ್ತಾದಿಗಳು ಕೂಡಿಕೊಂಡು ಜಾಗರಣೆ ಮಾಡುತ್ತಾರೆ. ಅಲ್ಲದೇ ಈ ದೇವರನ್ನು ಮನೆ ದೇವರಾಗಿ ಒಪ್ಪಿಕೊಂಡು ಪೂಜೆಗಳನ್ನು ಸಲ್ಲಿಸುತ್ತಾ ಬಂದಿದ್ದಾರೆ.

೬. ಮಣ್ಣೆಯಲ್ಲಿರುವ ಕಪಿಲೇಶ್ವರ ದೇವಾಲಯವೂ ಕೂಡ ಶೈವ ಪಂಥದ ದೇವಾಲಯವಾಗಿದೆ.

ಸ್ಥಳ: ಮಣ್ಣೆ

ಹೆಸರು: ಕಪಿಲೇಶ್ವರ ದೇವಾಲಯ

ಜಾಗ: ಚಿಕ್ಕೆರೆಯ ಏರಿಯ ಪ್ರಾರಂಭದಲ್ಲಿ

ಪಂಥ: ಶೈವ

ಈ ದೇವಾಲಯ ಎತ್ತರವಾಗಿದ್ದು, ಗರ್ಭಗೃಹ ಹಾಳಾಗಿದೆ. ನವರಂಗ ಮಾತ್ರ ಉಳಿದಿದೆ. ಶಿಥಿಲವಾಗುತ್ತಿರುವ ದೇವಾಲಯವಾಗಿದ್ದು, ಇಂದು ದೇವಾಲಯಗಳು ಕಾಲಕ್ಕೆ ತಕ್ಕಂತೆ ಸಂಸ್ಕೃತಿ ವಾಣಿಜ್ಯೀಕರಣವಾಗುತ್ತಿದೆ ಎನ್ನುವ ಉದಾಹರಣೆಗೆ ಸಾಕ್ಷಿಯಾಗಿದೆ.

೭. ತ್ಯಾಮಗೊಂಡ್ಲುವಿನಲ್ಲಿಯೂ ಶೈವ ದೇವಾಲಯಗಳಿದ್ದು, ಶೈವ ಧರ್ಮದ ಪ್ರತೀಕಗಳಾಗಿ ಗುರುತಿಸಿಕೊಂಡಿದೆ.

ಸ್ಥಳ: ತ್ಯಾಮಗೊಂಡ್ಲು

ಹೆಸರು: ಕಾಶೀ ವಿಶ್ವನಾಥ ದೇವಾಲಯ

ಜಾಗ: ಗಾಂಧಿ ಚೌಕದಿಂದ ವೈಶ್ಯರ ಬೀದಿ ಎಡಭಾಗ

ದಿಕ್ಕು: ಪೂರ್ವಾಭಿಮುಖ

ಪಂಥ: ಶೈವ

ಕಾಶಿ ನರಸಿಂಹಭಟ್ಟರು ವಾರಣಾಸಿಯಿಂದ ಲಿಂಗವನ್ನು ತಂದು ಇಲ್ಲಿ ಪ್ರತಿಷ್ಠಾಪಿಸಿದ್ದಾರೆ. ಎದುರಿಗೆ ಸುಂದರವಾದ ಕಲ್ಯಾಣಿ ಇದೆ. ಪ್ರತಿವರ್ಷವೂ ಇಲ್ಲಿನ ಶೈವ ಜನಾಂಗದವರು ಜಾತ್ರೆ ಉತ್ಸವಗಳನ್ನು ನಡೆಸುತ್ತಾರೆ. ಸುತ್ತಮುತ್ತಲಿನ ಜನರು ತಮ್ಮ ಕುಲದೇವರಾಗಿ ಸ್ವೀಕರಿಸಿ ನಿತ್ಯ ಪೂಜೆ ಸಲ್ಲಿಸುತ್ತಾ ಬಂದಿದ್ದಾರೆ.

೪.೩.೫. ವೀರಶೈವ ದೇವಾಲಯಗಳು

ಶೈವ ಪಂಥವು ಬಸವಣ್ಣನವರಿಂದ ಹೊಸ ರೂಪ ಪಡೆದು ವೀರಶೈವ ಪಂಥವಾಯಿತು. ಶೈವ ಪಂಥದ ಎಲ್ಲಾ ಪರಂಪರೆಯನ್ನು ಅಳವಡಿಸಿಕೊಂಡಿದೆ. ನೆಲಮಂಗಲದಲ್ಲಿ ಶೈವ ಪಂಥವಿರುವಂತೆ ವೀರಶೈವ ಪಂಥವು ನೆಲೆಗೊಂಡಿದೆ. ಅಲ್ಲದೇ ವೀರಶೈವ ದೇವಾಲಯಗಳು ನಿರ್ಮಾಣವಾಗಿವೆ.

೧. ಸ್ಥಳ: ನೆಲಮಂಗಲ

ಹೆಸರು: ರುದ್ರೇಶ್ವರ ದೇವಾಲಯ

ಜಾಗ: ಪೇಟೆ ಬೀದಿ

ದಿಕ್ಕು: ಉತ್ತರಾಭಿಮುಖ

ಪಂಥ: ವೀರಶೈವ

ಈ ದೇವಾಲಯಕ್ಕೆ ಗದಿಗೆ ಗವಿಸಿದ್ದಪ್ಪ ಭೂಮಿಯನ್ನು ದಾನ ಕೊಡಲಾಗಿದೆ. ಆಗಮೋಕ್ತ ನಿತ್ಯ ಮಹಾ ರುದ್ರಾಭಿಷೇಕ, ನಿತ್ಯಾರ್ಚನೆ ನಡೆಯುತ್ತದೆ. ಗುಗ್ಗಳ ಸೇವೆ ಇಲ್ಲಿನ ವಿಶೇಷವಾಗಿದ್ದು, ಶಿವರಾತ್ರಿ ನಂತರ ರಥೋತ್ಸವ ನಡೆಯುತ್ತದೆ. ಕಾರ್ತಿಕ ಮಾಸದಲ್ಲಿ ಸಂಜೆ ಪೂಜೆ, ಅಲ್ಲದೇ ೧೧ ದಿನಗಳು ಗೌರಿ ಸ್ಥಾಪನೆ ಮಾಡುವುದರೊಂದಿಗೆ ಜನರನ್ನು ಸಾಂಸ್ಕೃತಿಕವಾಗಿ ಒಂದುಗೂಡಿಸುವುದು ಇಲ್ಲಿನ ವಿಶೇಷವಾಗಿದೆ.

೨. ನೆಲಮಂಗಲದಲ್ಲಿನ ಕವಾಡಿ ಮಠವು ವೀರಶೈವರ ಮಠವಾಗಿದ್ದು ಇಲ್ಲಿ ವೀರಶೈವ ದೇವಾಲಯದ ನಿರ್ಮಾಣ ಮಾಡಲಾಗಿದೆ.

ಸ್ಥಳ: ನೆಲಮಂಗಲ

ಹೆಸರು: ರುದ್ರೇಶ್ವರ ದೇವಾಲಯ

ಜಾಗ: ಕವಾಡಿ ಮಠ

ದಿಕ್ಕು: ಉತ್ತರಾಭಿಮುಖವಾಗಿ

ಪಂಥ: ವೀರಶೈವ

ಈ ದೇವಾಲಯದಲ್ಲಿ ನಿತ್ಯ ಪೂಜೆ ನಡೆಯುತ್ತದೆ. ಮಠವು ನಡೆಸುವ ಎಲ್ಲಾ ಉತ್ಸವಗಳು ಇಲ್ಲಿಯೇ ಪ್ರಾರಂಭಗೊಳ್ಳುತ್ತವೆ. ಪ್ರತಿವರ್ಷವೂ ಇಲ್ಲಿ ಯುಗಾದಿ ಹಬ್ಬ ಆದ ಎರಡನೇ ಮಂಗಳವಾರ ಜಾತ್ರೆ, ಉತ್ಸವ ನಡೆಯುತ್ತದೆ.

೩. ವೀರಭದ್ರ ಮೂರ್ತಿಯ ಮೂಲಕ ಶಿವಗಂಗೆಯಲ್ಲಿ ವೀರಶೈವದ ದೇವಾಲಯಗಳು ನೆಲೆಗೊಂಡಿದ್ದರ ಬಗ್ಗೆ ತಿಳಿಯುವುದು

ಸ್ಥಳ: ಶಿವಗಂಗೆ

ಹೆಸರು: ವೀರಭದ್ರ ದೇವಾಲಯ

ಜಾಗ: ಶಿವಗಂಗೆ ಬೆಟ್ಟದ ಕೆಳಭಾಗದಲ್ಲಿ

ದಿಕ್ಕು: ಉತ್ತಾರಾಭಿಮುಖವಾಗಿ

ಪಂಥ: ವೀರಶೈವ

ಶಿವಗಂಗೆ ಬೆಟ್ಟದ ಕೆಳಭಾಗದಲ್ಲಿನ ಗಂಗಾಧರೇಶ್ವರ ಪ್ರಸಾದ ಮನೆಯ ಮುಂದೆ ವೀರಭದ್ರನ ದೇವಾಲಯವಿದೆ. ಪ್ರಸಾದ ಮನೆಯ ಮುಂದೆ ವೀರಭದ್ರನ ದೇವಾಲಯವಿದೆ. ಪ್ರಸಾದ ಮನೆಯ ಗಂಜಿ ಹರಿದು

ಬರುತ್ತಿದ್ದರಿಂದ ಗಂಜಿ ವೀರಭದ್ರನೆಂದು ಕರೆಯುವುದು ವಾಡಿಕೆ. ಶಿವಗಂಗೆಯಲ್ಲಿ ಅನೇಕ ವೀರಭದ್ರ ಮೂರ್ತಿಗಳಿದ್ದು ಒಂದೊಂದು ಹೆಸರಿನಿಂದ ಕರೆಯುತ್ತಾರೆ. ಕೆಂಪೇಗೌಡನ ಹಜಾರದ ಬಳಿ ವೀರಭದ್ರನ ವಿಗ್ರಹವಿದೆ. ಇದನ್ನು ಖಜಾನೆ ವೀರಭದ್ರ ಎಂದು ಕರೆಯುತ್ತಾರೆ. ಪಾತಾಳ ಗಂಗೆಯ ಹತ್ತಿರ ವೀರಭದ್ರನ ಮೂರ್ತಿ ಇದೆ. ಇದನ್ನು ಸಂಕೋಲೆ ವೀರಭದ್ರ ಎನ್ನುತ್ತಾರೆ. ಗಿರಿಶಿಖರ ಏರಿದರೆ ಕೋಡಗಲ್ ಬಸವನ ವಿಗ್ರಹವಿದೆ. ಈ ವಿಗ್ರಹವು ವೀರಶೈವದ ಚಿಹ್ನೆಯಾಗಿದೆ.[೧೫] ಗಿರಿಶಿಖರದ ಮೇಲ್ಭಾಗದಲ್ಲಿ ವೀರಭದ್ರನ ವಿಗ್ರಹವಿದ್ದು, ಹಾಗೆಯೇ ಮಹಾದ್ವಾರದ ಹತ್ತಿರ ವೀರಭದ್ರ ವಿಗ್ರಹವಿದೆ. ಇದನ್ನು ಮಹಾದ್ವಾರದ ವೀರಭದ್ರ ಎನ್ನುವುದು ವಾಡಿಕೆ. ಪಡಿಕಲ್ ವೀರಭದ್ರ ಮುಂತಾದ ಅನೇಕ ವೀರಭದ್ರರ ವಿಗ್ರಹಗಳು ಈ ಕ್ಷೇತ್ರದಲ್ಲಿವೆ. ವೀರಶೈವರ ಸುಕ್ಷೇತ್ರ ಎನ್ನುವುದಕ್ಕೆ ಇವೆಲ್ಲ ಸಾಕ್ಷಿಯಾಗಿವೆ. ಶಿವಗಂಗೆಯಲ್ಲಿ ವೀರಭದ್ರನ ಮೂರ್ತಿಗಳು ಹೆಚ್ಚಾಗಿ ಕಂಡುಬರುವುದರಿಂದ ಶಿವಗಂಗಾವನ್ನು 'ಮಹಾವೀರಭದ್ರ ಕ್ಷೇತ್ರ' ಎಂದು ಎಂ. ಜಿ. ನಾಗರಾಜು ಅವರು ಅಭಿಪ್ರಾಯ ಪಡುತ್ತಾರೆ.

೪. ನಿಜಗಲ್ಲು ಹಿಂದೂ-ಮುಸ್ಲಿಂರ ಧರ್ಮಗಳೆರಡರ ದೇವಾಲಯಗಳನ್ನು ಹೊಂದಿದೆ. ನಿಜಗಲ್ಲು ರಾಜಾ ಮತ್ತು ನೆಲಮಂಗಲದ ರಾಣಿ ನೀಲಾವತಿ ಇವರುಗಳ ಸಂಗಮದಿಂದ ನಿಜಗಲ್ಲು ಹಿಂದೂ-ಮುಸ್ಲಿಂರ ಸಾಮರಸ್ಯದ ಸ್ಥಳಗಳಾಗಿವೆ. ಇಲ್ಲಿ ವೀರಶೈವ ಪಂಥದ ಅನೇಕ ದೇವಾಯಗಳು ನೆಲೆಗೊಂಡಿವೆ. ವೀರಶೈವ ಕ್ಷೇತ್ರವಾಗಿ ಪ್ರಸಿದ್ಧಿಯನ್ನು ಪಡೆದಿದೆ.

ಸ್ಥಳ: ನಿಜಗಲ್ಲು ಬೆಟ್ಟ

ಹೆಸರು: ಉದ್ಧಾನ ವೀರಭದ್ರ

ಜಾಗ: ಬೆಟ್ಟದ ಮೇಲ್ಭಾಗದಲ್ಲಿನ ಪಶ್ಚಿಮಕ್ಕೆ ಇದೆ.

ದಿಕ್ಕು: ಪೂರ್ವಾಭಿಮುಖವಾಗಿ

ಪಂಥ: ವೀರಶೈವ

ಈ ಮೇಲಿನ ದೇವಾಲಯದಲ್ಲಿ ವೀರಶೈವ ಕುಲದೇವರಾದ ಉದ್ಧಾನ ವೀರಭದ್ರನು ನೆಲೆಸಿದ್ದಾನೆ. ೧೨ ಅಡಿ ಎತ್ತರ ಹೊಂದಿರುವ ವೀರಭದ್ರ ಆಗಿರುವುದರಿಂದ ಉದ್ಧಾನ ವೀರಭದ್ರ ಎಂದು ಉಲ್ಲೇಖಿತವಾಗಿದೆ. ಇಲ್ಲಿ ಯುಗಾದಿಯ ನಂತರ ಜಾತ್ರೆ ಉತ್ಸವಗಳು ನಡೆಯುತ್ತವೆ. ಇದು ನಿಜಗಲ್ಲು ರಾಣಿಯ ಆರಾಧನಾ ದೈವವಾಗಿತ್ತು. ಇಲ್ಲಿ ಸೈಯ್ಯದ್ ಬಾದ್‌ಷಾ ಮತ್ತು ಷಾ ಕರೀಂರವರ ದರ್ಗಾಗಳಿವೆ.[೧೬] ನಿಜಗಲ್ಲು ಮುಸ್ಲಿಂ ನೆಲೆಬೀಡಾಗಿದೆ ಎಂಬುದನ್ನು ತಿಳಿಯಬಹುದು.

೫. ದೇವರ ಹೊಸಹಳ್ಳಿಯಲ್ಲಿನ ದೇವಾಲಯಗಳು ವೈಷ್ಣವ ಮತ್ತು ವೀರಶೈವ ಪಂಥಕ್ಕೆ ಸೇರಿದ್ದು, ವೀರಶೈವರ ಆರಾಧನಾ ದೈವ ವೀರಭದ್ರನು ಹೆಚ್ಚು ಪ್ರಸಿದ್ಧಿ ಪಡೆದಿದ್ದಾನೆ.

ಸ್ಥಳ: ದೇವರ ಹೊಸಹಳ್ಳಿ

ಹೆಸರು: ವೀರಭದ್ರ

ಜಾಗ: ಬೆಟ್ಟದ ಮೇಲ್ಭಾಗದಲ್ಲಿ

ದಿಕ್ಕು: ಪಶ್ಚಿಮಾಭಿಮುಖವಾಗಿ

ಪಂಥ: ವೀರಶೈವ

ಇಲ್ಲಿ ವೀರಭದ್ರನ ಉತ್ಸವ ಮೂರ್ತಿಯೂ ಇದೆ. ಉತ್ಸವಕ್ಕಾಗಿ ಸಂಚಾರಕ್ಕೆ ಹೋಗುತ್ತದೆ. ಪ್ರತಿವರ್ಷವು ಜಾತ್ರೆ ಉತ್ಸವಗಳು ನಡೆಯುತ್ತವೆ. ಇಲ್ಲಿ ಆಂಜನೇಯ ಮತ್ತು ವೀರಭದ್ರನ ಭಕ್ತಾದಿಗಳ ಸಂಘರ್ಷ ನಡೆದಿತ್ತು ಎಂಬುದರ ಚಿಹ್ನೆಗಳಿವೆ.

### ೪.೩.೬. ನಾಥಪಂಥದ ದೇವಾಲಯಗಳು

ಶಿವಗಂಗೆಯ ನಾಥಪಂಥದ ಪ್ರಭಾವವನ್ನು ಹೊಂದಿದ್ದು, ಇಲ್ಲಿ ನಾಥಪಂಥದ ದೇವಾಲಯಗಳನ್ನು ಕಾಣಬಹುದು. ಶಿವಗಂಗೆಯ ಪ್ರಧಾನ ದೇವರಾದ ಶ್ರೀ ಗಂಗಾಧರೇಶ್ವರ ಸ್ವಾಮಿಯನ್ನು ಸಿವಗಂಗೆನಾಥೆ, ಗಂಗನಾಥ, ಗಂಗಿನಾಥ ಎಂಬ ಹೆಸರುಗಳಿಂದ ಕರೆದಿದ್ದು ಇವು ನಾಥಪಂಥದ ಉಲ್ಲೇಖಗಳಾಗಿವೆ. ಕ್ರಿ.ಶ. ೧೩೪೯ ರ ನೆಲಮಂಗಲದ ಶಾಸನದಲ್ಲಿ ಗಂಗಾಧರೇಶ್ವರನನ್ನು 'ಸಿವಗಂಗಿ ನಾಥ ದೇವರ ಗಿರಿ' ಎಂದು ಉಲ್ಲೇಖಿಸಿದ್ದು ನಾಥಪಂಥದ ಪ್ರತೀಕವಾಗಿದೆ.

ಸ್ಥಳ: ಶಿವಂಗಗೆ

ಹೆಸರು: ಸಿಗಂಗೆನಾಥ

ಜಾಗ: ಶಿವಗಂಗೆ ಬೆಟ್ಟದ ತಪ್ಪಲಿನಲ್ಲಿ

ದಿಕ್ಕು: ಪೂರ್ವಾಭಿಮುಖವಾಗಿ

ಪಂಥ: ನಾಥಪಂಥ

ಈ ದೇವಾಲಯವು ಶೈವ ಪಂಥಕ್ಕೆ ಸೇರಿದ ದೇವಾಲಯವಾಗಿದ್ದು ಶೈವ ಪಂಥದ ಮುಂದುವರಿಕೆಯಾಗಿ ನಾಥಪಂಥದ ದೇವಾಲಯವಾಗಿರುವುದನ್ನು ಗಮನಿಸಬಹುದು.[೭] ಅಲ್ಲದೇ ಇಲ್ಲಿನ ಹೊನ್ನಾದೇವಿಯ ದೇವಾಲಯವು ಶೈವ ಧರ್ಮಕ್ಕೆ ಸೇರಿದ್ದು, ನಾಥಪಂಥ ಮತ್ತು ಶಾಕ್ತ ಪಂಥದ ಸಂಬಂಧ ಹೊಂದಿದೆ. ಈ ದೇವಿಯ ಶಕ್ತಿದೇವತೆಯಾಗಿ ಶಾಕ್ತಪಂಥಕ್ಕೆ ಸೇರಿಕೊಂಡಿವೆ. ಭೈರವ ಮೂರ್ತಿಗಳೂ ನಾಥಪಂಥದ ಕುರುಹುಗಳಾಗಿವೆ. ದೇವರ ಹೊಸಹಳ್ಳಿಯ ಕಂಬಗಳ ಮೇಲೂ ಭೈರವ ಮೂರ್ತಿಗಳಿವೆ. ಪ್ರತಿ ವರ್ಷವೂ ಜಾತ್ರೆ ಉತ್ಸವಗಳು ನಡೆಯುತ್ತವೆ. ಯುಗಾದಿಯಿಂದ ಆರಂಭವಾಗಿ ಶ್ರಾವಣ, ನವರಾತ್ರಿ, ದೀಪಾವಳಿ, ಮೊದಲಾದ ಮಾಸಗಳಲ್ಲಿ ವಿಶೇಷ ಪೂಜೆ ನಡೆಯುತ್ತದೆ.

ದೇವಾಲಯಗಳು ಧರ್ಮದ ಪ್ರತೀಕವಾಗಿದ್ದು, ಸಂಸ್ಕೃತಿಯ ಪ್ರತಿಬಿಂಬವಾಗಿವೆ. ನೆಲಮಂಗಲ ತಾಲ್ಲೂಕಿನ ಪ್ರಾಚೀನತೆಯ ಸಂಸ್ಕೃತಿ ಸಮನ್ವಯವನ್ನು ಅರಿಯಲು ಗುರುತರ ಸಾಕ್ಷಿಯಾಗಿವೆ. ಆಯಾಯ ಧರ್ಮದವರಿಗೆ ಆಯಾಯ ದೇವಾಲಯಗಳು ಪವಿತ್ರವಾದವುಗಳು ಎನಿಸಿವೆ.

**ಅಡಿ ಟಿಪ್ಪಣಿಗಳು:**

೧. ಶಿವಗಂಗಾ ಸಿರಿ, ಸ್ಮರಣ ಸಂಚಿಕೆ, ೨೦೦೦,ಪ್ರಕಾಶಕರು-ಶಿವಗಂಗಾ ಕ್ಷೇತ್ರೋತ್ಸವ ಸಮಿತಿ,ಶಿವಗಂಗೆ, ಪು.೪೮

೨. ಗೋಪಾಲರಾವ್ ಎಚ್.ಎಸ್. (ಸಂ.), ೧೯೯೭, ನೆಲದ ಸಿರಿ,ನೆನಪಿನ ಸಂಚಿಕೆ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು.೫೩

೩. ಶ್ರೀಕ್ಷೇತ್ರ ಮಹಿಮೆ ಒಂದು ಪಕ್ಷಿನೋಟ, ರಂಭಾಪುರಿ ಬೆಳಗು ಪು. ೩

೪. ಶಿವಗಂಗಾ ಸಿರಿ,ಸ್ಮರಣ ಸಂಚಿಕೆ, ೨೦೦೦,ಪ್ರಕಾಶಕರು-ಶಿವಗಂಗಾ ಕ್ಷೇತ್ರೋತ್ಸವ ಸಮಿತಿ, ಶಿವಗಂಗೆ, ಪು.೪೬

೫. ಶ್ರೀಕ್ಷೇತ್ರ ಮಹಿಮೆ ಒಂದು ಪಕ್ಷಿನೋಟ, ರಂಭಾಪುರಿ ಬೆಳಗು ಪು.೬

೬. ಶೇಷಗಿರಿರಾವ್ ಎಲ್.ಎಸ್. (ಸಂ.), ೨೦೦೫, ಬೆಂಗಳೂರು ದರ್ಶನ ಸಂಪುಟ-೧, ಉದಯಭಾನು ಕಲಾ ಸಂಘ, ಬೆಂಗಳೂರು. ಪು.೪೫೫

೭. ಶಿವಗಂಗಾ ಸಿರಿ, ಸ್ಮರಣ ಸಂಚಿಕೆ, ೨೦೦೦, ಪ್ರಕಾಶರು-ಶಿವಗಂಗಾ ಕ್ಷೇತ್ರೋತ್ಸವ ಸಮಿತಿ, ಶಿವಗಂಗೆ, ಪು.೬೫

೮. ಶಿವಗಂಗಾ ಸಿರಿ,ಸ್ಮರಣ ಸಂಚಿಕೆ, ೨೦೦೦, ಪ್ರಕಾಶಕರು-ಶಿವಗಂಗಾ ಕ್ಷೇತ್ರೋತ್ಸವ ಸಮಿತಿ, ಶಿವಗಂಗೆ, ಪು. ೨೯

೯. ಕ್ಷಮಾ ಶಿವಕುಮಾರ್, ೨೦೦೬, ಶಿವಗಂಗಾ (ಕ್ಷೇತ್ರ ದರ್ಶನ), ವಾಗ್ವಿಲಾಸ ಪ್ರಕಾಶನ, ಬೆಂಗಳೂರು. ಪು.೨೯

೧೦. ಗೋಪಾಲರಾವ್ ಎಚ್. ಎಸ್. (ಸಂ.),೧೯೯೭, ನೆಲದ ಸಿರಿ,ಸ್ಮರಣ ಸಂಚಿಕೆ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು. ೫೫

೧೧. ಸೂರ್ಯನಾಥ ಕಾಮತ್, ಕೃಷ್ಣಮೂರ್ತಿ ಪಿ. ವಿ. (ಸಂ.), ೨೦೦೦, ಇತಿಹಾಸ ದರ್ಶನ ಸಂಪುಟ-೧೫, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು ಪು. ೩೭.

೧೨. ಅದೇ., ಪು. ೩೮

೧೩. ಗೋಪಾಲರಾವ್ ಎಚ್.ಎಸ್. (ಸಂ.), ೧೯೯೭, ನೆಲದ ಸಿರಿ, ಸ್ಮರಣ ಸಂಚಿಕೆ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು. ೫೦

೧೪. ಶಿವಗಂಗಾ ಸಿರಿ,ಸ್ಮರಣ ಸಂಚಿಕೆ, ೨೦೦೦, ಪ್ರಕಾಶಕರು-ಶಿವಗಂಗಾ ಕ್ಷೇತ್ರೋತ್ಸವ ಸಮಿತಿ, ಶಿವಗಂಗೆ,ಪು. ೪೭

೧೫. ಮಂಗಳ ಗಂಗ, ಸ್ಮರಣ ಸಂಚಿಕೆ, ೨೦೦೨, ಪ್ರಕಾಶಕರು-ಅಧ್ಯಕ್ಷರು ಮತ್ತು ಪದಾಧಿಕಾರಿಗಳು, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು. ೧೨

೧೬. ಶಿವಗಂಗಾ ಸಿರಿ, ಸ್ಮರಣ ಸಂಚಿಕೆ, ೨೦೦೦, ಪ್ರಕಾಶಕರು-ಶಿವಗಂಗಾ ಕ್ಷೇತ್ರೋತ್ಸವ ಸಮಿತಿ, ಶಿವಗಂಗೆ ಪು. ೭೮

# ಅಧ್ಯಾಯ ಐದು

## ಸಾಂಸ್ಕೃತಿಕ ಇತಿಹಾಸ

೫.೧. ಆಚರಣೆಗಳು

೫.೨. ಕಲೆ ಮತ್ತು ವಾಸ್ತುಶಿಲ್ಪ

೫.೩. ಸಂಗೀತ ಮತ್ತು ನೃತ್ಯಕಲೆ

೫.೪. ಸಾಹಿತ್ಯ ಪರಂಪರೆಗೆ ಕೊಡುಗೆ

೫.೫. ಪ್ರೇಕ್ಷಣೀಯ ಸ್ಥಳಗಳು

೫.೬. ಪ್ರಶಸ್ತಿ-ಪುರಸ್ಕೃತ ಮಹನೀಯರು

**ಯಾ**ವುದೇ ಪ್ರದೇಶ ತನ್ನದೇ ಆದ ವಿಶಿಷ್ಟ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿರುತ್ತದೆ. ಹಾಗೂ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿಯೂ ಕಂಡು ಬರುತ್ತದೆ. ಬೆಂಗಳೂರು ಕೂಗಳತೆಯ ದೂರದಲ್ಲಿದ್ದರೂ ಸಹ ನೆಲಮಂಗಲ ತಾಲ್ಲೂಕು ಅನೇಕ ಸಾಂಸ್ಕೃತಿಕ ವೈಶಿಷ್ಟ್ಯತೆಗಳನ್ನು ಮೈಗೂಡಿಸಿಕೊಂಡಿದೆ. ಈ ದೃಷ್ಟಿಯಿಂದ ಇದನ್ನು ಭಿನ್ನವಾಗಿಯೂ ಗುರುತಿಸಬಹುದಾಗಿದೆ. ಇಲ್ಲಿನ ಕೃಷಿ, ವ್ಯಾಪಾರ, ಹಬ್ಬ, ಜಾತ್ರೆ, ರಥೋತ್ಸವ, ಹುಟ್ಟು-ಸಾವಿನ ಆಚರಣೆಗಳು ವಿಶೇಷವಾಗಿ ಕಂಡು ಬರುತ್ತವೆ

**. ಕೃಷಿ ಜೀವನ:** ಗ್ರಾಮೀಣ ಸೊಗಡನ್ನು ಹೆಚ್ಚಾಗಿ  ಹೊಂದಿರುವ ತಾಲ್ಲೂಕಿನ ಎಲ್ಲಾ ಹಳ್ಳಿಗಳ  ಬದುಕು ಕೃಷಿಯನ್ನು ಅವಲಂಭಿಸಿದೆ.ತಮ್ಮ ಊರುಗಳಲ್ಲಿ ಭೂಮಿಯನ್ನು ಸಾಗುವಳಿ ಮಾಡಿ ಬದುಕುವ ರೈತ ಜನರು ಹೆಚ್ಚಾಗಿ ಇದ್ದಾರೆ. ಕೃಷಿ ವೃತ್ತಿ ಹೊಂದಿರುವ ರೈತಾಪಿ ವರ್ಗವು ಎತ್ತಗಳಿಂದ ತಮ್ಮ ಭೂಮಿಯನ್ನು ಸಾಗುವಳಿ ಮಾಡುತ್ತಾರೆ. ಇಂದಿನ ದಿನಗಳಲ್ಲಿ ಟ್ರ್ಯಾಕ್ಟರ್ ಎತ್ತು ಟಿಲ್ಲರ್‌ಗಳ ಬಳಕೆಯೂ ಇದೆ . ರೈತ ಕುಟುಂಬದ ಮನೆಗಳಲ್ಲಿ  ದನಕರುಗಳು ಇವೆ.ಇತ್ತೀಚಿಗೆ ದನಕರುಗಳ ಸಾಕಾಣಿಕೆ ಕಡಿಮೆಯಾಗಿದೆ. ಹೊಲ ಗದ್ದೆಗಳಿಗೆ ಸಗಣಿ ಗೊಬ್ಬರ ಬಳಸುವುದರ ಜೊತೆಗೆ ರಾಸಾಯನಿಕ ಗೊಬ್ಬರ ಹಾಗೂ ಕೀಟನಾಶಕಗಳ ಬಳಕೆಯೂ ಇದೆ. ರಾಗಿಯನ್ನು ಹೆಚ್ಚಾಗಿ ಬೆಳೆಯುತ್ತಾರೆ. ಆದರ ಜೊತೆಗೆ ಭತ್ತ ಜೋಳ ಕಬ್ಬು ಕಡಲೇಕಾಯಿ, ಅರ್ಕ (ಮಂತ್ಯಕಾಳು) ತರಕಾರಿಗಳು ಇವೇ ಮೊದಲಾದ ಬೆಳೆಗಳನ್ನು ಬೆಳೆಯುತ್ತಾರೆ. ರೈತರ ಜೊತೆಗೆ ಕೂಲಿಗಾರರು ಹಳ್ಳಿಗಳಲ್ಲಿ ಸಾಕಾಷ್ಟಿದ್ದಾರೆ. ಇವರು ಭೂಮಿಯಿರುವ ರೈತರ ಹತ್ತಿರ ಕೂಲಿಗಾಗಿ ಕೆಲಸ ಮಾಡುತ್ತಾರೆ. ರೈತರು ತಮಗೆ ಬೇಕಾಗುವಷ್ಟು ಬೆಳೆಗಳನ್ನು ತಾವೇ ಬೆಳೆದುಕೊಳ್ಳುತ್ತಿದ್ದರು. ಆದರೆ ಇಂದಿನ ದಿನಗಳಲ್ಲಿ ಕೈಗಾರಿಕೆಗಳು ಬೆಳವಣಿಗೆಯಾಗುತ್ತಿರುವುದರಿಂದ ಕೃಷಿ ಇಳಿಮುಖವಾಗುತ್ತಿದೆ. ಒಟ್ಟಿನಲ್ಲಿ ರೈತಾಪಿ ಜೀವನ ನಿರ್ವಹಣೆ ದುಸ್ತರವಾಗುತ್ತಲಿದೆ. ಆದರು ಇಂದಹ ಸಂದರ್ಭದಲ್ಲಿ ತಮ್ಮ ಬುದ್ಧಿವಂತಿಕೆಯಿಂದ ಕೃಷಿ ರಂಗದಲ್ಲಿ ಯಶಸ್ಸು ಕಂಡವರು ಇದ್ದಾರೆ. ಇವರು ಕಾಲಕ್ಕೆ ತಕ್ಕಂತೆ ಇರುವ ಸೌಲಭ್ಯಗಳನ್ನು ಬಳಸಿ ಕೃಷಿಯನ್ನು ಕೈಗೊಂಡಿರುವವರಾಗಿದ್ದಾರೆ.

ಇತ್ತೀಚಿನ ದಿನಗಳಲ್ಲಿ ಕೃಷಿಗೆ ಬ್ಯಾಂಕುಗಳಿಂದ ಸಾಲ ದೊರಕುತ್ತಿದ್ದು. ಇದನ್ನು ಉಪಯೋಗಿಸಿಕೊಳ್ಳಬೇಕಾಗಿದೆ. ನೀರಾವರಿ ಲಭ್ಯತೆಯಿಂದ, ಹಣ ತೊಡಗಿಸುವ ಮೂಲಕ ಬುದ್ದಿವಂತಿಕೆಯಿಂದ ರೈತನು ತನ್ನ ಹೊಲದಲ್ಲಿ ತಾನೇ ತಜ್ಞನಾಗಿ ಬೆಳೆ ಅವಧಿಲ್ಲಿ ಕಾಲಕಲಕ್ಕೆ ಗಮನಕೊಟ್ಟ ಕೃಷಿಯನ್ನು ನಡೆಸಬೇಕಾಗಿದೆ.ತೋಟಗಾರಿಕೆ ಬೆಳೆ ಮತ್ತು ಉತ್ತಮ ತಳಗಳ ಬಗ್ಗೆ ಮಾಹಿತಿ ಪಡೆದು ಕೃಷಿಯನ್ನು ಅನುಸರಿಸುವುದು ಅಗತ್ಯವಿದೆ. ಇದರಿಂದ ಕೃಷಿಯು ಪ್ರಾಮುಖ್ಯತೆ ಪಡೆದುಕೊಳ್ಳುತ್ತದೆ.

**ವ್ಯಾಪಾರ ಕೇಂದ್ರಗಳು:** ಪ್ರತಿಯೊಂದು ಪ್ರದೇಶವು ಅಬಿವೃದ್ಧಿ ಹೊಂದಲು ಅಲ್ಲಿನ ವ್ಯಾಪಾರ ವಹಿವಾಟುಗಳು ಪ್ರಮುಖ ಪಾತ್ರ ವಹಿಸುತ್ತವೆ. ನೆಲಮಂಗಲ ತಾಲ್ಲೂಕಿನಲ್ಲಿಯೂ ವ್ಯಾಪಾರ ವಹಿವಾಟುಗಳು ಉತ್ತಮವಾಗಿದ್ದು,  ತನ್ನದೇ ಆದ ವ್ಯಾಪಾರ ಕೇಂದ್ರಗಳನ್ನು ಹೊಂದಿದೆ. ಈ ವ್ಯಾಪಾರ ಕೇಂದ್ರಗಳು ಬೆಂಗಳೂರಿನ ವ್ಯಾಪಾರ ಕೇಂದ್ರಗಳ ಜೊತೆ ಸಂಪರ್ಕ ಹೊಂದಿವೆ.  ೧೯೨೧ರ ಕಾಲಕ್ಕೆ ನೆಲಮಂಗಲ ತಾಲ್ಲೂಕಿನ ತ್ಯಾಮಗೊಂಡ್ಲು

ಬೆಂಗಳೂರು ಜಿಲ್ಲೆಯ ಪ್ರಮುಖ ವ್ಯಾಪಾರ ಕೇಂದ್ರಗಳಲ್ಲಿ ಒಂದಾಗಿತ್ತು. ಬೆಂಗಳೂರು ನಗರ ಸಭೆಯ ಆರಂಭ ಶಿಲ್ಕು (ಉಳಿತಾಯ ಹಣ) ೪೩೩೧ ರೂ ಆಗಿದ್ದು, ತ್ಯಾಮಗೊಂಡ್ಲು ಪುರಸಭೆಯ ಆರಂಭ ಶಿಲ್ಕು (ಉಳಿತಾಯದ ಹಣ) ೬೦೮೭ ರೂ. ಆಗಿತ್ತು ಇದರಿಂದ ತಾಲ್ಲೂಕು ಕೇಂದ್ರಕ್ಕಿಂತಲೂ, ಬೆಂಗಳೂರು ನಗರಕ್ಕಿಂತಲೂ ದೊಡ್ಡ ವ್ಯಾಪಾರ ಕೇಂದ್ರವಾಗಿ ತ್ಯಾಮಗೊಂಡ್ಲು ಹೆಸರನ್ನು ಪಡೆದಿತ್ತು ಎಂಬುದನ್ನು ತಿಳಿಯುತ್ತದೆ. ಇತ್ತೀಚಿಗೆ ಸುತ್ತಲಿನ ಗ್ರಾಮಗಳ ಜನರಿಗೆ ವ್ಯಾಪಾರ ಕೇಂದ್ರವಾಗಿ ತ್ಯಾಮಗೊಂಡ್ಲು ಕಂಡುಬಂದರೂ ಮೊದಲಿನ ವ್ಯಾಪಾರ ವಹಿವಾಟುಗಳು ನಡೆಯುತ್ತಿಲ್ಲ ಇಲ್ಲಿ ಸ್ಥಳಿಯವಾಗಿ ಮಂಗಳವಾರ ಸಂತೆ ನಡೆಯುತ್ತದೆ. ಅಂದು ಸುತ್ತಲಿನ ಗ್ರಾಮಸ್ಥರು ವ್ಯಾಪಾರ ವಾಹಿವಾಟುಗಳನ್ನು ನಡೆಸುತ್ತಾರೆ. ಇದು ಬೆಂಗಳೂರಿಗೆ ಹತ್ತವಿರುವುದರಿಂದ ವ್ಯಾಪಾರ ವಹಿವಾಟು ಸಂಪರ್ಕವಿಟ್ಟುಕೊಂಡು ವಸ್ತುಗಳ ವ್ಯಾಪರ ವಹಿವಾಟುಗಳನ್ನು ನಡೆಸುತ್ತಿದೆ.

ನೆಲಮಂಗಲವು ಕೇಂದ್ರಸ್ಥಾನದ ವ್ಯಾಪಾರ ಕೇಂದ್ರವಾಗಿದೆ. ಇಲ್ಲಿ ಸ್ಥಳೀಯವಾಗಿ ಶುಕ್ರವಾರದಂದು ಸಂತೆ ನಡೆಯುತ್ತದೆ. ಸುತ್ತಲಿನ ಗ್ರಾಮಗಳ ಜನರು ಈ ಸಂತೆಯಲ್ಲಿ ತಮ್ಮ ವಸ್ತುಗಳ ವ್ಯಾಪಾರ ನಡೆಸುತ್ತಾರೆ, ಈ ತಾಲ್ಲೂಕು ಬೆಂಗಳೂರಿಗೆ ಹತ್ತಿರವಿದ್ದು, ಉತ್ತಮ ಸಾರಿಗೆ ಸಂಪರ್ಕ ಹೊಂದಿರುವುದರಿಂದ ಎಲ್ಲಾ ವ್ಯಾಪಾರ ವಹಿವಾಟುಗಳು ಬೆಂಗಳೂರಿನ ವ್ಯಾಪಾರ ಕೇಂದ್ರಗಳು ಮೂಲಕ ನಡೆಯುತ್ತದೆ. ಬಹುರಾಷ್ಟ್ರಿಯ ಕೈಗಾರಿಕೆಗಳ ಸ್ಥಾಪನೆಯಿಂದ ಹೆಚ್ಚಿನ ವ್ಯಾಪಾರ ವಹಿವಾಟು ನಡೆಯುತ್ತದೆ.

ದಾಬಸಪೇಟೇಯು ವ್ಯಾಪಾರ ಕೇಂದ್ರವಾಗಿದ್ದು ಸ್ಥಳೀಯವಾಗಿ ಬುಧವಾರದಂದು ಸಂತೆ ನಡೆಯುತ್ತದೆ. ಇತ್ತೀಚಿಗೆ ಇಲ್ಲಿ ಹೆಚ್ಚಿನ ಕೈಗಾರಿಕೆಗೆಳು ಸ್ಥಾಪಾನೆಯಾಗಿರುವುದರಿಂದ ವ್ಯಾಪಾರ ವಹಿವಾಟುಗಳು ಹೆಚ್ಚಾಗಿವೆ. ಶಿವಗಂಗೆ ಸ್ಥಳೀಯ ವ್ಯಾಪಾರ ಕೇಂದ್ರವಾಗಿದ್ದು ಇಲ್ಲಿ ಶುಕ್ರವಾರದಂದು ಸಂತೆ ನಡೆಯುತ್ತದೆ. ಸ್ಥಳೀಯ ಜನರು ತಮ್ಮ ವಸ್ತುಗಳ ವ್ಯಾಪಾರ ನಡೆಸುತ್ತಾರೆ.

**ಕೈಗಾರಿಕೆಗಳು:** ಇಂದು ತಾಲ್ಲೂಕಿನಲ್ಲಿ ಕೈಗಾರಿಗೆಗಳು ತೀವ್ರಗತಿಯಲ್ಲಿ ಬೆಳೆಯುತ್ತಿದ್ದು, ಕೈಗಾರಿಕೀಕರಣ ಪ್ರಕ್ರಿಯೆಗೆ ಒಳಗಾಗಿದೆ. ಮೊದಲು ತಾಲ್ಲೂಕಿನಲ್ಲಿ ಗುಡಿ ಕೈಗಾರಿಕೆಗಳು ಪ್ರಾಮುಖ್ಯತೆ ಪಡೆದಿದ್ದವು. ಬುಟ್ಟಿ ಎಣೆಯುವುದು, ಕೈಮಗ್ಗ, ಸಣ್ಣ ಪ್ರಮಾಣದ ಕೈಗಾರಿಕೆಗಳಿದ್ದವು. ಇಂದು ಬಹುರಾಷ್ಟ್ರೀಯ ಕಂಪನಿಗಳ ಕೈಗ್ರಾರಿಕೆಗಳಾದ ಇಂಡಸ್ ಪಿಲಾ, ಪೊರ್ಸ್‌ರಾಕ್, ಬಯೋಕಾನ್ ಮೊದಲಾದ ಕೈಗಾರಿಕೆಗಳು ಸ್ಥಾಪನೆಯಾಗಿವೆ. ಇದರಿಂದ ಆರ್ಥಿಕವಾಗಿ ಮುಂದುವರಿಯುತ್ತಾ ಇದೆ. ಅದೇ ರೀತಿ ತೊಂದರೆಗಳಿಗೂ ಒಳಗಾಗುತ್ತಿದೆ.

ತಾಲ್ಲೂಕಿನ ಆರ್ಥಿಕ ಸುಧಾರಣೆಯಲ್ಲಿ ಮಹಿಳಾ ಸಬಲೀಕರಣ ಪ್ರಮುಖವಾಗಿರುತ್ತದೆ. ಮೊದಲು ಮಹಿಳೆಯು ಕುಟುಂಬ ನಿರ್ವಹಣೆ, ಕೃಷಿ ಚಟುವಟಿಕೆಗಳಲ್ಲಿ ಹೆಚ್ಚಾಗಿ ಗುರುತಿಸಿಕೊಂಡವರಾಗಿದ್ದರು. ಪ್ರಸ್ತುತದಲ್ಲಿ. ಇಂದು ಎಲ್ಲಾ ರಂಗಗಳಲ್ಲಿ ಮಹಿಳೆಯರು ಮುಂದುವರಿಯುತ್ತಾ ಇದ್ದಾರೆ. ಮಹಿಳಯರು ಸ್ವಯಂ ಉದ್ಯೋಗಕ್ಕಾಗಿ ಅನೇಕ ಕಾರ್ಯಕ್ರಮಗಳು ಸ್ಥಾಪನೆಯಾಗಿವೆ. ೧೯೯೯ರಲ್ಲಿ ಸರ್ಕಾರವು ಸ್ತ್ರೀಶಕ್ತಿ ಯೋಜನೆಯನ್ನು ಜಾರಿಗೆ ತಂದಿತು. ಈ ಯೋಜನೆಯಡಿಯಲ್ಲಿ ಸ್ತ್ರೀಶಕ್ತಿ ಗುಂಪುಗಳಿಗೆ ತಮ್ಮ ಸ್ವಂತ ಉದ್ಯೋಗ ಕೈಗೊಳ್ಳಲು ಸರ್ಕಾರ ಹಣ ವಿತರಣೆ ಮಾಡಿತು. ಇದರಿಂದ ತಾಲ್ಲೂಕಿನದ್ಯಾಂತ ಅನೇಕ ಸ್ತ್ರೀಶಕ್ತಿ ಗುಂಪುಗಳು ಉದಯವಾದವು. ಸ್ತ್ರೀಯರು ಸರ್ಕಾರದಿಂದ ಹಣ ಪಡೆದು ಹಸು ಸಾಕಾಣಿಕೆ, ಆಟಿಕೆಗಳ ತಯಾರಿಕೆ ಹೀಗೆ ಸ್ವಂತ ಉದ್ಯೋಗ ಕೈಗೊಳ್ಳುತ್ತಾ ಆರ್ಥಿಕವಾಗಿ ಸಬಲೀಕರಣವಾಗುತ್ತಿದ್ದಾರೆ.ಸ್ವಸಹಾಯಕ ಗುಂಪುಗಳು ತಾಲ್ಲೂಕಿನ ಜನರಿಗೆ ಸ್ವಯಂ ಉದ್ಯೋಗ ಕೈಗೊಳ್ಳಲು ಹಣವನ್ನು ವಿತರಿಸಲಾಗುತ್ತಿದೆ. ಮಹಿಳೆಯರಿಗೆ ಸಾಮಾನ್ಯ ಶಿಕ್ಷಣವನ್ನು ಒದಗಿಸುವ ಕಾರ್ಯ ನಡೆಸುತ್ತಿದೆ. ಒಟ್ಟಾರೆ ಸ್ವಸಹಾಯ ಗುಂಪುಗಳು ಸದಸ್ಯರ ಆರ್ಥಿಕ ಅಭಿವೃದ್ಧಿಯ ವೇದಿಕೆಗಾಳಾಗಿವೆ. ಈ ಮೇಲಿನ ಎಲ್ಲಾ ಅಂಶಗಳು ನೆಲಮಂಗಲ ತಾಲ್ಲೂಕಿನ ಆರ್ಥಿಕ ಸ್ಥಿತಿಯಲ್ಲಿ ಮಹತ್ತರ ಪಾತ್ರ ವಹಿಸುತ್ತವೆ.

**೫.೧. ಆಚರಣೆಗಳು:**

ಮನುಷ್ಯನ ಹುಟ್ಟಿನಿಂದ ಸಾವಿನವರೆಗೂ ಆಚರಣೆಗಳು ನಡೆಯುತ್ತಲೇ ಇರುತ್ತವೆ. ಆಚರಣೆಗಳು ಮನುಷ್ಯನ ಸಂಸ್ಕೃತಿಯ ಅವಿಭಾಜ್ಯ ಅಂಗಗಳು ಎನ್ನಬಹುದು. ಮನುಷ್ಯನ ಜೀವನವನ್ನು ರೂಪಿಸುವಲ್ಲಿ ಪೋಷಿಸುವುದರಲ್ಲಿಯೂ ಆಚರಣೆಗಳು ಮಹತ್ವದ ಪಾತ್ರವನ್ನು ವಹಿಸುತ್ತವೆ. ಆಚರಣೆಗಳು ಮೊದಲು ವೈಯುಕ್ತಿಕವಾಗಿ ರೂಪ ತಾಳಿ ಆನಂತರ ತಲೆತಲಾಂತರವಾಗಿ ಬೆಳೆದು ಬಂದಿವೆ. ಮನುಷ್ಯನು ನಂಬಿಕೆಗನುಣವಾಗಿ ತನ್ನ ಸಮುದಾಯದೊಂದಿಗೆ ಬೆರೆತು ತನ್ನ ಸುಖ ಸಂತೋಷ ಸಂಭ್ರಮಗಳನ್ನು ವ್ಯಕ್ತಪಡಿಸುವ ಸಲುವಾಗಿ ಆಚರಣೆಗಳನ್ನು ಮೈಗೂಡಿಸಿಕೊಂಡಿದ್ದಾನೆ ಎನ್ನಬಹುದು. ಆಚರಣೆಗಳು ಒಂದು ಜನಾಂಗದಿಂದ ಇನ್ನೊಂದು ಜನಾಂಗಕ್ಕೆ ಭಿನ್ನವಾಗಿರುತ್ತವೆ. ಈ ರೀತಿಯಾಗಿ ನೆಲಮಂಗಲ ತಾಲ್ಲೂಕಿನ ವಿವಿಧ ಜನಾಂಗದವರು ತಮ್ಮದೇ ಆದ ಆಚರಣೆಗಳನ್ನು ಅಳವಡಿಸಿಕೊಂಡಿರುತ್ತಾರೆ. ಹಬ್ಬಗಳು, ಜಾತ್ರೆ, ರಥೋತ್ಸವ, ಹುಟ್ಟು ಸಾವು ಹೀಗೆ ಹಲವಾರು ನೆಲೆಗಳಲ್ಲಿ ಆಚರಣೆಗಳು ವ್ಯಕ್ತವಾಗಿವೆ.

**ಹಬ್ಬಗಳು**: ಹಬ್ಬಗಳು ಜನರಲ್ಲಿ ಆಚರಿಸುವ ಶುಭಕಾರ್ಯದ ಸಂಕೇತವಾಗಿವೆ. ಭಕ್ತಿ, ಧರ್ಮ, ವೃತಾಚರಣೆ ಮತ್ತು ಸಂಸ್ಕೃತಿಯ ಸಂವರ್ಧಕಗಳಾಗಿ ಕಾರ್ಯ ನಿರ್ವಹಿಸುವಂತವು. ಹಬ್ಬ ಎನ್ನುವ ಪದ ಸಂತೋಷ, ಸಡಗರ ಎಂಬ ಅರ್ಥವನ್ನು ಕೊಡುತ್ತದೆ. ಜನರು ನಕ್ಕು ನಲಿಯುವ, ಉಂಡು ತೇಗಿ ಸಂತೋಷ ಪಡುವ ದಿನವನ್ನು 'ಹಬ್ಬ' ಎನ್ನಬಹುದು. ಹಬ್ಬಗಳು ನಂಬಿಕೆ ಮತ್ತು ಸಂಪ್ರದಾಯಗಳ ಕ್ರಿಯಾರೂಪಗಳೂ ಆಗಿವೆ. ನಿಸರ್ಗವನ್ನು ಸತತ ಪ್ರಯತ್ನಗಳ ಪಾಲವಾಗಿ ಹಬ್ಬಗಳು ಹುಟ್ಟಿರುವತಂಹವುಗಳಾಗಿವೆ ಎನ್ನಬಹುದು. ದೇವರ ಬಗೆಗಿನ ಭೀತಿಯೇ ಆರಾಧನೆಯಾಗಿ, ಆರಾಧನೆಯೇ ಹಬ್ಬವಾಗಿರಬಹುದು, ನಾವು ಆಚರಿಸುವ ಪ್ರತಿಯೊಂದು ಹಬ್ಬಗಳಿಗೂ ಒಂದೊಂದು ವೈಶಿಷ್ಟ್ಯತೆ ಇರುತ್ತದೆ. ಈ ವೈಶಿಷ್ಟ್ಯತೆಯೂ ಒಂದೊಂದು ಕಥೆಯನ್ನು ಹೊಂದಿದ್ದು, ಜನರನ್ನು ಸನ್ಮಾರ್ಗದತ್ತ ನಡೆಸುವಂತೆ ತಿಳಿಸುತ್ತವೆ. ಹಬ್ಬಗಳು ಸಾಮಾನ್ಯ ದಿನದ ಜೀವನಕ್ಕಿಂತ ಭಿನ್ನವಾದ ಸಂಭ್ರಮವನು ತರುವಂತಹವುಗಳಾಗಿವೆ. ಹಬ್ಬಗಳನ್ನು ಸಾಮೂಹಿಕ ಮತ್ತು ಸಾಂಘಿಕ ಎಂದು, ಎರಡು ಗುಂಪುಗಳಾಗಿ ಮಾಡಿಕೊಳ್ಳಬಹುದು. ಯುಗಾದಿ ಗೌರಿ- ಗಣೇಶ, ದೀಪವಾಳಿ ಸಂಕ್ರಾಂತಿ ಮುಂತಾದ ಹಬ್ಬಗಳನ್ನು ಸಾಮೂಹಿಕ ಹಬ್ಬಗಳೆಂದು ಕರಯಬಹುದು. ಈ ಹಬ್ಬಗಳನ್ನು ಹಿಂದೂಗಳು ಆಚರಿಸುತ್ತಾರೆ. ಈ ಹಬ್ಬಗಳು ತಮ್ಮ ತಮ್ಮ ಮನೆಗಳಲ್ಲಿ ನಡೆಸುವ ಆಚರಣೆಗಳಾದರೂ ಏಕಕಾಲದಲ್ಲಿ, ಒಂದೇ ರೀತಿಯಲ್ಲಿ, ಒಂದೇ ರೂಪದಲ್ಲಿ, ಎಲ್ಲಾ ಕಟ್ಟು ಪಾಡುಗಳಿಗನುಗುಣವಾಗಿ ನಡೆಸುವುದರಿಂದ ಇವು ಸಾಮೂಹಿಕ ರೂಪವನ್ನು ಪಡೆದುಕೊಳ್ಳುತ್ತವೆ. ಹಿಂದೂಗಳಂತೆ ಮುಸ್ಲಿಂರೂ ಕೂಡ ರಂಜಾನ್, ಬಕ್ರೀದ್ ಮೊಹರಂ ಹಬ್ಬಗಳನ್ನು ಸಾಮೂಹಿಕವಾಗಿ ಆಚರಿಸುತ್ತಾರೆ. ಕ್ರೈಸ್ತ ಭಾಂದವರು ಕ್ರಿಸ್‌ಮಸ್, ಈಸ್ಟ್‌ಟ್, ಗುಡ್‌ಫ್ರೈಡೆ ಹಬ್ಬಗಳನ್ನು ಸಾಮೂಹಿಕವಾಗಿ ಆಚರಿಸುತ್ತಾರೆ.

ಯಾವುದೋ ಒಂದು ಜನಾಂಗಕ್ಕೆ ಸೇರಿದ ಒಂದು ಗುಂಪು ಅಥವಾ ಸಂಸ್ಥೆಗೆ ಮಾತ್ರ ಸಂಬಂಧಿಸಿದ ಹಬ್ಬಗಳು ಸಾಂಘಿಕ ಹಬ್ಬಗಳು ಎನಿಸುತ್ತವೆ. ಉದಾಹರಣೆಗೆ ಪಿತೃಪಕ್ಷವನ್ನು ಎಲ್ಲಾ ಜನಾಂಗದವರು ಆಚರಿಸುವುದಿಲ್ಲ. ಕೆಲವರು ಮಾತ್ರ ಆಚರಿಸುತ್ತಾರೆ, ಇದು ಹಿರಿಯರ ಪೂಜೆ ಎನಿಸಿಕೊಳ್ಳುತ್ತದೆ. ಹಳ್ಳಿಯ ರೈತರು ತಮ್ಮ ತಮ್ಮ ಹೊಲದ ಹಬ್ಬಗಳನ್ನು ಕೈಗೊಳ್ಳುತ್ತಾರೆ.

ನೆಲಮಂಗಲ ತಾಲ್ಲೂಕಿನಲ್ಲಿ ಹಬ್ಬಗಳನ್ನು ಆಚರಿಸುವ ಆಚರಣೆ ಇದೆ. ಅಂತಹ ಹಬ್ಬಗಳನ್ನು ಇಲ್ಲಿ ವಿವರಿಸಬಹುದಾಗಿದೆ.

**ಯುಗಾದಿ ಹಬ್ಬ:**ಮೊದಲಿನಿಂದಲೂ ಈ ಹಬ್ಬವನ್ನು ಹಿಂದೂಗಳು ಆಚರಿಸುತ್ತಾ ಬಂದಿದ್ದಾರೆ. ಎಲ್ಲರೂ ಹೊಸಬಟ್ಟೆ ಧರಿಸಿ ಆಚರಿಸುವ ಈ ಹಬ್ಬದಲ್ಲಿ ಮಾವಿನ ಸೊಪ್ಪು ಮತ್ತು ಬೇವಿನ ಸೊಪ್ಪು ತಂದು ಮನೆಗೆ

ತೋರಣ ಕಟ್ಟುತ್ತಾರೆ. ಜನರು ಆ ದಿನದಲ್ಲಿ ವಿಶೇಷವಾಗಿರುವ ಬೇವು- ಬೆಲ್ಲವನ್ನು ಪರಸ್ಪರ ವಿನಿಮಯ ಮಾಡಿಕೊಂಡು, ಹಿರಿಯರ ಕಾಲಿಗೆ ನಮಸ್ಕರಿಸಿ ಅವರಿಂದ ಆಶೀರ್ವಾದ ಪಡೆಯುತ್ತಾರೆ. ಆ ದಿನದಲ್ಲಿ ಚಂದ್ರ ದರ್ಶನ ಮಾಡುತ್ತಾರೆ. ಕೆಲವರು ಅಂದು ಪಂಚಾಂಗವನ್ನು ನೋಡಿ ಮಳೆ, ಬೆಳೆ, ಸಂಮೃದ್ಧಿಯ ಫಲ ತಿಳಿದುಕೊಳ್ಳುತ್ತಾರೆ. ಅಂದು ಜನರು ದೇವಾಲಯಗಳ ವಿಶೇಷ ಪೂಜೆಗೆ ಪಾಲ್ಗೊಳ್ಳುತ್ತಾರೆ.

**ಗೌರಿ ಗಣೇಶ ಹಬ್ಬ:** ಭಾದ್ರಪದ ಶುದ್ಧ ಚೌತಿಯಂದು ಗೌರಿ ಗಣೇಶನ ಹಬ್ಬ ಬರುತ್ತದೆ. ಈ ಹಬ್ಬ ಹೊಸದಾಗಿ ಮದುವೆಯಾದ ಮದು ಮಕ್ಕಳಿಗೆ ವಿಶೇಷವಾಗಿರುವಂತಹ ಹಬ್ಬ.ಇಂದಿಗೂ ತಾಲ್ಲೂಕಿನ ಜನರು ಈ ಗೌರಿ ಗಣೇಶನ ಹಬ್ಬವನ್ನು ಜನರು ಆಚರಿಸಿಕೊಂಡು ಬಂದಿದ್ದಾರೆ. ಅಂದು ಮನೆಗಳಲ್ಲಿ ಕಡುಬಿನ ಸಿಹಿ ಊಟ ವಿಶೇಷವಾಗಿರುತ್ತದೆ. ಊರಿನ ಮುಖ್ಯ ಸ್ಥಳದಲ್ಲಿ ಚಪ್ಪರ ಹಾಕಿ ಗಣೇಶನ ಮೂರ್ತಿಯನ್ನು ಕೂರಿಸಿ, ನಿತ್ಯ ಪೂಜೆ ಮಾಡುತ್ತಾರೆ. ಐದು. ದಿನಗಳ ನಂತರ ಗಣೇಶನ ಮೂರ್ತಿಯನ್ನು ಊರಿನ ಕೆರೆಯ ನೀರಿನಲ್ಲಿ ಬಿಡುತ್ತಾರೆ. ಹೀಗೆ ಪ್ರ ತಿವರ್ಷವೂ ತಾಲ್ಲೂಕಿನ ಎಲ್ಲಾ ಜನರು ಗೌರಿ ಗಣೇಶನ ಹಬ್ಬವನ್ನು ಆಚರಿಸುತ್ತಾರೆ.ಈ ಹಬ್ಬ ತಾಲ್ಲೂಕಿನ ಕೋಮುಸೌಹಾರ್ದತೆಗೆ ಹೆಸರಾಗಿದೆ.

**ದೀಪಾವಳಿ ಹಬ್ಬ:** ದೀಪಾವಳಿ ಹಬ್ಬವನ್ನು ತಾಲ್ಲೂಕಿನ ಜನರು ಸಡಗರ ಸಂಭ್ರಮದಿಂದ ಆಚರಿಸುತ್ತಾರೆ. ಹಳ್ಳಿಯ ಜನರು ಕೃಷಿಗೆ ಮತ್ತು ಇತರ ಕಾರ್ಯಗಳಿಗೆ ಬಳಸುವ ಆಯುಧಗಳನ್ನು ಇಟ್ಟು ಪೂಜೆ ಸಲ್ಲಿಸುತ್ತಾರೆ. ಯಾವುದೇ ತೊಂದರೆಯಾಗದಂತೆ ಬಳಸಲು ಈ ಆಯುಧಗಳಿಗೆ ಪೂಜೆ ಕೈಗೊಳ್ಳುತ್ತಾರೆ. ಭೂಮಿಯ ಸಂವೃದ್ದಿ ನೋಡಲು ಬಲಿ ಚಕ್ರವರ್ತಿ ಭೂಮಿಗೆ ಬರುತ್ತಾನೆ ಎಂಬ ನಂಬಿಕೆಯಡಿಯಲ್ಲಿ ಬಲೀಂದ್ರನ ಪೂಜೆ ನಡೆಯುತ್ತದೆ. ಎಲ್ಲಾ ದೇವಾಲಯಗಳಿಗೆ ವಿಶೇಷ ಪೂಜೆ ಈ ಅವಧಿಯಲ್ಲಿ ಪ್ರರಂಭವಾಗುತ್ತದೆ. ರೈತರು ತಾವು ಬೆಳೆದ ಪಸಲು ಫಲ ಕೊಡಲು ಸಿದ್ಧವಾಗಿರುವುದರಿಂದ ಉತ್ತಮ ಫಲ ಸಿಗಲೆಂದು ಪೂಜೆ ಸಲ್ಲಿಸುತ್ತಾರೆ. ಎಲ್ಲಾ ಮನೆಗಳಲ್ಲಿಯೂ ಬೆಳಕಿನ ಹಬ್ಬ ಆಚರಿಸಲು ದೀಪಗಳನ್ನು ಸಾಲು ಸಾಲಾಗಿ ಹಚ್ಚುತ್ತಾರೆ. ಪಟಾಕಿಗಳ ಸದ್ದು ಗದ್ದಲವೂ ಇರುತ್ತದೆ.

**ಸಂಕ್ರಾತಿ ಹಬ್ಬ:** ಇದು ವಿಶೇಷವಾಗಿ ಸುಗ್ಗಿಯ ಹಬ್ಬ. ಹಳ್ಳಿಯ ರೈತರು ತಾವು ಬೆಳೆದ ದವಸ ಧಾನ್ಯಗಳನ್ನು ಸಂಗ್ರಹಣೆ ಮಾಡಿಕೊಳ್ಳುವ ಸಮಯ. ಅದುದರಿಂದಲೇ ಸಂಕ್ರಾಂತಿ ಬಂದಿತು, ಸುಖ ತಂದಿತು. ಎನ್ನುತ್ತಾರೆ. ಅಂದಿನ ದಿನಗಳಲ್ಲಿ ರೈತರು ತಮ್ಮ ದನಕರುಗಳ ಮೈ ತೊಳೆದು ಅವುಗಳನ್ನು ಸಿಂಗಾರಿಸುತ್ತಾರೆ. ಊರಿನ ಮುಂಬಾಗದಲ್ಲಿ ರಸ್ತೆಗೆ ಅಡ್ಡಲಾಗಿ ಹುಲ್ಲನ್ನು ಹಾಕಿ ಕಿಚ್ಚು ಹಾಯಿಸುತ್ತಾರೆ.. ಊರಿನ ಪೂಜಾರಿಯು ಊರಿನ ದೇವಾಲಯದ ಸಂಕ್ರಾಂತಮ್ಮನ ಮುಂದೆ ಬೆಲ್ಲವನ್ನು ಇಟ್ಟು ಪೂಜೆ ಸಲ್ಲಿಸಿ, ಕಿಚ್ಚು ಹಾಯಿಸಲು ಸಿದ್ಧವಾಗಿರುವ ಹಸುಗಳಿಗೆ ಪೂಜೆ ಮಾಡುತ್ತಾರೆ. ಈ ಸಮಯದಲ್ಲಿ ತಮಟೆ ಬಾರಿಸುತ್ತರೆ. ಆಗ ಹಸುಗಳು ಬೆಂಕಿಯನ್ನು ನೆಗೆಯಲು ಪ್ರಾರಂಭಿಸುತ್ತವೆ. ಹೀಗೆ ಸಂಕ್ರಾಂತಿ ಹಬ್ಬ ತಾಲ್ಲೂಕಿನ ಹಳ್ಳಿಗಳಲ್ಲಿ ವಿಶೇಷವಾಗಿದ್ದು, ಆಧುನಿಕತೆಯ ಪ್ರಾಭಾವದಿಂದಾಗಿ ಸ್ವಲ್ಪ ಮಟ್ಟಿಗೆ ಕ್ಷೀಣಿಸುತ್ತಾ ಬರುತ್ತಿದೆ. ಸಂಕ್ರಾಂತಿ ಹಬ್ಬದಂದು ವಿಶೆಷವಾಗಿ ತಾಲ್ಲೂಕಿನ ಶಿವಗಂಗೆಯಲ್ಲಿ ಗಂಗಾಧೇಶ್ವರನ ಜಾತ್ರೆ ನಡೆಯುತ್ತದೆ.

**ಮಹಾಶಿವರಾತ್ರಿ:** ತಾಲ್ಲೂಕಿನಾದ್ಯಂತ ಜನರು ಈ ಹಬ್ಬವನ್ನು ಶ್ರದ್ಧಾ ಭಕ್ತಿಯಿಂದ ಆಚರಿಸುತ್ತಾರೆ. ವಿಶೇಷವಾಗಿ ಈ ಹಬ್ಬದಂದು ಜನರು ಶಿವಗಂಗೆಯ ಬೆಟ್ಟಕ್ಕೆ ಯಾತ್ರೆ ಕೈಗೊಳ್ಳುತ್ತಾರೆ. ಜನರು ಶಿವಗಂಗೆ ಬೆಟ್ಟದ ಪಾತಾಳ ಗಂಗೆಯಲ್ಲಿ ಸ್ನಾನ ಮಾಡಿ ಉಪವಾಸದಿಂದ ನಿರಾಕಾರವಾಗಿ ಬೆಟ್ಟವನ್ನೇರಿ ಗಂಗಾಧರೇಶ್ವರ ಮತ್ತು ಹೊನ್ನಾದೇವಿಗೆ ಪೂಜೆ ಸಲ್ಲಿಸುತ್ತಾರೆ. ಆ ದಿನದ ರಾತ್ರಿ ಅಲ್ಲಿಯೇ ಜನರು ಭಜನೆಗಳನ್ನು ಮಾಡುತ್ತ ಜಾಗರಣೆ ಮಾಡುತ್ತಾರೆ. ಬೆಳಿಗ್ಗೆ ಗಂಗಾಧರೇಶ್ವರ ಹೊನ್ನಾದೇವಿಗೆ ಪೂಜೆ ಸಲ್ಲಿಸಿ ಪ್ರಸಾದ ವಿನಿಯೋಗ ಮಾಡುತ್ತಾರೆ. ಈ ರೀತಿ ಪೂಜೆ ಸಲ್ಲಿಸಿದರೆ ನಮ್ಮ ಪಾಪಗಳು ನಾಶವಾಗುತ್ತವೆ ಎಂಬ ನಂಬಿಕೆ ಈಗಲೂ ಜನರಲ್ಲಿ ಇದೆ.

ಹೀಗೆ ತಾಲ್ಲೂಕಿನ ಜನರು ಮಹಾಶಿವರಾತ್ರಿ ಹಬ್ಬವನ್ನು ಶಿವಗಂಗೆಗೆ ಯಾತ್ರೆ ಕೈಗೊಂಡು ಪೂಜೆ ಸಲ್ಲಿಸುವ ಮೂಲಕ ಆಚರಿಸುತ್ತಾರೆ.

**ರಂಜಾನ್ ಹಬ್ಬ:** ಇದು ಹಿಂದೂಗಳಂತೆ ಮುಸ್ಲಿಂರೂ ಕೂಡ ಸಾಮೂಹಿಕವಾಗಿ ಆಚರಿಸುವ ಹಬ್ಬವಾಗಿದೆ. ಈ ಹಬ್ಬಕ್ಕಿಂತ ಮುಂಚೆ ಒಂದು ತಿಂಗಳು ಇರುವಾಗಲೇ ಮುಸ್ಲಿಂರು ಉಪವಾಸ ಕೈಗೊಳ್ಳುತ್ತಾರೆ. ಉಪವಾಸ ಮುಗಿದ ಮೊದಲನೇ ದಿನದಂದು ಈ ಹಬ್ಬ ಬರುತ್ತದೆ. ಈ ಹಬ್ಬ ಮುಸ್ಲಿಂರಿಗೆ ಪವಿತ್ರ ಹಬ್ಬವಾಗಿದೆ. ಈ ಹಬ್ಬದಂದು ಮುಸ್ಲಿಮರೆಲ್ಲರೂ ತಮ್ಮ ಬಂಧುಗಳೊಂದಿಗೆ ಮಸೀದಿಗೆ ಹೋಗಿ ನವಾಜ್ ಮಾಡಿ ಬರುತ್ತಾರೆ. ಈ ಸಂದರ್ಭದಲ್ಲಿ ಮುಸ್ಲಿಂರೆಲ್ಲರು ಬಡವ-ಶ್ರೀಮಂತ, ಶತ್ರು-ಮಿತ್ರ, ಪರಿಚಿತ- ಅಪರಿಚಿತ ಎನ್ನದೇ ಎಲ್ಲರೂ ಸಹೋದರರರು ಎಂಬ ಭಾವನೆಯಿಂದ ಅಪ್ಪಿ, ಅಲಂಗಿಸಿ ಶುಭ ಕೋರುತ್ತಾರೆ. ಹೀಗೆ ತಾಲ್ಲೂಕಿನಾದ್ಯಂತ ಇರುವ ಮುಸ್ಲಿಂ ಬಾಂಧವರು ರಂಜಾನ್ ಹಬ್ಬವನ್ನು ಆಚರಿಸುತ್ತಾರೆ.

**ಬಕ್ರೀದ್ ಹಬ್ಬ:** ಈ ಹಬ್ಬದಲ್ಲಿ ಮುಸ್ಲಿಂರು ಹಜ್ ಯಾತ್ರೆ ಕೈಗೊಳ್ಳುವುದು ವಿಶೇಷ: ಈ ಹಬ್ಬ ಮುಸ್ಲಿಂರ ತ್ಯಾಗ ಬಲಿದಾನದ ಸಂಕೇತವಾಗಿದೆ. ಅಲ್ಲಾಹನ ಹೆಸರಿನಲ್ಲಿ ಕುರಿ, ಎತ್ತು, ಒಂಟೆಯನ್ನು ಬಲಿ ಕೊಂಡುತ್ತಾರೆ. ಇದನ್ನು ಮೂರು ಭಾಗಮಾಡಿ ಒಂದು ಭಾಗ ಬಡವರಿಗೆ ಒಂದು ಭಾಗ ಬಂಧು ಮಿತ್ರರಿಗೆ, ಉಳಿದೊಂದು ಬಾಗವನ್ನು ತಮ್ಮ ಮನೆಗೆ ಉಪಯೋಗಿಸಿಕೊಳ್ಳುತ್ತಾರೆ. ಈ ಹಬ್ಬದಂದು ಕ್ಷಿರ್ ಕುರುಮಾ ಎಂಬ ಸೇವಗೆಯ ಸಿಹಿ ಅಡುಗೆಯನ್ನು ತಯಾರಿಸಿ ಮತ ಭೇದವಿಲ್ಲದೇ ಬಂದು ಮಿತ್ರರನ್ನು ಅಮಂತ್ರಿಸಿ ಹಂಚುತ್ತಾರೆ.

**ಮೊಹರಂ ಹಬ್ಬ:** ಮುಸ್ಲಿಂರ ಹುಸೇನನ ಅನುಯಾಯಿಗಳು ಆತನ ಆತ್ಮಕ್ಕೆ ಶಾಂತಿ ಸಿಗಲೆಂದು ಉಪವಾಸ ಮತ್ತು ಕುರಾನ್ ಪಠಣೆ ಮಾಡುತ್ತಾರೆ ಹೀಗೆ ತಾಲ್ಲೂಕಿನಾದ್ಯಂತ ಇರುವ ಮುಸ್ಲಿಂರು ಸಾಮೂಹಿಕವಾಗಿ ಈ ಹಬ್ಬಗಳನ್ನು ಆಚರಿಸುತ್ತಾರೆ.

ಹಿಂದೂ ಮತ್ತು ಮುಸ್ಲಿಂರಂತೆ ಕ್ರಿಶ್ಚಿಯನ್‌ರು ಕೂಡ ಸಾಮೂಹಿಕವಾಗಿ ಕ್ರಿಸ್‌ಮಸ್ ಗುಡ್‌ಪ್ರೈಡ್ ಮತ್ತು ಈಸ್ಟರ್ ಹಬ್ಬವನ್ನು ಆಚರಿಸುತ್ತಾರೆ.

**ಕ್ರಿಸ್‌ಮಸ್:** ಈ ಹಬ್ಬ ಕ್ರಿಶ್ಚಿಯನ್ನರ ಬಹು ಮುಖ್ಯವಾದ ಹಬ್ಬವಾಗಿದೆ. ಈ ಹಬ್ಬಕ್ಕೆ ಒಂದು ತಿಂಗಳು ಮುಂಚಿತವಾಗಿ ಹಬ್ಬದ ತಯಾರಿಗಾಗಿ ಗಾನವೃಂದವರು ಮನೆ ಮನೆಗೆ ಹೋಗಿ ಪ್ರಾರ್ಥನೆ ಮಾಡಿ ಅವರನ್ನು ಸಂತೋಷಗೊಳಿಸುತ್ತಾರೆ. ಪ್ರತಿ ಮನೆಯಲ್ಲಿ ಕೊಟ್ಟಿಗೆಯ ರೀತಿಯ ಪುಟ್ಟ ಮನೆ ತಯಾರಿಸಿ ಯೇಸು ಮತ್ತು ಮೇರಿಯ ಪ್ರತಿಮೆಯನ್ನು ಸ್ಥಾಪಿಸುತ್ತಾರೆ. ಚರ್ಚ್‌ಗಳಿಗೆ ಹೋಗಿ ಪ್ರಾರ್ಥನೆ ಸಲ್ಲಿಸುತ್ತಾರೆ.

**ಗುಡ್‌ಪ್ರೈಡೆ:** ಯೇಸು ಶಿಲುಬೆಗೇರಿ ಮರಣ ಹೊಂದಿದ ಘಟನೆಯನ್ನು ಆಚರಿಸುವ ದಿನ ಈ ಹಬ್ಬದಲ್ಲಿ ಬಲಿಪೂಜೆ, ಪ್ರಾರ್ಥನೆ ನಡೆಯುತ್ತದೆ.

**ಈಸ್ಟರ್:** ಯೇಸು ಮರಣಹೊಂದಿದ ಮಾರನೆಯ ದಿನ ಮತ್ತೆ ಹುಟ್ಟಿ ಬರುತ್ತಾನೆ ಎಂಬ ಈ ಘಟನೆಯನ್ನು ಕೊಂಡಾಡುವುದಕ್ಕೆ ಈಸ್ಟರ್ ಹಬ್ಬ ಆಚರಿಸುತ್ತಾರೆ. ಹೀಗೆ ತಾಲ್ಲೂಕಿನಾದ್ಯಂತ ಇರುವ ಕ್ರಿಶ್ಚಿಯನ್ನರ ಸಾಮೂಹಿಕವಾಗಿ ಈ ಹಬ್ಬಗಳನ್ನು ಆಚರಿಸುತ್ತಾರೆ. ಹೀಗೆ ನೆಲಮಂಗಲ ತಾಲ್ಲೂಕಿನಾದ್ಯಂತ ಎಲ್ಲಾ ಹಬ್ಬಗಳು ಮಿಳಿತವಾಗಿದ್ದು ಜನರ ಮನಸ್ಸಿಗೆ ಶಾಂತಿ ಸಮಾಧಾನಗಳನ್ನು ಒದಗಿಸುವ ಅಮೂಲ್ಯ ಸಾಧನಗಳಾಗಿವೆ.

**ಜಾತ್ರೆಗಳು:** ಜಾತ್ರೆಗಳು ಮಾನವ ಸಂಸ್ಕೃತಿಯ ಪ್ರತಿಂಬಿಂಬಗಳಾಗಿವೆ. ಜಾತ್ರಾ ಸಂಸ್ಕೃತಿಯು ಸ್ಥಳಿಯ ಸಂಸ್ಕೃತಿಯ ಪ್ರತೀಕವೆಂದೇ ಹೇಳಬಹುದು. ಹಬ್ಬಗಳು ಕೌಟುಂಬಿಕ ಆಚರಣೆಗಳಾದರೆ ಜಾತ್ರೆಗಳು ಸಾರ್ವಜನಿಕರ ಆಚರಣೆಗಳು. ಮಾನವನ ನಂಬಿಕೆಗಳು ಬರುಬರುತ್ತಾ ಧಾರ್ಮಿಕ ಆಚರಣೆಗೆಯಾಗಿ ಮಾರ್ಪಾಡಾದವು. ಇವು ಆರಾಧನೆಯಾಗಿ ಬೆಳೆದ ಆನಂತರ ಧಾರ್ಮಿಕತೆಯ ಹಿನ್ನೆಲೆಯಲ್ಲಿ ಜಾತ್ರೆಗಳು, ಉತ್ಸವಗಳು ಹುಟ್ಟಿಕೊಂಡವು.

ಕೆಲವು ಸಲ ಹಬ್ಬ ಮತ್ತು ಜಾತ್ರೆ ಎರಡೂ ಒಂದೇ ದಿವಸ ನಡೆಯುತ್ತವೆ. ಜಾತ್ರೆ ಎಂಬ ಪದವನ್ನು ಪರೀಷೆ, ಪರ್ಷೆ ಎಂದು ಕರೆಯಬಹುದು. ಜಾತ್ರೆಗಳು ಎಂದರೆ ಉತ್ಸವಗಳು ಎನ್ನಬಹುದು ಜಾತ್ರೆಯಲ್ಲಿ ದೈವ, ಧರ್ಮದ ಆಚರಣೆ ಮುಖ್ಯ ಜಾತ್ರೆಗಳ ಸುತ್ತ ಜನರ ನಂಬಿಕೆ, ಆಚರಣೆ, ಸಂಸ್ಕೃತಿ, ಸಡಗರ ಇರುತ್ತದೆ. ನೆಲಮಂಗಲ ತಾಲ್ಲೂಕಿನಾದ್ಯಂತ ಅನೇಕ ಜಾತ್ರೆಗಳು, ರಥೋತ್ಸವಗಳು ನಡೆಯುತ್ತವೆ. ತಾಲ್ಲೂಕಿನ ಹಳ್ಳಿ ಹಳ್ಳಿಗಳಲ್ಲಿ ಸ್ಥಳೀಯವಾಗಿ ಗ್ರಾಮ ದೇವತೆಗಳ ಜಾತ್ರೆ ಮತ್ತು ದೇವರು ಜಾತ್ರೆಗಳು ನಡೆಯುತ್ತಿರುತ್ತವೆ. ಕೆಲವೊಂದು ಜಾತ್ರೆ ವರ್ಷಕ್ಕೊಮ್ಮೆ ನಡೆದರೆ ಇನ್ನೂ ಕೆಲವು ಬಾರಿ ಎರಡು, ಐದು, ಮತ್ತು ಹನ್ನೆರೆಡು ವರ್ಷಕೊಮ್ಮೆ ಜಾತ್ರೆಗಳು ನಡೆಯುತ್ತವೆ. ಕೆಲವು ಜಾತ್ರೆಗಳು ಊರಿಗಷ್ಟೇ ಸೀಮಿತವಾಗಿದ್ದರೆ. ಇನ್ನೂ ಕೆಲವು ಜಾತ್ರೆಗಳು ಸುತ್ತ ಏಳೂರ ಹಳ್ಳಿಗೆ ಮತ್ತು ಹೋಬಳಿ, ತಾಲ್ಲೂಕಿಗೆ ವಿಸ್ತರಿಸಲಾಗಿರುತ್ತವೆ. ನೆಲಮಂಗಲ ತಾಲ್ಲೂಕಿನ ಸಂಸ್ಕೃತಿಯ ಪ್ರತಿಬಿಂಬವಾಗಿರುವ ಜಾತ್ರೆ ಉತ್ಸವಗಳನ್ನು ಈಗಲೂ ಆಚರಿಸಿಕೊಂಡು ಬರಲಾಗಿದೆ.

**೧.ಬಯಲು ಗಣಪತಿಯ ಜಾತ್ರೆ:** ನೆಲಮಂಗಲದ ಕೇಂದ್ರಸ್ಥಾನದಲ್ಲಿ ಬಹುಮುಖ್ಯವಾದ ಜಾತ್ರೆ ಎಂದರೆ ಬಯಲು ಗಣಪತಿಯ ಜಾತ್ರೆಯಾಗಿದೆ. ಪ್ರತಿ ವರ್ಷವು ಇಲ್ಲಿ ಜಾತ್ರೆ, ಉತ್ಸವಗಳು ನಡೆಯುತ್ತಿದ್ದು, ವಿಶೇಷವಾಗಿ ಮಾರ್ಚ್ ತಿಂಗಳಿನಲ್ಲಿ ಈ ಜಾತ್ರೆ ಉತ್ಸವ ನಡೆಯುತ್ತದೆ. ಇಲ್ಲಿನ ಜಾತ್ರೆ. ಉತ್ಸವಗಳ ಸಮಯದಲ್ಲಿ ಕಡಲೇಕಾಯಿನ್ನು ವಿಶೇಷವಾಗಿ ಮಾರಾಟ ಮಾಡಲಾಗುತ್ತದೆ. ಅದುದರಿಂದ ಈ ಜಾತ್ರೆಯನ್ನು ಸ್ಥಳೀಯ ಜನರು 'ಕಡಲೇಕಾಯಿ ಪರೀಷೆ' ಎಂದು ಕರೆಯುತ್ತಾರೆ.ಈ ಜಾತ್ರೆಯಲ್ಲಿ ವಿಶೇಷವಾಗಿ ಗಣಪತಿಯ ಮೂರ್ತಿಯನ್ನು ಉತ್ಸವ ಮಾಡಲಾಗುತ್ತದೆ. ಪ್ರತಿದಿನವು ಕೂಡ ನಿತ್ಯಾರ್ಚನೆ ಮಾಡಲಾಗುತ್ತದೆ.

ಅಲ್ಲದೆ ನೆಲಮಂಗಲದಲ್ಲಿ ರುದೇಶ್ವರ ಸ್ವಾಮಿಯ ಜಾತ್ರೆಯು ಶಿವರಾತ್ರಿಯ ನಂತರ ನಡೆಯುತ್ತದೆ. ಕವಾಡಿ ಮಠದ ರುದ್ರೇಶ್ವರ ಸ್ವಾಮಿಯ ಜಾತ್ರೆಯು ಯುಗಾದಿ ಹಬ್ಬ ಆದ ೩ನೇ ಮಗಂಳವಾರ ನಡೆಯುತ್ತದೆ.

**೨. ಲಕ್ಷ್ಮೀನಾರಾಯಣನ ಜಾತ್ರೆ:** ನೆಲಮಂಗಲದಿಂದ ಎರಡು ಕಿ.ಮೀ. ದೂರದಲ್ಲಿ ಬಸವನಹಳ್ಳಿ ಇದೆ. ಇಲ್ಲಿ ಲಕ್ಷ್ಮೀ ನಾರಾಯಣ ಮೂರ್ತಿಯ ವಿಶೇಷವಾಗಿದ್ದು ಆದರ ಜೊತೆಗೆ ಶ್ರೀರಂಗನಾಥನ ಮತ್ತು ಗರುಡ ದೇವರ ಪೂಜೆಗೆ ಅಗ್ರ ಸ್ಥಾನ ನೀಡಲಾಗಿದೆ. ಇಲ್ಲಿ ದೇವರ ಜಾತ್ರೆಯಾಗಿ ಗುರುತಿಸಿಕೊಳ್ಳದಿದ್ದರೂ ಈ ದೇವರುಗಳು ನೆಲೆಯಿರುವ ಸ್ಥಳದ ಕುರುಹಾಗಿ 'ಬಸವನಹಳ್ಳಿ ಜಾತ್ರೆ' ಎಂದು ಕರೆಯಿಸಿಕೊಂಡಿದೆ. ಈ ಜಾತ್ರೆಯ ದಿನವನ್ನು ಪಂಚಾಂಗ ಮತ್ತು ಕ್ಯಾಲೆಂಡರ್‌ಗಳಲ್ಲೂ ಸೂಚಿಸಲಾಗಿರುವುದಿಂದ ಇಡೀ ಭಕ್ತ ಸಮುದಾಯವೇ ಜಮಾಯಿಸುತ್ತದೆ. ಈ ಜಾತ್ರೆಯು ಪ್ರತಿ ವರ್ಷದ ಏಪ್ರೀಲ್ ತಿಂಗಳಿನ ಚಿತ್ತ ನಕ್ಷತ್ರದಲ್ಲಿ ಮೂರು ದಿನಗಳು ಜರುಗತ್ತದೆ. ಚಿತ್ತಪೂರ್ಣಿಮಿಯ ದಿನ ಗರುಡೋತ್ಸವ ವೈಭವದಿಂದ ನಡೆದರೆ ನಂತರ ಶೃಂಗಾರಭರಿತ ಆಕರ್ಷಕ ರಥದಲ್ಲಿ ಶ್ರೀಲಕ್ಷ್ಮಿ ನಾರಾಯಣಸ್ವಾಮಿಯನ್ನು ಪ್ರಿತಿಷ್ಠಾಪಿಸಿ ವಿಜೃಂಭಣೆಯಿಂದ ರಥೋತ್ಸವ ಜರುಗುತ್ತದೆ. ಇಲ್ಲಿ ವಿಶೇಷವಾಗಿ ಐವತ್ತಕ್ಕೂ ಹೆಚ್ಚು ಅರವಟಿಕೆಗಳು, ಕೊಪ್ಪಲುಗಳು, ಬಂದ ಭಕ್ತಾದಿಗಳಿಗೆ ಪ್ರಸಾದ ನೀಡುತ್ತವೆ. ಇಲ್ಲಿ ವೈಶ್ಯ ಸಮೂಹದ ಕೊಪ್ಪಲುಗಳು ಮಹತ್ವ ಪಡೆದಿವೆ. ನಾದಸ್ವರ ಮೇಳ ಮತ್ತು ವಾದ್ಯಗಳು ಮೊಳಗುವ ವೇಳೆಗೆ ರಥೋತ್ಸವದ ಘಳಿಗೆ ಅವರಿಸುತ್ತದೆ. ಗರುಡ ಪಕ್ಷಿ ಗಗನದಲ್ಲಿ ಹಾರಿ ಬಂದು ರಥದ ಸುತ್ತ ಸುತ್ತಿದ ನಂತರವೇ ರಥ ಮುನ್ನೆಡೆಯುತ್ತದೆ. ಭಕ್ತರು ತಮ್ಮ ಇಷ್ಟಾರ್ಥಕ್ಕಾಗಿ ಸೂರು ಬಾಳೆಹಣ್ಣನ್ನು ದೇವನ ಸಹಿತ ಎಸೆದು ಸಂತಸ ಪಡುತ್ತಾರೆ ಇಲ್ಲಿ ನೈಜತೆಗಾಗಿ ಮಕ್ಕಳ ಅಟಿಕೆಗಳನ್ನು ಹೊತ್ತು ಬಲೂನು ಅಂಗಡಿ, ಕಷ್ಲೆಪುರಿ, ಬತಾಸು, ತಿಂಡಿ ತಿನಿಸುಗಳನ್ನೊಳಗೊಂಡ ಅಂಗಡಿಗಗಳನ್ನು ಕಾಣಬಹುದು.

ನಾಡಿನ ಹಬ್ಬ ದಸರಾ ಮತ್ತು ವಿಜಯ ದಶಮಿಯಂದು ಬಸವನಹಳ್ಳಿಗೆ ಸಮೀಪವಿರುವ ಅಮ್ಮಲ್ ದಿಣ್ಣೆ ಅಂದರೆ ಮಾರ್ನಮಿ ದಿಬ್ಬಕ್ಕೆ ಸುತ್ತಮುತ್ತಲ ಗ್ರಾಮಗಳ ದೇವರುಗಳನ್ನು ವಿವಿದ ವಾದ್ಯಗಳೊಂದಿಗೆ ಕರೆತಂದು, ಸಾಂಸ್ಕೃತಿಕ ಮತ್ತು ವಿವಿಧ ವಿನೋದಾವಳಿಗಳನ್ನು ನಡೆಸುಲಾಗುತ್ತದೆ. ತಾಲ್ಲೂಕು ದಂಡಾಧಿಕಾರಿಗಳೊದಿಗೆ ವಿವಿಧ

ಇಲಾಖಾಧಿಕಾರಿಗಳು ಸಹಸ್ರಾರು ಮಂದಿ ವೀಕ್ಷಿಸುವ ಈ ಹಬ್ಬ ವಿಜಯನಗರದ ಶ್ರೀಕೃಷ್ಣದೇವರಾಯರು ಮತ್ತು ಮೈಸೂರು ಮಹಾರಾಜರುಗಳು ವೈಭವದೊಂದಿಗೆ ಆಚರಿಸುತ್ತಿದ್ದ ನಾಡಹಬ್ಬದ ನೆನೆಪು ಮೂಡಿಸುತ್ತದೆ. ಇಲ್ಲೂ ಬನ್ನಿ ಮಂಟಪವನ್ನು ನಿರ್ಮಿಸಿ ಬನ್ನಿ ಮರವನ್ನು ಕತ್ತರಿಸುವ ಸಂಪ್ರದಾಯವನ್ನು ಬಹುದಿರಗಳಿಂದಲೂ ಆಚರಿಸುತ್ತಿರುವುದು ಮಹತ್ವದ ವಿಚಾರವಾಗಿದೆ.

೩. **ಗಂಗಾಧರೇಶ್ವರ ಮತ್ತು ಹೊನ್ನಾದೇವಿಯ ಜಾತ್ರೆ:** ನೆಲಮಂಗಲ ತಾಲ್ಲೂಕಿನ ಶಿವಗಂಗೆಯಲ್ಲಿ ನಡೆಯುವ ಗಂಗಾಧರೇಶ್ವರ ಮತ್ತು ಹೊನ್ನಾದೇವಿಯ ಜಾತ್ರೆಯ ವಿಶೇಷವಾದ ಜಾತ್ರೆಯಾಗಿದೆ. ಸಂಕ್ರಾಂತಿ ಹಬ್ಬ ಮತ್ತು ಈ ಜಾತ್ರೆ ಎರಡು ಒಟ್ಟಿಗೆ ನಡೆಯುವಂತಹವುಗಳಾಗಿವೆ. ಪ್ರತಿ ವರ್ಷವು ಈ ಮಕರ ಸಂಕ್ರಾಂತಿಯ ಹಬ್ಬದಂದು ಶಿವಗಂಗೆಯೆಲ್ಲಿ ಗಂಗಾಧರೇಶ್ವರ ಮತ್ತು ಹೊನ್ನಾದೇವಿಯ ಕಲ್ಯಾಣೋತ್ಸವ ನಡೆಯುತ್ತದೆ. ಇದನ್ನು 'ಗಿರಿಜಾ ಕಲ್ಯಾಣ' ಎನ್ನತ್ತಾರೆ ಅಲ್ಲದೇ ಜನರು ಆಡು ಭಾಷೆಯಲ್ಲಿ 'ಗಂಗಪ್ಪನ ಧಾರೆ' ಎಂದು ಕರೆಯುತ್ತಾರೆ. ಇಲ್ಲಿಗೆ ಜನರು ಅಂದಿನ ದಿವಸ ವಿಶೇಷ ಪೂಜೆ ಕೈಗೊಳ್ಳುತ್ತಾರೆ. ಭಕ್ತಾಧಿಗಳು ಇಲ್ಲಿನ ಮೇಲಣಗವಿ ಮಠದಲ್ಲಿ ಜನರಿಗೆ ಅನ್ನಸಂತರ್ಪಣೆಯನ್ನು ಕೈಗೊಳ್ಳುತ್ತಾರೆ. ನಿತ್ಯ ಪೂಜೆಯನ್ನು ಮಾಡಲಾಗುತ್ತದೆ. ಶಿವರಾತ್ರಿ, ಕಾರ್ತಿಕ ಮಾಸದಲ್ಲಿ ವಿಶೇಷ ಪೂಜೆಯನ್ನು ನಡೇಸಲಾಗುತ್ತದೆ.

ಪ್ರತಿವರ್ಷವು ಶಿವಗಂಗೆಯಲ್ಲಿ ಭಾರಿ ದನಗಳು ಜಾತ್ರೆಯೂ ನಡೆಯುತ್ತದೆ. ಇಲ್ಲಿನ ಎಲ್ಲಾ ಉಸ್ತುವಾರಿಯನ್ನು ನೆಲಮಗಂಲ ತಾಲ್ಲೂಕಿನ ಮುಜುರಾಯಿ ಇಲಾಖೆಯು ನೋಡಿಕೊಳ್ಳುತ್ತದೆ.ಜಾತ್ರೆಗಳು ಹೆಚ್ಚು ಹೆಚ್ಚು ನಾಗರೀಕವಾಗುತ್ತ ನೆಡೆದಿವೆ. ಶುದ್ಧೀಕರಣಗೊಂಡ ಕುಡಿಯುವ ನೀರಿನ ಸರಬರಾಜು. ಜನ, ದನಗಳಿಗೆ ಔಷಧೋಪಚಾರ, ಆಹಾರ ಸಂರಬರಾಜು, ಸಾರಿಗೆ ಸೌಲಭ್ಯ, ವಿದ್ಯತ್ ದೀಪದ ವ್ಯವಸ್ಥೆ ಜನರಿಗೆ ಹಿತವೆನಿಸುವ ಉತ್ತಮ ಮನರಂಜನೆಯ ಏರ್ಪಾಡು ಇತ್ಯಾದಿ ಸೌಲಭ್ಯಗಳನ್ನು ನೆಲಮಂಗಲ ತಾಲ್ಲೂಕಿನ ಮುಜುರಾಯಿ ಇಲಾಖೆಯು ಒದಗಿಸುತ್ತಿದೆ. ಅಲ್ಲದೇ ದನಗಳು ರಾಸುಗಳು ವಾಹನಗಳು ಅಂಗಡಿ ಇವೇ ಮೊದಲಾದವುಗಳಿಗೆ ಸುಂಕ ವಿಧಿಸುತ್ತದೆ. ಹೀಗೆ ಪ್ರತಿವರ್ಷವೂ ಶಿವಗಂಗೆಯಲ್ಲಿ ಜಾತ್ರಾ ಉತ್ಸವಗಳು ಜನ ಮತ್ತು ಜಾನವಾರಗುಳ ಸಂಮಿಶ್ರದೊಂದಿಗೆ ನಡೆಯುತ್ತಿವೆ.

೪. **ಮಹಿಮೆರಂಗನ ರಥೋತ್ಸವ:** ನೆಲಮಂಗಲ ತಾಲ್ಲೂಕಿನ ಮಹಿಮಾಪುರದಲ್ಲಿ ಮಹಿಮೆರಂಗನ ಬೆಟ್ಟವಿದ್ದು ಇಲ್ಲಿ ರಂಗನಾಥನ ಶಿಲ್ಪವು ವಿಶೇಷತೆಯನ್ನು ಹೊಂದಿದೆ. ಶಕ್ತಿ ದೇವನಾಗಿ ಇತನನ್ನು ಮಹಿಮೆರಂಗ ಎಂದು ಕರೆಯುತ್ತಾರೆ. ಪ್ರತಿವರ್ಷವು ಇಲ್ಲಿ ಮೂಘ ಪೂರ್ಣಿಮೆಯ ಕಾಲದಲ್ಲಿ ೧೫ ದಿನಗಳ ಕಾಲ ಇಲ್ಲಿ ಭಾರಿ ದನಗಳ ಜಾತ್ರೆ ನಡೆಯುತ್ತದೆ. ಇದರ ಉಸ್ತುವಾರಿಯ ಕಾರ್ಯವನ್ನು ತಾಲ್ಲೂಕಿನ ಮುಜುರಾಯಿ ಇಲಾಖೆ ವಹಿಸಿಕೊಂಡು ಬೇಕಾಗುವ ಎಲ್ಲಾ ಸೌಲಭ್ಯಗಳನ್ನು ಒದಗಿಸುತ್ತಿದೆ. ನಂತರ ರಥಸಪ್ತಮಿಯಾದ ಒಂಬತ್ತು ದಿನಗಳಿಗೆ ಸರಿಯಾಗಿ ಮಹಿಮೆರಂಗನ ರಥೋತ್ಸವ ನಡೆಯುತ್ತದೆ. ಇದು ಕೂಡ ನೆಲಮಂಗಲ ತಾಲ್ಲೂಕಿನ ಬಹುಮುಖ್ಯವಾದ ರಥೋತ್ಸವಾಗಿದೆ. ಈ ರಥೋತ್ಸವದ ಸಂದರ್ಭದಲ್ಲಿ ಮಹಿಮೆರಂಗನ ಮೂರ್ತಿಯನ್ನು ರಥ/ತೇರಿನಲ್ಲಿ ಪ್ರತಿಷ್ಠಾಪಿಸಲಾಗುತ್ತದೆ ರಥವನ್ನು ಎಳೆಯಮುವುದಕ್ಕಿಂತ ಮುಂಚೆ ಗರುಡ ಪಕ್ಷಿಯು ಬಂದು ರಥದ ಸುತ್ತ ಮೂರು ಸುತ್ತು ಹಾಕಿದಾಗ ರಥ ಮುಂದಕ್ಕೆ ಚಲಿಸುತ್ತದೆ. ಈ ದೃಶ್ಯವನ್ನು ಈಗಲೂ ನೋಡಬಹುದು ಭಕ್ತಾಧಿಗಳು ರಥವು ಮುಂದಕ್ಕೆ ಚಳಿಸಿದಂತೆ ದಾವನ ಸೇರಿಸಿದ ಪತ್ರೆಯ ಸೂರು ಬಾಳೆಹಣ್ಣುನ್ನು ಎಸೆಯುತ್ತಾರೆ.ಇದರಿಂದ ಭಕ್ತಾಧಿಗಳು ತಮ್ಮ ಪಾಪಗಳು ಪರಿಹಾರವಾದವು ಎಂಬ ನಂಬಿಕೆ ಹೊಂದುತ್ತಾರೆ. ಈ ರಥೋತ್ಸವದ ದಿನದಂದು ಗರುಡ ಮೂರ್ತಿಗೂ ವಿಶೇಷ ಪೂಜೆ ನಡೆಯುತ್ತದೆ.

ನೆಲಮಂಗಲ ತಾಲ್ಲೂಕಿನ ನಿಜಗಲ್‌ನಲ್ಲಿ ನೆಲೆಸಿರುವ ಉದ್ಭಾನ ವೀರಭದ್ರ ಸ್ವಾಮಿ ಮತ್ತು ಲಕ್ಷ್ಮೀ ನರಸಿಂಹಸ್ವಾಮಿಗೆ ಪ್ರತಿವರ್ಷವೂ ಯುಗಾದಿ ಆದ ಹದಿನೈದು ದಿನಗಳಿಗೆ ಸರಿಯಾಗಿ ಜಾತ್ರೆ ನಡೆಯುತ್ತದೆ. ಹಾಗೆಯೇ ದೇವರ

ಹೊಸಹಳ್ಳಿಯ ವೀರಭದ್ರಸ್ವಾಮಿಯ ಉತ್ಸವ ಯುಗಾದಿಯ ನಂತರ ನಡೆಯುತ್ತದೆ. ಈ ಸಂದರ್ಭದಲ್ಲಿ ಅನ್ನದಾಸೋಹಗಳು ನಡೆಯುತ್ತವೆ ಒಟ್ಟಾರೆ ಜಾತ್ರೆಗಳು ಮಾನವನ ಯಾಂತ್ರಿಕ ಜೀವನಕ್ಕೆ ರಸದರ್ಶನ ಮಾಡಿಸಿ, ಜನರ ಅವಿರತ ದುಡಿಮೆಗೆ ವಿಶ್ರಾಂತಿಯನ್ನು ನೀಡಿ ಸಮಾಧಾನ ಒದಗಿಸುತ್ತವೆ. ಮನುಷ್ಯ ಹುಟ್ಟಿನಿಂದ ಸಾವಿನವರೆಗೆ ತನ್ನ ಬದುಕಿನ ವಿಧಾನದ ನೆಲೆಯಂದಿಯಲೇ ಆಚರಣೆಗಳನ್ನು ರೂಢಿಸಿಕೊಂಡಿರುತ್ತಾನೆ. ಹುಟ್ಟು, ಸಾವಿನ ಸಂದರ್ಭಗಳಲ್ಲಿ ಆಚರಿಸುವ ಆಚರಣೆಗಳೂ ಕೂಡ ಪ್ರಾಮುಖ್ಯತೆಯನ್ನು ಹೊಂದಿವೆ. ಹೀಗೆ ಆಚರಣೆಗಳ ನೆಲೆಯಲ್ಲಿ ಬರುವ ಹಬ್ಬಗಳು, ಜಾತ್ರೆ, ರಥೋತ್ಸವಗಳು, ಆಚಾರ-ವಿಚಾರಗಳು ಸಂಸ್ಕೃತಿಯ ಬಿಂಬಗಳಾಗಿವೆ.

'ಸಂಸ್ಕೃತಿ' ಎನ್ನುವುದು 'ನಾಗರೀಕತೆ'ಯ ಅರ್ಥಕ್ಕಿಂತ ಭಿನ್ನವಾದುದು ಮತ್ತು ವಿಶಾಲ ವ್ಯಾಪ್ತಿಯುಳ್ಳದ್ದು. ಜನರ 'ಒಳಿತು' ಎನ್ನಬಹುದಾದ ನಡೆ-ನುಡಿ, ಕೆಲಸ-ಕಾರ್ಯಗಳೆಲ್ಲವೂ 'ಸಂಸ್ಕೃತಿ'ಯ ವ್ಯಾಪ್ತಿಗೆ ಬರುತ್ತವೆ. 'ಬದುಕಿನ ಸಾಂಸ್ಕೃತಿಕ ವಿವೇಚನೆಗೆ ಆಯಾಯ ಕಾಲದ ಧಾರ್ಮಿಕ ಸ್ಥಿತಿ-ಗತಿಗಳು, ವೀರಮೌಲ್ಯ, ಕಲಾ ಪರಂಪರೆ, ಸಾಹಿತ್ಯ ಇತ್ಯಾದಿಗಳ ನೆರವು ಅತ್ಯಾವಶ್ಯಕ. ಜೀವನದ ಮೌಲ್ಯಗಳೂ ದಾಖಲೆಯಾಗಿದ್ದು, ಬದುಕನ್ನು ಗ್ರಹಿಸುವುದು ಸಾಧ್ಯವಾಗುತ್ತದೆ.

ಸಾಂಸ್ಕೃತಿಕ ಇತಿಹಾಸದಲ್ಲಿ ನೆಲಮಂಗಲ ತಾಲ್ಲೂಕಿನ ಸ್ಥಾನವೂ ವಿಶಿಷ್ಟವಾಗಿದ್ದು, ಪ್ರಾಚೀನ ಕಾಲದಿಂದ ಹಿಡಿದು ಬಾಹ್ಯಕಾಶ ವಿಜ್ಞಾನ, ಮಾಹಿತಿ ವಿಜ್ಞಾನ, ಜೈವಿಕ ತಂತ್ರಜ್ಞಾನ, ವಿದ್ಯುನ್ಮಾನ ಯುಗದ ಆಧುನಿಕ ಕಾಲದವರೆಗೆ ಇಲ್ಲಿನ ಜನತೆ ತಮ್ಮ ಕಲೆಗಳ ಮೂಲಕ ದಾಖಲಿಸಿರುವ ಪರಿಯನ್ನು ಸೂಕ್ಷ್ಮವಾಗಿ ತಿಳಿಯಲು ಈ ಅಧ್ಯಾಯದಲ್ಲಿ ಪ್ರಯತ್ನಿಸಲಾಗಿದೆ.

ರಾಜಕೀಯವಾಗಿ ಕ್ರಿ.ಶ. ೮ ನೆಯ ಶತಮಾನಕ್ಕೆ ಪ್ರಸಿದ್ಧವಾಗಿದ್ದ ನೆಲಮಂಗಲ ತಾಲ್ಲೂಕಿನ ಮಣ್ಣೆ, ಅಂದಿನ ಮಾನ್ಯಪುರ ಗಂಗರ ರಾಜಬೀಡುಗಳಲ್ಲೊಂದಾಗಿದ್ದು, ಅಲ್ಲಿನ ದೇವಾಲಯಗಳ ಕಾರಣದಿಂದ ಧಾರ್ಮಿಕತೆ ಮತ್ತು ವಾಸ್ತುಶಿಲ್ಪದ ಇತಿಹಾಸದಲ್ಲಿ ಬಹಳ ಮಹತ್ವದ ಸ್ಥಾನ ಪಡೆದಿದೆ. ಗಂಗರು, ಚೋಳರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರಿನ ಅರಸರು - ಹೀಗೆ ಕರ್ನಾಟಕವನ್ನಾಳಿದ ಎಲ್ಲ ಪ್ರಮುಖ ರಾಜವಂಶಗಳ ಆಳ್ವಿಕೆಯ ವ್ಯಾಪ್ತಿಗೆ ನೆಲಮಂಗಲ ತಾಲ್ಲೂಕು ಸೇರಿದ್ದರೂ, ಈಗಲೂ ಇದು ಪ್ರಸಿದ್ಧವಾಗಿರುವುದು ಮಣ್ಣೆಯಂತಹ ಐತಿಹಾಸಿಕ ಸ್ಥಳ, ಶಿವಗಂಗೆ, ದೇವರ ಹೊಸಹಳ್ಳಿ, ನಿಜಗಲ್ಲು, ಮಹಿಮಾಪುರಗಳಂತಹ ಧಾರ್ಮಿಕ ಕೇಂದ್ರಗಳು, ಚೋಳ ವಾಸ್ತುಶಿಲ್ಪ ಶೈಲಿಗೆ ಹೆಸರಾಗಿರುವ ಭಿನ್ನಮಂಗಲದ ಮುಕ್ತಿನಾಥೇಶ್ವರ ದೇವಾಲಯ, ಗುಹಾ ವಾಸ್ತುಶಿಲ್ಪಕ್ಕೆ ಪ್ರಸಿದ್ಧಿಯಾಗಿರುವ ಶಿವಗಂಗೆಯ ಗಂಗಾಧರೇಶ್ವರ ಮತ್ತು ಹೊನ್ನಾದೇವಿಯ ದೇವಾಲಯಗಳು ಮತ್ತು ಇಲ್ಲಿನ ಸಾಹಿತಿಗಳು, ಸಂಶೋಧಕರು, ವಿವಿಧ ಕಲಾಪ್ರಕಾರಗಳ ಕಲಾವಿದರುಗಳಿಂದ ಮಾತ್ರ.

**೫.೨. ಕಲೆ ಮತ್ತು ವಾಸ್ತುಶಿಲ್ಪ**

ಒಂದು ಪ್ರದೇಶದ ಸಾಂಸ್ಕೃತಿಕ ಹಿರಿಮೆಯು ಆ ಪ್ರದೇಶದ ಕಲಾಸಂಸ್ಕೃತಿಯ ಬೆಳವಣಿಗೆಯನ್ನು ಅವಲಂಬಿಸಿರುತ್ತದೆ. ಇತಿಹಾಸ ಒಂದು ಜನಾಂಗದ ಜೀವನ ಚರಿತ್ರೆಯಾದರೆ, ಕಲೆ ಆಯಾ ಪ್ರದೇಶದ ಆತ್ಮಚರಿತ್ರೆ ಎಂಬ ಹೇಳಿಕೆಯೂ ಉಂಟು. ಕಲೆಯು ಆಯಾ ಕಾಲದಲ್ಲಿರುವ ಜನಾಂಗದ ಭಾವನೆ, ಅನಿಸಿಕೆಗಳಿಗೆ ತಕ್ಕಂತೆ ಸಂಗೀತ, ಸಾಹಿತ್ಯ, ನೃತ್ಯ ವಾಸ್ತುಶಿಲ್ಪ ಇತ್ಯಾದಿ ಮಾಧ್ಯಮಗಳ ಮುಖಾಂತರ ಅಭಿವ್ಯಕ್ತಿಗೊಳಿಸುವ ಅವಕಾಶ ಕೊಡುವ ಉದ್ದೇಶವನ್ನು ಹೊಂದಿರುತ್ತದೆ. ಈ ನಿಟ್ಟಿನಲ್ಲಿ ನೆಲಮಂಗಲ ಪ್ರದೇಶವು ಪ್ರಾಗೈತಿಹಾಸ ಕಾಲದಿಂದಲೂ ಸಾಂಸ್ಕೃತಿಕ ಅವಶೇಷಗಳನ್ನು ತುಂಬಿಸಿಕೊಂಡಿದ್ದು, ಇದರಡಿಯಲ್ಲಿ ಕಲೆ ಮತ್ತು ವಾಸ್ತುಶಿಲ್ಪಗಳು ಹಂತ ಹಂತವಾಗಿ ಬೆಳೆದುಬಂದಿವೆ.

ಪ್ರತಿಯೊಂದು ಕಟ್ಟಡಕ್ಕೆ ತನ್ನದೇ ಆದ ಆಕೃತಿ ಇರುತ್ತದೆ. ಅದು ಚೌಕ, ಆಯತ, ವೃತ್ತಾಕಾರವಾಗಿರಬಹುದು. "ಲಭ್ಯವಿರುವ ಜಾಗವನ್ನು ಕಲಾತ್ಮಕವಾಗಿ ಸಂಘಟಿಸುವುದು" ಎಂದು ವಾಸ್ತುಶಿಲ್ಪವನ್ನು ಕುರಿತು ವ್ಯಾಖ್ಯಾನಿಸಬಹುದು. ವಾಸ್ತುಶಿಲ್ಪವು ಒಂದು ಜಾಗವನ್ನು ವ್ಯವಸ್ಥೆಗೊಳಿಸಿ ಅದಕ್ಕೊಂದು ರೂಪ ಕೊಡುವ ಕಲೆ. ಪ್ರಯೋಜನದ ಜೊತೆಗೆ ಕಟ್ಟಡ ಸುಂದರವಾಗಿರಬೇಕು ಎಂಬ ಪ್ರಜ್ಞೆಯೂ ಒಳಗೊಂಡಿರಬೇಕು. ಒಟ್ಟಿನಲ್ಲಿ ಒಂದಲ್ಲ ಒಂದು ಅವಶ್ಯಕತೆ ಇದ್ದೇ ಇರುತ್ತದೆ. ಈ ವಾಸ್ತುಶಿಲ್ಪ ಕಲೆಯು ಐತಿಹಾಸಿಕ ದೇವಾಲಯ, ಮಸೀದಿ, ಗುಡಿ, ಚರ್ಚ್‌ಗಳಲ್ಲಿ ಅನಾವರಣಗೊಂಡಿರುತ್ತದೆ. ವಾಸ್ತುಶಿಲ್ಪವು ನಾಗರಶೈಲಿ, ದ್ರಾವಿಡ ಶೈಲಿ, ಮತ್ತು ವೇಸರ ಶೈಲಿಗಳಲ್ಲಿದ್ದು, ನಿರ್ಮಾಣಗೊಂಡಂತಹ ಕಟ್ಟಡವು ಈ ಯಾವುದೇ ಶೈಲಿಯನ್ನು ಅಳವಡಿಸಿಕೊಂಡಿರುತ್ತದೆ.

ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ನೆಲಮಂಗಲ ತಾಲ್ಲೂಕಿನ ದೇವಾಲಯಗಳು ವೈಶಿಷ್ಟ್ಯತೆಯಿಂದ ಕೂಡಿದ್ದು, ಇಲ್ಲಿ ಕೆಲವು ಆಯ್ದ ದೇವಾಲಯಗಳ ವಾಸ್ತುಶಿಲ್ಪದ ಅಧ್ಯಯನ ಕೈಗೊಳ್ಳಲಾಗಿದೆ.

ಸಾಂಸ್ಕೃತಿಕ ಇತಿಹಾಸದಲ್ಲಿ ನೆಲಮಂಗಲ ತಾಲ್ಲೂಕಿನ ಸ್ಥಾನವೂ ವಿಶಿಷ್ಟವಾಗಿದ್ದು, ಪ್ರಾಚೀನ ಕಾಲದಿಂದ ಹಿಡಿದು ಬಾಹ್ಯಕಾಶ ವಿಜ್ಞಾನ, ಮಾಹಿತಿ ವಿಜ್ಞಾನ, ಜೈವಿಕ ತಂತ್ರಜ್ಞಾನ, ವಿದ್ಯುನ್ಮಾನ ಯುಗದ ಆಧುನಿಕ ಕಾಲದವರೆಗೆ ಇಲ್ಲಿನ ಜನತೆ ತಮ್ಮ ಕಲೆಗಳ ಮೂಲಕ ದಾಖಲಿಸಿರುವ ಪರಿಯನ್ನು ಸೂಕ್ಷ್ಮವಾಗಿ ತಿಳಿಯಲು ಈ ಅಧ್ಯಾಯದಲ್ಲಿ ಪ್ರಯತ್ನಿಸಲಾಗಿದೆ.

### ೫.೨.೧. ನೆಲಮಂಗಲ

ಸಾಂಸ್ಕೃತಿಕ ಪರಂಪರೆಯಲ್ಲಿ ನೆಲಮಂಗಲ ಪ್ರದೇಶವು ಕೆಂದ್ರಸ್ಥಾನದಲ್ಲಿದ್ದು, ಕಲೆ ಮತ್ತು ವಾಸ್ತುಶಿಲ್ಪವನ್ನು ಪ್ರತಿಬಿಂಬಿಸುವಂತಹ ಅನೇಕ ದೇವಾಲಯಗಳನ್ನು ಒಳಗೊಂಡಿದೆ.

**ರುದ್ರೇಶ್ವರ ಸ್ವಾಮಿ ದೇವಾಲಯ**: ನೆಲಮಂಗಲದ ಅಡೇಪೇಟೆಯಲ್ಲಿರುವ ಈ ದೇವಾಲಯವು ಉತ್ತಾರಾಭಿಮುಖವಾಗಿದ್ದು, ಗರ್ಭಗುಡಿ, ಸುಖನಾಸಿಗಳಿಂದ ಕೂಡಿದೆ. ಇದು ಮೈಸೂರು ಶೈಲಿಯಲ್ಲಿದ್ದು ಎರಡು ಕೋಣೆಗಳನ್ನು ಹೊಂದಿದೆ. ಒಂದರಲ್ಲಿ ವೀರಭದ್ರ ಹಾಗೂ ಮತ್ತೊಂದರಲ್ಲಿ ಶಿವಲಿಂಗವಿದೆ. ಈಗ ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡಲಾಗಿದೆ. ಗರ್ಭಗುಡಿಯಲ್ಲಿ ವೀರಭದ್ರ ಮೂರ್ತಿ ಇದ್ದು ಅದರ ಕಿರೀಟದಲ್ಲಿ ಶಿವಲಿಂಗವಿದೆ. ಕಪ್ಪುಶಿಲೆಯ ಮೂರ್ತಿಯಾಗಿದ್ದು ಎಡ ಕೈಯಲ್ಲಿ ರುಂಡ ಮಾಲೆ, ಗುರಾಣಿ, ಬಲಕೈಯಲ್ಲಿ ಬಿಲ್ಲು, ಬಾಣ, ಆಯುಧಗಳನ್ನು ಹೊಂದಿದೆ. ಪ್ರಭಾವಳಿಯು ಇಲ್ಲಿ ಕಾಣಬರುವುದಿಲ್ಲ. ದ್ವಾರಪಾಲಕರ ಶಿಲ್ಪಗಳು ವಿಶಿಷ್ಟವಾಗಿವೆ. ಗರ್ಭಗುಡಿಯ ಬಾಗಿಲುವಾಡವು ಸರಳ ಕೆತ್ತನೆಯಿಂದ ಕೂಡಿದೆ. ಗಜಲಕ್ಷ್ಮಿಯನ್ನು ಅಲಂಕರಿಸಲಾಗಿದೆ. ನವರಂಗದ ಮಧ್ಯಭಾಗದಲ್ಲಿ ಭುವನೇಶ್ವರಿ ಶಿಲ್ಪವಿದೆ. ಕಂಭಗಳ ಮೇಲೆ ಎಲೆ ಮತ್ತು ಕಮಲಗಳ ಕೆತ್ತನೆ ಮೂಡಿ ಬಂದಿದೆ. ಅಷ್ಟಭುಜ ಮತ್ತುಚತುರ್ಭುಜದ ಮೇಲೆ ಬೋಧಿನಿ ಇದೆ. ಇಲ್ಲಿನ ಮೂರ್ತಿಗೆ ಆಗಮೋಕ್ತ ನಿತ್ಯ ಪೂಜೆ, ಮಹಾರುದ್ರಾಭಿಷೇಕ ನಿತ್ಯಾರ್ಚನೆ ಮಾಡಲಾಗುತ್ತದೆ. ಶಿವರಾತ್ರಿಯ ನಂತರ ರಥೋತ್ಸವ ನಡೆಯುತ್ತದೆ. ಈ ದೇವಾಲಯಕ್ಕೆ ಗದಿಗೆ ಗವಿಸಿದ್ದಪ್ಪ ಭೂಮಿಯನ್ನು ದಾನವಾಗಿ ನೀಡಿದ್ದಾರೆ.

**ಕಾಶೀವಿಶ್ವೇಶ್ವರ ಸ್ವಾಮಿ ದೇವಾಲಯ:** ನೆಲಮಂಗಲದ ಅಡೇಪೇಟೆ(ಪೇಟೆ ಬೀದಿ)ಯಲ್ಲಿರುವ ಕಾಶೀವಿಶ್ವೇಶ್ವರ ದೇವಾಲಯವನ್ನು ವಿಜಯನಗರಾನಂತರದ ಶೈಲಿಯಲ್ಲಿ ನಿರ್ಮಿಸಲಾಗಿದೆ. ಇಲ್ಲಿ ಕ್ರಿ.ಶ. ೧೭೪೩ರ ಶಾಸನವಿದೆ. ಇಮ್ಮಡಿ ಕೃಷ್ಣರಾಜ ಒಡೆಯರ ಆಳ್ವಿಕೆಯ ಕಾಲದಲ್ಲಿ ದಳವಾಯಿ ದೇವರಾಜಯ್ಯ ಮತ್ತು ಅವನ

ಸಹೋದರ ನಂಜರಾಜಯ್ಯನವರ ಕೈಗೆ ಅಧಿಕಾರ ಹಸ್ತಾಂತರಗೊಂಡಿದ್ದು, ಬಾಗೇನಹಳ್ಳಿ ಅಪಯ್ಯನ ಪುತ್ರ ತಿಪ್ಪಯ್ಯ ಈ ದೇವಾಲಯವನ್ನು ಕಟ್ಟಿಸಿದನೆಂದು ಈ ಶಾಸನ ತಿಳಿಸುತ್ತದೆ.[೧] ಬಾಗೇನಹಳ್ಳಿ ಎಂದರೆ ಈಗಿನ ಬಾಗೇಪಲ್ಲಿ ಎನ್ನಬಹುದು. ನೆಲಮಂಗಲದಲ್ಲಿ ಬಾಗೇಪಲ್ಲಿಯ ಮೂಲದ ವೈಶ್ಯ ಜನಾಂಗದವರೇ ನೆಲೆಸಿದ್ದು, ಇವರು ಕಾಶೀವಿಶ್ವೇಶ್ವರ ಸ್ವಾಮಿ ದೇವಾಲಯಕ್ಕೆ ದಾನ ದತ್ತಿಗಳನ್ನು ನೀಡಿದ್ದಾರೆ.

ಈ ದೇವಾಲಯದ ವಾಸ್ತು ಮತ್ತು ಭಿತ್ತಿಶಿಲ್ಪಗಳು ಹಳೆಯದಾಗಿವೆ. ಗರ್ಭಗುಡಿಯಲ್ಲಿ ಶಿವಲಿಂಗವನ್ನು ನೋಡಬಹುದಾಗಿದೆ. ಗರ್ಭಗುಡಿಯ ಬಾಗಿಲುವಾಡವನ್ನು ಗಜಲಕ್ಷ್ಮಿ, ದ್ವಾರಪಾಲಕರ ಶಿಲ್ಪಗಳ ಉಬ್ಬು ಕೆತ್ತನೆಯಿಂದ ಅಲಂಕೃತ ಮಾಡಲಾಗಿದೆ. ನವರಂಗದಲ್ಲಿ ನಾಲ್ಕು ಕಂಭಗಳಿವೆ. ಕಂಭಗಳಿಗೆ ಹೆಚ್ಚು ಅಲಂಕಾರವಿದೆ. ಇಲ್ಲಿ ಉಮಾಮಹೇಶ್ವರ, ಶಿವಲಿಂಗ, ಆನೆ, ವರಾಹ, ಗಣೇಶ, ಯಾಳ, ಮಾತೃದೇವತೆ, ದಕ್ಷ ಮೊದಲಾದ ಕೆತ್ತನೆಗಳಿವೆ. ದೇವಾಲಯದ ಮುಂಭಾಗದಲ್ಲಿ ದಕ್ಷ ಶಿಲ್ಪವಿದೆ. ಖಡ್ಗ, ಬಿಲ್ಲು, ಗುರಾಣಿ ಹಿಡಿದಿದ್ದಾನೆ. ಕಾಳಭೈರವ ಶಿಲ್ಪವಿದ್ದು ಸರ್ಪ, ನಾಯಿ ಚಿತ್ರವಿದೆ. ದ್ವಾರಬಂಧದಲ್ಲಿ ಶೈವ ದ್ವಾರಪಾಲಕರ ಶಿಲ್ಪವನ್ನು ಕೆತ್ತನೆ ಮಾಡಲಾಗಿದೆ. ಇಲ್ಲಿನ ಗರ್ಭಗುಡಿಯಲ್ಲಿರುವ ಶಿವಲಿಂಗವನ್ನು ಕಾಶಿಯಿಂದ ತಂದು ಪ್ರತಿಷ್ಠಾಪನೆ ಮಾಡಿರುವುದರಿಂದ ಕಾಶೀ ವಿಶ್ವೇಶ್ವರ ಸ್ವಾಮಿ ದೇವಾಲಯ ಎಂದು ಕರೆಯುವರು. ಗರ್ಭಗುಡಿಯ ಮೇಲಿರುವ ಗೋಪುರವು ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಾಣವಾಗಿದೆ.

**ವೆಂಕಟೇಶ್ವರ ದೇವಾಲಯ:** ನೆಲಮಂಗಲದ ಬಸವನಹಳ್ಳಿಯಲ್ಲಿ ನಿರ್ಮಾಣವಾಗಿರುವ ಈ ವೆಂಕಟೇಶ್ವರ ದೇವಾಲಯವು ವಿಜಯನಗರ ಶೈಲಿಯಲ್ಲಿದ್ದು ದ್ರಾವಿಡ ಶೈಲಿಯ ಪ್ರಭಾವವನ್ನು ಸೂಚಿಸುತ್ತದೆ. ಈ ದೇವಾಲಯವು ಪೂರ್ವಾಭಿಮುಖವಾಗಿದ್ದು ವಿಜಯನಗರದ ಕೊನೆಯ ದಿನಗಳ ಶೈಲಿಯ ಕಂಬಗಳು ನವರಂಗದಲ್ಲಿವೆ. ಕಂಬಗಳ ಮೇಲೆ ನಾಗಬಂಧಗಳಿವೆ. ಅಲ್ಲದೇ ಕಂಬದ ಮೇಲ್ಭಾಗದಲ್ಲಿ ಪುಷ್ಪಬೋದಿಗೆಯು ಇದೆ. ಮುಖಮಂಟಪವೂ ಇರುತ್ತದೆ. ವೆಂಕಟೇಶ್ವರ ದೇವಾಲಯದ ಹಿಂಭಾಗದಲ್ಲಿ ಚಿಕ್ಕ ದೇವಾಲಯವಿದ್ದು, ರಂಗನಾಥ ಸ್ವಾಮಿಯ ಪಶ್ಚಿಮಕ್ಕೆ ಮುಖಮಾಡಿ ಕುಳಿತಿರುವ ಆಕರ್ಷಕ ಶಿಲ್ಪವಿದೆ.[೨] ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡಲಾಗಿ, ಮೈಸೂರಿನ ಒಡೆಯರಾದ ಶ್ರೀಕಂಠದತ್ತ ಒಡೆಯರ್ ಅನೇಕ ಗ್ರಾಮಗಳನ್ನು ದಾನ-ದತ್ತಿಯಾಗಿ ನೀಡಿದ್ದಾರೆ. ಇಲ್ಲಿ ಪ್ರತಿವರ್ಷವೂ ಜಾತ್ರೆ ಉತ್ಸವಗಳು ನಡೆಯುತ್ತವೆ.

**ಮುಕ್ತಿನಾಥೇಶ್ವರ ದೇವಾಲಯ:** ನೆಲಮಂಗಲದಿಂದ ಸುಮಾರು ಮೂರು ಕಿ.ಮೀ. ದೂರದಲ್ಲಿರುವ ಒಂದು ಸಣ್ಣ ಗ್ರಾಮವಾದ ಭಿನ್ನಮಂಗಲದಲ್ಲಿ ಮುಕ್ತಿನಾಥೇಶ್ವರ ದೇವಾಲಯವಿದೆ. ಕ್ರಿ.ಶ. ೧೦೩೮ ರಲ್ಲಿ ರಾಜೇಂದ್ರ ಚೋಳನ ಕಾಲದಲ್ಲಿ ನಿರ್ಮಾಣವಾದ ಈ ಮುಕ್ತಿನಾಥೇಶ್ವರ ದೇವಾಲಯವು ಚೋಳರ ವಾಸ್ತುಶೈಲಿಯನ್ನು ಹೊಂದಿದ್ದು, ದ್ರಾವಿಡ ಶೈಲಿಯ ಪ್ರಭಾವವನ್ನು ಸೂಚಿಸುತ್ತದೆ. ಈ ದೇವಾಲಯವು ಪೂರ್ವಾಭಿಮುಖವಾಗಿದ್ದು ದೇವಾಲಯದ ಗರ್ಭಗೃಹವು ನಾಲ್ಕು ಮೂಲೆಗಳಲ್ಲೂ ನಾಲ್ಕು ಕಂಬಗಳನ್ನು ಹೊಂದಿದೆ. ಪಾಣೀಪೀಠವು ಚೌಕಾಕಾರದ್ದಾಗಿದೆ. ನವರಂಗದ ಕಂಬಗಳಲ್ಲಿನ ಶಿಲ್ಪಗಳನ್ನು ಗಮನಿಸಿದರೆ, ದೇವಾಲಯವು ವಿಜಯನಗರದ ಕಾಲದಲ್ಲಿ ಜೀರ್ಣೋದ್ಧಾರಗೊಂಡಿದೆ ಎಂದು ಹೇಳಬಹುದು. ಕುಳಿತಿರುವ ಭೈರವ, ಗಣಪತಿ ಹಾಗೂ ಮಹಿಷಾಸುರಮರ್ಧಿನಿಯ ಶಿಲ್ಪಗಳು ಇಲ್ಲಿವೆ. ಪ್ರವೇಶದ್ವಾರದಲ್ಲಿ ಎರಡು ಕಡೆಗಳಿಗೂ ಸೂರ್ಯ ಹಾಗೂ ಚಂದ್ರರ ಕೆತ್ತನೆಗಳಿವೆ. ಬಾಗಿಲುವಾಡದ ಮೇಲೆ ಎರಡೂ ಕಡೆಗಳಲ್ಲಿ ಕೆತ್ತನೆಗಳಿದ್ದು, ಸಂಗೀತವಾದ್ಯಗಳನ್ನು ನುಡಿಸುತ್ತಿರುವ

ಸಂಗೀತಗಾರರ ಭಾವನಾಭರಿತ ಶಿಲ್ಪಗಳಿವೆ. ದೇವಾಲಯದ ಹೊರಗೋಡೆಯ ಮೇಲೆ ಭಿತ್ತಿಗಳಲ್ಲಿ ಅಲಂಕಾರಿಕವಾಗಿ ಶಿಲ್ಪಗಳನ್ನು ಕೆತ್ತಲಾಗಿದೆ. ನಟರಾಜ, ಗಣಪತಿ, ಚಂದ್ರಶೇಖರ, ವಿಷ್ಣು, ಮಹಿಷನ ತಲೆಯ ಮೇಲೆ ನಿಂತಿರುವ ದುರ್ಗಾ, ವೇಣುಗೋಪಾಲ ಇನ್ನಿತರ ಶಿಲ್ಪಗಳನ್ನು ಕಾಣಬುಹದು.[೬] ಶೈವ ದೇವಾಲಯವಾಗಿದ್ದರೂ ವೈಷ್ಣವದ ಕುರುಹುಗಳನ್ನು ಕಾಣುತ್ತೇವೆ. ಗರ್ಭಗೃಹದ ಹಿಂಭಾಗದ ಮೂರ್ತಿ ಶಿವನು ವಿಷ್ಣುವಿನ ಲಕ್ಷಣವನ್ನು ಹೊಂದಿದ್ದಾನೆ. ಜಟಾ ಮುಕ್ತಟವಿದೆ. ಹಣೆಯಲ್ಲಿ ಮೂರನೆಯ ಕಣ್ಣು ಇದೆ. ನವರಂಗದ ಭುವನೇಶ್ವರಿಯಲ್ಲಿ ಶಿವ ಹಾಗೂ ದಿಕ್ಪಾಲಕರ ಶಿಲ್ಪಗಳಿವೆ. ದೇವಾಲಯದ ಎದುರಿಗೆ ಸುಮಾರು ಎಂಟು ಮೀಟರ್ ಎತ್ತರದ ದೀಪಸ್ತಂಭವೊಂದು ಇದೆ. ಇದರ ಪಕ್ಕದಲ್ಲೇ ಭಕ್ತನ ಶಿಲ್ಪವಿದೆ. ಕ್ರಿ.ಶ. ೧೧೧೦ರಲ್ಲಿ ಕುಲೋತ್ತುಂಗ ಚೋಳರಾಜನು ಈ ದೇವಾಲಯಕ್ಕೆ ನಕ್ಕೂರು ಗ್ರಾಮವನ್ನು ದಾನ ನೀಡಿದ ಶಾಸನ ಇಲ್ಲಿದೆ. ಹೀಗೆ ಮುಕ್ತಿನಾಥೇಶ್ವರ ದೇವಾಲಯವು ವಾಸ್ತುಶಿಲ್ಪದ ಮೇರು ವೈಭವದಿಂದ ಕೂಡಿದೆ. ಈ ದೇವಾಲಯವನ್ನು ಸರಿಯಾದ ರೀತಿ ಜೀರ್ಣೋದ್ಧಾರ ಮಾಡಿ, ವಾಸ್ತುಶಿಲ್ಪದ ಮೇರು ದೇವಾಲಯವೆಂದು ಘೋಷಿಸುವುದರ ಜೊತೆಗೆ ಅದರ ರಕ್ಷಣೆ ಆಗಬೇಕಾಗಿದೆ.

**೫.೨.೨. ಮಣ್ಣೆ**

ನೆಲಮಂಗಲ ತಾಲ್ಲೂಕಿಗೆ ಸೇರಿದ ಮಣ್ಣೆಯು ಪ್ರಾಚೀನ ಕಾಲದಿಂದಲೂ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಇದು ಸುಮಾರು ೮ ಮತ್ತು ೯ ನೇ ಶತಮಾನಗಳಲ್ಲಿ ಗಂಗರ ಪ್ರಮುಖ ರಾಜನೆಲೆ ಬೀಡಾಗಿತ್ತು. ಶಾಸನಗಳು ಇದನ್ನು 'ಮಾನ್ಯಪುರ' ಎಂದು ಉಲ್ಲೇಖಿಸಿವೆ. ಈ ಗ್ರಾಮದ ಪೂರ್ವಕ್ಕೆ ಹಾಗೂ ಉತ್ತರಕ್ಕೆ ಗಂಗರ ಕಾಲದ ಅನೇಕ ಸ್ಮಾರಕಗಳು, ದೇವಾಲಯಗಳು ಹಾಗೂ ಶಾಸನಗಳನ್ನು ಕಾಣಬಹುದು. ಇಲ್ಲಿ ಪ್ರಮುಖವಾಗಿ ಆಳ್ವಿಕೆ ಮಾಡಿದ ಗಂಗರು ದೇವಾಲಯಗಳ ವಾಸ್ತುಶಿಲ್ಪಕ್ಕೆ ದ್ರಾವಿಡ ಶೈಲಿಯನ್ನು ಅಳವಡಿಸಿಕೊಂಡಿದ್ದರು. ಇಲ್ಲಿನ ಪ್ರಮುಖವಾದ ದೇವಾಲಯಗಳೆಂದರೆ ಶ್ರೀವಿಜಯ ಜಿನಾಲಯ (ಸೂಳೆಯರ ಗುಡಿ), ಸೋಮೇಶ್ವರ ದೇವಾಲಯ, ಕಪಿಲೇಶ್ವರ ದೇವಾಲಯ ಮತ್ತು ಅಕ್ಕ-ತಂಗಿಯರ ಗುಡಿಗಳು.

**ಶ್ರೀವಿಜಯ ಜಿನಾಲಯ (ಸೂಳೆಯರ ಗುಡಿ ):** ಈ ಜಿನಾಲಯ ಮಣ್ಣೆ ಗ್ರಾಮದ ಮಧ್ಯಭಾಗದಲ್ಲಿದ್ದು, ಎತ್ತರವಾದ ಸ್ಥಳದಲ್ಲಿದೆ. ಪಶ್ಚಿಮಕ್ಕೆ ದ್ವಾರಬಾಗಿಲಿದ್ದು, ಪೂರ್ವ ಪಶ್ಚಿಮಕ್ಕೆ ಏಳು ಕಂಬಸಾಲುಗಳು, ಹಾಗೆಯೇ ಉತ್ತರ ದಕ್ಷಿಣಕ್ಕೂ ಏಳು ಕಂಬ ಸಾಲುಗಲಿದ್ದವು. ಆದರೆ ಇವುಗಳಲ್ಲಿ ಮೂರು-ನಾಲ್ಕು ಕಂಬಗಳು ಮಾತ್ರ ಉಳಿದಿವೆ. ಇದು ದ್ರಾವಿಡ ಶೈಲಿಯನ್ನು ಹೊಂದಿದೆ. ನವರಂಗದ ಮೇಲ್ಛಾವಣಿಯಲ್ಲಿ ಧರಣೇಂದ್ರ ಯಕ್ಷನ ಶಿಲ್ಪವಿದ್ದು, ಆಕರ್ಷಣೀಯವಾಗಿದೆ. ತಳಪಾಯವನ್ನು ಇಟ್ಟಿಗೆಗಳಿಂದ ಕಟ್ಟಿ ಅದರ ಮೇಲೆ ನಿಲುವಾದ ಬೋಧಿಗೆ ಕಲ್ಲು, ಅದರ ಮೇಲೆ ಸುಂದರವಾಗಿ ಕೆತ್ತಲ್ಪಟ್ಟ ಹಲವು ಸ್ತಂಭಗಳ ಮೇಲೆ ಮೇಲ್ಛಾವಣಿಯನ್ನು ಹೊತ್ತು ನಿಂತಿದೆ. ಇದು ರಾಷ್ಟ್ರಕೂಟರ ಕಾಲಕ್ಕೆ ಜಿನಾಲಯವಾಗಿ ನಾಟ್ಯಮಂಟಪವನ್ನೊಳಗೊಂಡದ್ದರಿಂದ ಇಲ್ಲಿ ನೃತ್ಯಸೇವೆಯೂ ನಡೆಯುತ್ತಿತ್ತು.[೭] ಈ ಕಾರಣದಿಂದಲೇ ಸೂಳೆಯರ ಗುಡಿ ಎಂಬ ಹೆಸರು ಬಂದಿದೆಯೆಂದು ಹೇಳಲಾಗಿದೆ. ಕ್ರಿ.ಶ. ೮೦೨ರ ಮಣ್ಣೆಯ ತಾಮ್ರಶಾಸನ ಈ ಜಿನಾಲಯಕ್ಕೆ ದೇವಭೋಗಕ್ಕಾಗಿ ದಾನ-ದತ್ತಿಗಳನ್ನು ನೀಡಿರುವುದನ್ನು ಉಲ್ಲೇಖಿಸಿದೆ.

**ಸೋಮೇಶ್ವರ ದೇವಾಲಯ:** ಮಣ್ಣೆ ಗ್ರಾಮದ ಪಶ್ಚಿಮ ಭಾಗಕ್ಕೆ ಸೋಮೇಶ್ವರ ದೇವಾಲಯವಿದೆ. ಈ ದೇವಾಲಯವು ಗಂಗರ ಆಳ್ವಿಕೆಯ ಅವಧಿಯಲ್ಲಿ ನಿರ್ಮಾಣವಾಗಿದ್ದು, ದ್ರಾವಿಡ ಶೈಲಿಯನ್ನು ಹೊಂದಿದೆ.

ಇತ್ತೀಚೆಗೆ ಈ ದೇವಾಲಯವು ಜೀರ್ಣೋದ್ಧಾರವಾಗಿದೆ. ಆದರೂ ಇಲ್ಲಿಯ ಶಿವಲಿಂಗ ಮಾತ್ರ ತುಂಬಾ ಹಳೆಯ ಕಾಲದ ಮೂರ್ತಿಯಾಗಿದೆ. ವಿಶೇಷವೆಂದರೆ ಗರ್ಭಗುಡಿಯು ತುಂಬಿದಂತೆ ಪೀಠವಿದ್ದು, ಸುಮಾರು ಐದೂವರೆಯಿಂದ ಆರು ಅಡಿಗಳವರೆಗಿರುವ ಈ ಈಶ್ವರಲಿಂಗದ ಮಾಟವು ಮುದ್ದಾಗಿದ್ದು, ಕನ್ನಡಿಯಂತೆ ಹೊಳೆಯುತ್ತಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವು ಗರ್ಭಗುಡಿ ಹಾಗೂ ನವರಂಗವನ್ನು ಹೊಂದಿದೆ.[೫] ದೇವಾಲಯದ ಪ್ರವೇಶದ್ವಾರದಲ್ಲಿ ಸಿಂಹದ ಉಬ್ಬುಶಿಲ್ಪಗಳಿವೆ. ದೇವಾಲಯದ ಮುಂದೆ ದುರ್ಗಿಯ ಶಿಲ್ಪವಿದ್ದು, ಇಲ್ಲಿ ಪ್ರತಿನಿತ್ಯ ಪೂಜಾಕಾರ್ಯಗಳು ನಡೆಯುತ್ತವೆ. ಲಿಂಗದ ಮುಂದೆ ಅಂಟಿಕೊಂಡಂತೆ ಕೆಲವೇ ಅಂಗುಲಗಳ ಸಮೀಪ ಬಸವನ ಮೂರ್ತಿ ಇದೆ. "ಅದು ಹಿಂದೆ ಲಿಂಗಕ್ಕೆ ತುಂಬಾ ದೂರವಾಗಿತ್ತು. ಈಗ ತೀರ ಸಮೀಪವಾಗುತ್ತಿದೆ" ಎಂದು ಅರ್ಚಕರೂ ಸೇರಿದಂತೆ ಹಿರಿಯರನ್ನೊಳಗೊಂಡಂತೆ ಎಲ್ಲರೂ ಹೇಳಿದ ಸೋಜಿಗದ ವಿಷಯವಾಗಿದೆ. ಅಲ್ಲದೇ ಲಿಂಗಕ್ಕೆ ಅಭಿಷೇಕ ಮಾಡಿದ ನೀರು ಎಲ್ಲಿಗೆ ಹೋಗತ್ತದೆ ಎಂಬುದು ತಿಳಿಯದಂತೆ ಶಿಲ್ಪಿಯು ಈ ಶಿಲ್ಪವನ್ನು ಕಡೆದಿದ್ದಾನೆ.

**ಕಪಿಲೇಶ್ವರ ದೇವಾಲಯ:** ಈ ದೇವಾಲಯವು ಊರಿನ ಪಶ್ಚಿಮ ಭಾಗದ ಚಿಕ್ಕೆರೆಯ ಏರಿಯ ಪ್ರಾರಂಭದಲ್ಲಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯದ ದ್ವಾರ ಬಾಗಿಲಿನ ಇಕ್ಕೆಲಗಳಲ್ಲಿ ಸುಂದರವಾದ ದ್ವಾರಪಾಲಕರ ಶಿಲ್ಪ ಆಕರ್ಷಕವಾಗಿದೆ. ಈ ದೇಗುಲದ ಉತ್ತರ ಮತ್ತು ದಕ್ಷಿಣದ ಬದಿಗಳಲ್ಲಿರುವ ಜಾಲಂಧ್ರಗಳು ಶಿಲ್ಪಕಲೆಗೆ ಮೆರಗು ನೀಡಿವೆ.[೬] ದೇವಾಲಯದ ಗರ್ಭಗುಡಿ ಹಾಳಾಗಿದ್ದು, ಇತ್ತೀಚೆಗೆ ಅದನ್ನು ಕಟ್ಟಿದ್ದಾರೆ. ಈ ದೇವಾಲಯದ ತಳಪಾಯವನ್ನು ಇಟ್ಟಿಗೆಗಳಿಂದ ಕಟ್ಟಿದ್ದು ಅದರ ಮೇಲೆ ಹಾಸುಗಲ್ಲನ್ನು ಹಾಕಿ ನಂತರ ಗೋಡೆ ನಿರ್ಮಾಣ ಮಾಡಿದ್ದಾರೆ. ಇಲ್ಲಿನ ಶಿವಲಿಂಗವನ್ನು ಬೇರೆಡೆ ಒಯ್ದುಬಿಟ್ಟಿದ್ದಾರೆ. ಈಗ ಶಿಥಿಲವಾಗುತ್ತಿರುವ ಈ ದೇವಾಲಯವನ್ನು ರಕ್ಷಿಸಬೇಕಿದೆ.

**ಅಕ್ಕ-ತಂಗಿಯರ ಗುಡಿಗಳು :** ದಪ್ಪದಾದ ಕಲ್ಲು ಚಪ್ಪಡಿಗಳನ್ನು ಬಳಸಿ, ದ್ರಾವಿಡ ಶೈಲಿಯಲ್ಲಿ ಈ ದೇವಾಲಯಗಳನ್ನು ಕಪಿಲೇಶ್ವರ ದೇವಾಲಯದ ಎದುರಿನಲ್ಲಿಯೇ ಪೂರ್ವಕ್ಕೆ ನಿರ್ಮಿಸಲ್ಪಟ್ಟಿದೆ. ಇವುಗಳಲ್ಲಿ ಒಂದು ಸಂಪೂರ್ಣವಾಗಿ ಹಾಳಾಗಿದೆ. ಇನ್ನೊಂದು ಹಾಗೆಯೇ ಉಳಿದಿದ್ದು, ಈ ದೇವಾಲಯವನ್ನು ಹೊರಭಾಗದಿಂದ ನೋಡಿದಾಗ ವಿಶಾಲವಾಗಿ ಕಾಣುತ್ತದಾದರೂ ಒಳಹೊಕ್ಕು ನೋಡಿದಾಗ ಹತ್ತು ಅಡಿ ಮಾತ್ರ ಉದ್ದಗಲವಿದೆ. ಗರ್ಭಗೃಹ, ಅಂತರಾಳ ಮಾತ್ರ ಉಳಿದಿದೆ. ಈ ದೇವಾಲಯವು ಪೂರ್ಣವಾಗಿರಲಿಲ್ಲ ಎಂಬ ಸಂಗತಿ ಇದರ ಗೋಡೆಯ ಮೇಲಿರುವ ಅಪೂರ್ಣ ಕೆತ್ತನೆಗಳಿಂದ ತಿಳಿಯುತ್ತದೆ. ಇದರ ಗೋಡೆಯ ದಪ್ಪ ಸುಮಾರು ಐದು ಅಡಿಗೂ ಹೆಚ್ಚಿದೆ. ಈ ದೇವಾಲಯದ ಮೂಲೆಯು ಉಬ್ಬುಕಂಬಗಳನ್ನು ಸಿಂಹಪೀಠದ ಕಂಬಗಳಂತೆ ಕೆತ್ತಲು ಪ್ರಯತ್ನಿಸಿರುವಂತಿದ್ದು ಕಲ್ಲನ್ನು ಕಡೆಯದೆ ಬಿಟ್ಟಿರುತ್ತಾರೆ. ಬೆಂಗಳೂರಿನ ಶಾಂತಲಾ ಸ್ಕಿಲ್ಕ್ ಹೌಸಿನಲ್ಲಿ ತಂದಿಟ್ಟಿರುವ ಸಿಂಹಪೀಠದ ಕಂಬಗಳು ಇಲ್ಲಿಯವು ಎಂದು ಹೇಳುತ್ತಾರೆ.[೭] ಇಲ್ಲಿ ಸಿಂಹಪೀಠ ಸ್ತಂಭಗಳು ಮತ್ತು ಸಿಂಹಗಳ ಶಿಲ್ಪಗಳನ್ನುಳ್ಳ ಗರ್ಭಗೃಹದ ಗೋಡೆಯಿರುವುದರಿಂದ ಈ ದೇವಾಲಯ ಪಲ್ಲವರ ಪ್ರಭಾವದಲ್ಲಿ ರಚಿತವಾದ ದೇವಾಲಯವಾಗಿದ್ದು, ಒಂಭತ್ತನೇ ಶತಮಾನದ ಪೂರ್ವಾರ್ಧದಲ್ಲಿಯೇ ರಚಿತವಾಗಿರಬಹುದು. ಹೊರಭಾಗದ ಮೇಲ್ಛಾವಣಿಯ ಕೆಳಭಾಗದಲ್ಲಿ ಕೂರ್ಮ, ಹಂಸ ಮುಂತಾದ ಸುಂದರವಾದ ಶಿಲ್ಪಕಲಾಕೃತಿಗಳ ಸರಣಿಯಿದೆ.

ಮಣ್ಣೆಯಲ್ಲಿ ಈ ವಾಸ್ತು ಅವಶೇಷಗಳಲ್ಲದೇ ಕೆರೆಯ ಕಟ್ಟೆಯ ಮೇಲೆ ಸಪ್ತಮಾತೃಕೆಯರ ಉಬ್ಬುಶಿಲ್ಪಗಳು ಮತ್ತು ಸೂರ್ಯನ ವಿಗ್ರಹವಿದೆ. ಮಣ್ಣೆಯ ಜನಗಳು ಹಸುಗೂಸುಗಳಿಗೇನಾದರೂ ನೆಗಡಿ ಮುಂತಾದ

ವಾತಗಳಾದಲ್ಲಿ ಈ ವಿಗ್ರಹಕ್ಕೆ ಹಾಲು ಮೊಸರು ತನಿ ಎರೆಯುತ್ತಾರೆ ಎಂಬ ಪ್ರತೀತಿ ಇದೆ. ಗಣಪತಿ ವಿಗ್ರಹ, ಬಹುಸುಂದರ ಮತ್ತು ಎತ್ತರವಾದ ಈಶ್ವರ ಲಿಂಗ, ವೀರಶಿಲೆಗಳು, ಭೈರವ ಜಿನಮೂರ್ತಿಗಳಂತಹ ಶಿಲ್ಪ ಕಲಾಕೃತಿಗಳನ್ನು ಮಣ್ಣೆಯಲ್ಲಿ ಕಾಣಬಹುದು.[೮] ಮಹಿಷಾಸುರಮರ್ಧಿನಿಯ ಅವತಾರವಾದ ಮಣ್ಣೆಮ್ಮನ ಗುಡಿಯೂ ಇದೆ.

ಇಂದು ಮಣ್ಣೆಯ ದೇವಾಲಯಗಳು ಜನರ ನಿರ್ಲಕ್ಷ್ಯಕ್ಕೆ ಒಳಗಾಗಿ ರಕ್ಷಣೆ ಇಲ್ಲದೇ ನಾಶವಾಗುತ್ತಿವೆ. ಊರಿನ ಜನಕ್ಕೆ ಇರುವ ದೇವಾಲಯಗಳು ಬಿದ್ದು ಹೋದರೆ ಕಲ್ಲು ಇಟ್ಟಿಗೆ ಮನೆಕಟ್ಟಲು ದೊರೆಯಬಹುದೆಂಬ ಆಸೆಯಿಂದ ಇವುಗಳ ರಕ್ಷಣೆ ಕಡೆಗೆ ಗಮನ ಹರಿಸದಿರುವುದು ವಿಷಾದದ ಸಂಗತಿ.

### ೫.೨.೩ ಶಿವಗಂಗೆ

ಶಿವಗಂಗೆಯು ನೆಲಮಂಗಲ ತಾಲ್ಲೂಕಿನ ಪ್ರಸಿದ್ಧ ಯಾತ್ರಾಸ್ಥಳವಾಗಿದೆ. ಪೌರಾಣಿಕ ಕಥೆಗಳೊಂದಿಗೆ ಸಂಬಂಧ ಹೊಂದಿರುವ ಶಿವಗಂಗೆಯನ್ನು 'ದಕ್ಷಿಣದ ಕಾಶಿ' ಎಂದೂ ಕರೆಯಲಾಗುತ್ತದೆ. ಶಿವಗಂಗೆ ಬೆಟ್ಟವು ಬೃಹತ್ತಾದ ಬಂಡೆಗಳು, ಮರಗಿಡಗಳು ಆವರಿಸಿಕೊಂಡಂತೆ ನೈಸರ್ಗಿಕ ಗುಹೆಗಳನ್ನು ಒಳಗೊಂಡಿರುವುದು. ಇದರಿಂದ ಶಿವಗಂಗೆಯ ಬೆಟ್ಟದ ಮೇಲೆ ೧೨ನೇ ಶತಮಾನದಲ್ಲಿ ಹೊಯ್ಸಳರ ಪ್ರೋತ್ಸಾಹದಿಂದ ಅಭಿವೃದ್ಧಿಗೆ ಬಂದ ಗಂಗಾಧರೇಶ್ವರ ಮತ್ತು ಹೊನ್ನಾದೇವಿ ದೇವಾಲಯಗಳು ನೈಸರ್ಗಿಕ ಗುಹಾಲಯಗಳಲ್ಲಿ ಬಹಳ ಮುಖ್ಯವಾಗಿವೆ. ಈ ದೇವಾಲಯಗಳು ಗುಹಾ ವಾಸ್ತುಶಿಲ್ಪಕ್ಕೆ ಒಳ್ಳೆಯ ಮಾದರಿಗಳಾಗಿವೆ.

**ಗಂಗಾಧರೇಶ್ವರ ದೇವಾಲಯ** ಗಂಗಾಧರೇಶ್ವರ ದೇವಾಲಯವು ಉತ್ತರ ಹಾಗೂ ಪೂರ್ವದಿಕ್ಕಿನಲ್ಲಿ ಮಹಾದ್ವಾರಗಳನ್ನು ಹೊಂದಿರುವ ದೊಡ್ಡ ಕಟ್ಟಡವಾಗಿದೆ. ಎರಡೂ ಮಹಾದ್ವಾರಗಳಿಗೆ ಗೋಪುರಗಳಿವೆ. ಗಂಗಾಧರೇಶ್ವರ ದೇವಾಲಯದ ನವರಂಗದಲ್ಲಿರುವ ಕಂಬಗಳು ಹೊಯ್ಸಳ ಶೈಲಿಯಲ್ಲಿವೆ. ಗರ್ಭಗುಡಿಯು ನೈಜ ಗವಿಯಾಗಿದ್ದು, ವೃತ್ತಾಕಾರದ ಪಾಣಿಪಟ್ಟದ ಮೇಲೆ ಲಿಂಗವಿದೆ. ಗರ್ಭಗುಡಿಯ ಈ ಲಿಂಗಕ್ಕೆ ತುಪ್ಪ ಅಭಿಷೇಕ ಮಾಡಿದರೆ ಬೆಣ್ಣೆಯಾಗುತ್ತದೆ ಎಂಬುದು ಜನರ ನಂಬಿಕೆಯಾಗಿದೆ. ಗರ್ಭಗುಡಿಯ ಬಾಗಿಲಲ್ಲಿ ಭದ್ರಬಾಹು, ರುದ್ರಪಾದರೆಂಬ ದ್ವಾರಭದ್ರರ ಶಿಲ್ಪಗಳಿವೆ. ಅದೇ ಗರ್ಭಗುಡಿಯ ಎದುರಿಗೆ ಹಿರಿಯ ಕೆಂಪೇಗೌಡ ಹಾಗೂ ಅವನ ಸಹೋದರರ ವಿಗ್ರಹಗಳಿವೆ. ಇಲ್ಲಿಯ ಕೋಣೆಯೊಂದು ದೇವಸ್ಥಾನದ ಖಜಾನೆಯಾಗಿದ್ದು, ಪ್ರವೇಶದಲ್ಲಿ ಖಜಾನೆ ಗಣಪತಿಯ ವಿಗ್ರಹವು ಇದೆ. ಮುಂದೆ ಕೃಷ್ಣದೇವರಾಯನ ಕಾಲದ ಶಾಸನಗಳನ್ನು ಹೊಂದಿದ ನಂದಿ ಮಂಟಪವಿದೆ. ಪಕ್ಕದಲ್ಲಿ ಕಲ್ಯಾಣಮಂಟಪವಿದ್ದು, ನಾಲ್ಕು ನಯವಾದ ಕಂಬಗಳ ಆಧಾರದ ಮೇಲಿದೆ. ಅಪರೂಪದ ಸಪ್ತಮಾತೃಕೆಯರ ಶಿಲ್ಪಗಳು, ಅಷ್ಟದಿಕ್ಪಾಲಕರು, ಋಷಿಗಳು, ಸಂಗೀತಗಾರರು ಇನ್ನಿತರರು ಗಿರಿಜಾಕಲ್ಯಾಣದ ಸಂದರ್ಭದಲ್ಲಿ ನೆರೆದಿರುವ ಪ್ರಸಂಗದ ಶಿಲ್ಪಗಳಿವೆ.[೯] ವಿಗ್ರಹದ ಎದುರಿಗೆ ದುರ್ಗಿ, ಬಲಭಾಗದಲ್ಲಿ ಗಣಪತಿಯ ವಿಗ್ರಹ, ತಾಂಡವೇಶ್ವರನ ಎರಡು ಭಿನ್ನ ವಿಗ್ರಹಗಳಿವೆ. ಗುಹೆಯಲ್ಲಿ ಮಹಿಷಾಸುರಮರ್ಧಿನಿ, ನಾರಾಯಣರ ಮೂರ್ತಿಗಳು ಮಾತ್ರವಲ್ಲದೇ, ಅಂದವಾದ ಕೆತ್ತನೆಯ ಭೈರವ ಹಾಗೂ ಗಣಪತಿಯ ಮೂರ್ತಿಗಳೂ ಇವೆ.

**ಹೊನ್ನಾದೇವಿ ದೇವಾಲಯ:** ಗಂಗಾಧರೇಶ್ವರ ದೇವಾಲಯದ ಕೆಳಗೆ ಇರುವ ಹೊನ್ನಾದೇವಿ ಗುಹಾ ದೇವಾಲಯವು ಪೂರ್ವಾಭಿಮುಖವಾಗಿದೆ. ಆಧಾರ ಪೀಠದ ಮೇಲಿನ ದೇವಿ ವಿಗ್ರಹವು ಇಬ್ಬರು ರಾಕ್ಷಸರನ್ನು ನಾಶ ಮಾಡುತ್ತಿರುವ ಭಂಗಿಯಲ್ಲಿದೆ. ದೇವಿಯ ಶಿಲ್ಪವು ಎಂಟು ಕೈಗಳನ್ನು ಹೊಂದಿದ್ದು, ಪ್ರತಿಯೊಂದು ಕೈಯಲ್ಲಿ

ಗಂಟೆ, ಶಂಖ, ಚಕ್ರ, ಗದೆ, ಖಡ್ಗ, ಗುರಾಣಿ, ತ್ರಿಶೂಲ, ಪಾನಪಾತ್ರೆಯನ್ನು ಹಿಡಿದು ನಿಂತಿದ್ದಾಳೆ. ಪಾದಗಳಿಂದ ಚಂಡ-ಮುಂಡರನ್ನು ತುಳಿಯುತ್ತಿದ್ದಾಳೆ. ಗಂಡಬೇರುಂಡದ ಕಿರೀಟ ಧರಿಸಿದ್ದಾಳೆ. ಕೊರಳಲ್ಲಿ ರುಂಡಮಾಲೆ, ಕೋರೆಹಲ್ಲುಗಳು ಹೊರಚಾಚಿರುವ ನಾಲಿಗೆ ಇದೆ. ಈಕೆಯ ರಾಕ್ಷಸವಧೆಯ ಉಗ್ರರೂಪ ನೋಡಿ ದೇಗುಲಕ್ಕೆ ಜನ ಬರಲು ಹೆದರುತ್ತಿದ್ದರಂತೆ. ಆಗ ಶ್ರೀ ಉಜ್ಜಯಿನಿ ಪೀಠದ ಶ್ರೀ ಜಗದ್ಗುರು ಮರುಳಸಿದ್ಧರು ಬಂದು ದೇವಿಗೆ ಉಗ್ರರೂಪ ಬಿಟ್ಟು ಶಾಂತಳಾಗು ಎಂದಾಗ, ಶಾಂತರೂಪಿ ಆದಳಂತೆ.[೧೦] ಇದಕ್ಕೆ ಪೂರಕವಾಗಿ ಹೊನ್ನಮ್ಮ ಗವಿಮಠವಿದೆ. ಈ ಮಠದ ಒಳಗಡೆ ಈಕೆಗೆ ಸಂಬಂಧಿಸಿದಂತೆ ಪ್ರತ್ಯೇಕ ಶಿಲ್ಪವಿದೆ. ರುಂಡಮಾಲೆ ಧಾರಿಣಿ, ಸ್ತನನಾಗಬಂಧವಿದೆ. ಶಿವಲಿಂಗದಡಿಯಲ್ಲಿ ಬಲಹಸ್ತೆಯಾಗಿ ಗಜಲಕ್ಷ್ಮಿಯಂತೆ ಆಸೀನಳಾದ ಶಿಲ್ಪ ಅದಾಗಿದೆ.

**ಮೇಲಣಗವಿ ಮಠ :** ಮಠಗಳೂ ಸಹ ತನ್ನದೇ ಆದ ವಾಸ್ತುಶೈಲಿಯನ್ನು ಹೊಂದಿದ್ದವು. ಅದರಂತೆ ಮೇಲಣಗವಿ ಮಠವು ಒಂದಾಗಿದೆ. ಮೇಲಣಗವಿ ಮಠವು ಶಿವಗಂಗೆಯಲ್ಲಿ ರೇಣುಕಾಚಾರ್ಯರಿಂದ ಸ್ಥಾಪಿಸಲ್ಪಟ್ಟಿದೆ. ಇದು ಕೂಡ ತನ್ನದೇ ಆದ ವಾಸ್ತುಶಿಲ್ಪವನ್ನು ಹೊಂದಿದೆ. ಗವಿಯ ದ್ವಾರದಲ್ಲಿ ಗಾರೆ ಗೋಪುರವಿದೆ. ಗೋಪುರದಲ್ಲಿ ಯಾವ ವಿಗ್ರಹವೂ ಇರದೇ ಸಮಾಧಿಯ ಕುರುಹು ಇದೆ. ಗರ್ಭಗುಡಿಯಲ್ಲಿ ವೀರಭದ್ರಸ್ವಾಮಿ ಸ್ಥಾಪನೆಯ ಹತ್ತಿರ 'ರುದ್ರಮುನಿ' ಸ್ವಾಮಿಗಳ ಐಕ್ಯಸ್ಥಾನದ ಗದ್ದುಗೆ ಇದೆ. ಈ ಮಠದ ದ್ವಾರದ ಶಿರೋಭಾಗದಲ್ಲಿ 'ಬಸವ ಲಿಂಗ' ಉಬ್ಬುಶಿಲ್ಪವಿದೆ. ಗಜಲಕ್ಷ್ಮಿಯ ಕೆತ್ತನೆ ಸುತ್ತಲೂ ಸುಂದರವಾದ ಬಳ್ಳಿಗಳನ್ನು ಬಿಡಿಸಿದ್ದಾರೆ. ಕಾಡುಪ್ರಾಣಿಗಳು ನುಗ್ಗದಂತೆ ಬಾಗಿಲನ್ನು ವ್ಯವಸ್ಥೆ ಮಾಡಲಾಗಿದೆ. ಸುರಂಗಕ್ಕೆ ಹೋದಂತೆ ನಡೆದು ದ್ವಾರಬಾಗಿಲಿನಿಂದ ನವರಂಗಕ್ಕೆ ಹೋಗಬೇಕು. ನವರಂಗದಿಂದ ಗರ್ಭಗೃಹದ ಪ್ರದಕ್ಷಿಣೆಗೆ ಒಂಭತ್ತು ಮೆಟ್ಟಿಲುಗಳಿವೆ. ಮಧ್ಯದಲ್ಲಿ ವೀರಭದ್ರಸ್ವಾಮಿಯನ್ನು ಪ್ರತಿಷ್ಠೆ ಮಾಡಲಾಗಿದೆ. ಇದರ ಹಿಂಭಾಗಕ್ಕೆ ಒಳಕಲ್ಲು ತೀರ್ಥವಿದೆ. ವೀರಭದ್ರಸ್ವಾಮಿ ಗುಡಿಯ ಎಡಬಲಭಾಗದಲ್ಲಿ ದ್ವಾರಪಾಲಕರ ಕೆತ್ತನೆ ಇದೆ. ಇತ್ತೀಚೆಗೆ ರೇಣುಕರ ಮತ್ತು ಗಣಪತಿ ವಿಗ್ರಹ ಸ್ಥಾಪನೆಯಾಗಿದೆ.[೧೧] ಸುಂದರವಾದ ವಾಸ್ತುವಿನ್ಯಾಸವನ್ನು ಹೊಂದಿರುವ ಮಠವಾಗಿದೆ. ಮಠದ ಮುಂಭಾಗದಲ್ಲಿ ಉಳಿದಿರುವ ಕಂಬಗಳಲ್ಲಿ ಸುಂದರವಾದ ಕೆತ್ತನೆ ಇದ್ದು ಪದ್ಮ, ಶಿವಯೋಗಿ, ಗಿರಿಜಾಕಲ್ಯಾಣ, ಶಿವಲಿಂಗ, ಭೈರವ, ನಂದಿ, ಶಿವ, ಪಾರ್ವತಿ, ಅಗ್ನಿ, ಗಣಪತಿ, ಧಾರೆಮಂಟಪ ಮುಂತಾದ ಉಬ್ಬುಶಿಲ್ಪಗಳಿವೆ. ಈ ರೀತಿಯಾಗಿ ಈ ಮಠವು ತನ್ನದೇ ಆದ ಕಲಾಶೈಲಿಯನ್ನು ಒಳಗೊಂಡಿದೆ.

**೫.೨.೪. ನಿಜಗಲ್ಲು**

ನೆಲಮಂಗಲ ತಾಲ್ಲೂಕಿನಲ್ಲಿರುವ ನಿಜಗಲ್ಲು ಹೊಯ್ಸಳರ ಕಾಲಕ್ಕೆ ಪ್ರಸಿದ್ಧಿಯನ್ನು ಪಡೆಯಿತು. ಪುರವಾಗಿ ವಾಣಿಜ್ಯ ಕೇಂದ್ರದೊಂದಿಗೆ ಸಂಬಂಧವಿದ್ದರೂ ಅನೇಕ ದೇವಾಲಯಗಳು ಇಲ್ಲಿ ನಿರ್ಮಾಣವಾಗಿವೆ.

**ಉದ್ಭಾನ ವೀರಭದ್ರಸ್ವಾಮಿ ದೇವಾಲಯ:** ನಿಜಗಲ್ಲು ಬೆಟ್ಟದ ಮೇಲಿರುವ ಈ ದೇವಾಲಯವು ಪೂರ್ವಾಭಿಮುಖವಾಗಿದೆ. ಇಲ್ಲಿನ ದೇವಾಲಯದ ವೀರಭದ್ರ ಮೂರ್ತಿಯು ೧೨ ಅಡಿ ಉದ್ದವಿದ್ದು, ಬೇರೆ ಎಲ್ಲಾ ವೀರಭದ್ರ ಮೂರ್ತಿಗಳಿಗಿಂತ ದೊಡ್ಡದಾಗಿದೆ. ಆದುದರಿಂದ ಉದ್ಭಾನ ವೀರಭದ್ರ ಎಂದು ಕರೆಯಲಾಗಿದೆ. ಶಿಲ್ಪಲಕ್ಷಣಗಳು ಇಲ್ಲಿ ವಿಶೇಷವಾಗಿವೆ. ಸಾಮಾನ್ಯವಾಗಿ ವೀರಭದ್ರ ಸಮಭಂಗಿಯಲ್ಲಿ ನಿಂತಿರುತ್ತಾನೆ. ಆದರೆ ಇಲ್ಲಿ ಎಡಗಾಲನ್ನು ಮುಂದಿಟ್ಟಿದ್ದಾನೆ. ಪ್ರತ್ಯಾಲೀಢ ಆಸನವಾಗಿದೆ. ಪ್ರಭಾವಳಿಗೆ ಚಕ್ರವಿದೆ. ಕೈಯಲ್ಲಿ ಖಡ್ಗ, ರುಂಡಮಾಲೆ, ಕತ್ತಿ, ಬಾಣ, ಗುರಾಣಿ ಆಯುಧಗಳಿವೆ. ಕಂಠಿಹಾರ, ಉಪವೀತ ಎದೆಪಟ್ಟಿ, ಜಡಮುಖ, ಶಿವಲಿಂಗ,

ವಸ್ತ್ರ-ಚಲ್ಲಣ, ಅಲಂಕಾರವಾಗಿವೆ. ಅಂತರಾಳದಲ್ಲಿ ಯಾವುದೇ ಅಲಂಕಾರವಿಲ್ಲ. ಇಲ್ಲಿ ಯುಗಾದಿಯ ಸಮಯದಲ್ಲಿ ಜಾತ್ರೆ ಉತ್ಸವಗಳು ನಡೆಯುತ್ತವೆ.

**ಪರಮೇಶ್ವರ ದೇವಾಲಯ:** ಈ ದೇವಲಾಯವು ಪೂರ್ವಾಭಿಮುಖವಾಗಿದ್ದು, ಗರ್ಭಗೃಹ ಮತ್ತು ಸಭಾಮಂಟಪವು ಒಂದು ದೊಡ್ಡ ಬಂಡೆಯ ಕೆಳಗಿದೆ. ಗರ್ಭಗೃಹದ ಒಳಗೆ ಸುಂದರವಾದ ಕಪ್ಪುಶಿಲೆಯ ಶಿವಲಿಂಗವಿದೆ. ಬೃಹತ್ತಾಗಿರುವ ಬಂಡೆಯ ಕೆಳಗಡೆ ಇರುವುದರಿಂದ, ಇದು ಮೂಲರೂಪದಲ್ಲಿರುವುದೇ ಇದರ ವೈಶಿಷ್ಟ್ಯವಾಗಿದೆ. ಬಲಭಾಗದಲ್ಲಿ ಬಾಣಲಿಂಗವು ಪಾಣಿಪೀಠದ ಮೇಲಿದೆ. ಎಡಕ್ಕೆ ಜಲಧಾರೆಯಿದೆ. ಇದು ಗಂಗರ ಕಾಲದ ಶೈಲಿಯ ಲಕ್ಷಣವಾಗಿದೆ. ಉತ್ಸವಮೂರ್ತಿಯು ಸಮಭಂಗಿಯಲ್ಲಿದೆ. ಈ ದೇವಾಲಯದ ಪೂಜಾ ವ್ಯವಸ್ಥೆಗೆ ಹೊಯ್ಸಳರ ಕಂಬಯ್ಯ ದಣಾಯಕನು ಕೆರೆಯೊಂದನ್ನು ಕಟ್ಟಿಸಿ ಆದಾಯ ಬರುವಂತೆ ಮಾಡಿದನು ಎಂಬುದನ್ನು ಕ್ರಿ.ಶ. ೧೨೮೮ರ ಶಿಲಾಶಾಸನ ತಿಳಿಸಿದೆ.[೧೫] ಇಲ್ಲಿನ ದೇವಾಲಯಕ್ಕೆ ದಾನ-ದತ್ತಿಗಳನ್ನು ನೀಡಿರುವುದನ್ನು ಗಮನಿಸಬಹುದು.

**೫.೨.೫. ತ್ಯಾಮಗೊಂಡ್ಲು**

ನೆಲಮಂಗಲದಿಂದ ಹನ್ನೆರಡು ಕಿ.ಮೀ. ದೂರದಲ್ಲಿರುವ ಪ್ರಸಿದ್ಧ ವಾಣಿಜ್ಯ ಕೇಂದ್ರವಾದ ತ್ಯಾಮಗೊಂಡ್ಲುವಿನಲ್ಲಿಯೂ ದೇವಾಲಯಗಳಿದ್ದು, ವಾಸ್ತುಶಿಲ್ಪ ಮತ್ತು ಭಿತ್ತಿಚಿತ್ರಗಳಿಗೆ ಹೆಸರಾಗಿವೆ.

**ಕಾಶಿ ವಿಶ್ವನಾಥ ದೇವಾಲಯ:** ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ಗರ್ಭಗೃಹದಲ್ಲಿ ಕಪ್ಪುಶಿಲೆಯ ಲಿಂಗವನ್ನು ಹೊಂದಿದೆ. ಈ ಲಿಂಗವನ್ನು ವಿದ್ವಾಂಸ ಕಾಶಿನರಸಿಂಹಭಟ್ಟರು ವಾರಣಾಸಿಯಿಂದ ಇಲ್ಲಿ ಪ್ರತಿಷ್ಠಾಪಿಸಿದ್ದಾರೆ. ಈ ದೇವಾಲಯದಲ್ಲಿ ಲಕ್ಷ್ಮೀನಾರಾಯಣ, ಗಣಪತಿ, ಪಾರ್ವತಿ, ರಾಮ ಮೂರ್ತಿಗಳಿವೆ. ನವರಂಗದ ಕಂಬಗಳ ಮೇಲೆ ಆನೆ, ವರಾಹ, ದಕ್ಷನ ಶಿಲ್ಪಗಳನ್ನು ಕಾಣಬಹುದು.

**ಪಟ್ಟಲದಮ್ಮನ ದೇವಾಲಯ:** ಪಟ್ಟಲದಮ್ಮನ ದೇಗುಲ ಗರ್ಭಗೃಹ ಮತ್ತು ಹಜಾರವನ್ನೊಳಗೊಂಡಿದ್ದು, ಗರ್ಭಗೃಹದ ಇಕ್ಕೆಲದ ಭಿತ್ತಿ ಮತ್ತು ಅದರ ಮೇಲ್ಚಾವಣಿಗೆ ಆಧಾರವಾಗಿರುವ ಅಡ್ಡಪಟ್ಟಿಯಂತಹ ಜಂತಿಯನ್ನು ಚಿತ್ರಗಳಿಂದ ಅಲಂಕರಿಸಲಾಗಿದೆ. ಗರ್ಭಾಂಕಣದ ಮೇಲ್ಚಾವಣಿಗೆ ಆಧಾರವಾಗಿರುವ ಜಂತಿಯೊಂದರ ಮೇಲೆ ಆರಾಧ್ಯ ದೇವತೆಯಾದ ಪಟ್ಟಲದಮ್ಮನನ್ನು ಪ್ರಧಾನವಾಗಿ ಚಿತ್ರಿಸಲಾಗಿದೆ. ಪೀಠದ ಮೇಲೆ ಅಸೀನಳಾಗಿ ಬಲಗೈಯಲ್ಲಿ ಖಡ್ಗ ಹಿಡಿದಿರುವಳು. ಪೂಜಾರಿ ಮಂಗಳಾರತಿ ಮಾಡುತ್ತಿದ್ದು, ಅವನ ಹಿಂದೆ ಶಂಖ ಊದುತ್ತಿರುವ ಸ್ತ್ರೀಯೊಬ್ಬಳು ನಿಂತಿದ್ದಾಳೆ. ಅವಳ ಹಿಂದುಗಡೆ ಸರ್ವಾಲಂಕಾರ ಭೂಷಿತೆಯರಾದ ಐವರು ಸ್ತ್ರೀಯರು ನಿಂತಿದ್ದಾರೆ. ಪೂಜಾರಿಯ ಹಿಂದೆ ಗಣ್ಯವ್ಯಕ್ತಿಯೊಬ್ಬ ಕೈಮುಗಿದು ನಿಂತಿದ್ದಾನೆ. ಈ ಚಿತ್ರಗಳೆಲ್ಲ ತಮ್ಮ ಬಣ್ಣ ಕಳೆದುಕೊಂಡು ಮಬ್ಬಾಗಿ ಕಾಣುತ್ತವೆ.

ಎಡಗೋಡೆಯ ಮೇಲ್ಭಾಗದಲ್ಲಿ ಐತಿಹಾಸಿಕ ಚಿತ್ರಣವೊಂದಿದೆ. ನಾಲ್ಕು ಮಂದಿ ಟಿಪ್ಪುವನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಕರೆದೊಯ್ಯುತ್ತಿರುವ ಚಿತ್ರವದು. ಟಿಪ್ಪು ಬಲಗೈಯಲ್ಲಿ ಹೂ ಹಿಡಿದು ಕುಳಿತಿದ್ದು, ಅವನ ಹಿಂದೆ ಮತ್ತು ಮುಂದೆ ಯುರೋಪಿಯನ್ ಮಾದರಿಯ ಉಡುಪು ಧರಿಸಿರುವ, ಬಂದೂಕುಗಳನ್ನು ಭುಜದ ಮೇಲಿರಿಸಿಕೊಂಡು ಹೊರಟಿರುವ ಇಬ್ಬಿಬ್ಬರು ಸೈನಿಕರಿರುವರು. ಇಲ್ಲಿನ ಚಿತ್ರ ರಚನೆಯಾಗುವ ಹೊತ್ತಿಗೆ ಟಿಪ್ಪು ಮರಣ ಹೊಂದಿ ನೂರು ವರ್ಷಗಳೇ ಆಗಿದ್ದರೂ ಅವನನ್ನು ಇನ್ನೂ ಮರೆತಿಲ್ಲ.[೧೩] ಈ ರೀತಿಯಾಗಿ ಇಲ್ಲಿನ ದೇವಾಲಯವು ಭಿತ್ತಿಚಿತ್ರಗಳಿಗೆ ಹೆಸರಾಗಿದೆ.

### ೫.೨.೬. ದೇವರ ಹೊಸಹಳ್ಳಿ

ನೆಲಮಂಗಲ ತಾಲ್ಲೂಕಿನ ಗಡಿಠಾಣೆ ದೇವರಹೊಸ ಹಳ್ಳಿ ಆಗಿದೆ. ಈ ಸ್ಥಳವು ಶಿವಗಂಗೆ ದೇವರಾಯದುರ್ಗದ ನಡುವಿನ ಗುಡ್ಡ ಸಾಲಿನಲ್ಲಿದ್ದು, ಇಲ್ಲಿರುವ ಶಾಸನದ ಪ್ರಕಾರ ವಿಜಯನಗರದ ಕಾಲಕ್ಕಾಗಲೇ ಪ್ರಸಿದ್ಧಿ ಪಡೆದಿತ್ತು. ಇಲ್ಲಿ ವೀರಭದ್ರ ದೇವಾಲಯವು ಪ್ರಮುಖವಾಗಿದೆ.

**ವೀರಭದ್ರ ದೇವಾಲಯ:** ಈ ದೇವಾಲಯವು ಬೆಟ್ಟದ ಸಮಭಾಗದಲ್ಲಿ ಕಲ್ಲುಬಂಡೆಯ ಕೆಳಗಿದ್ದು, ಪಶ್ಚಿಮಕ್ಕೆ ಮುಖ ಮಾಡಿದೆ. ಗರ್ಭಗುಡಿಯಲ್ಲಿ ವೀರಭದ್ರನ ಮೂರ್ತಿಯಿದೆ. ೩ ಅಡಿ ಎತ್ತರವನ್ನು ಹೊಂದಿದೆ. ಖಡ್ಗ, ಬಿಲ್ಲು, ಬಾಣ, ಗದೆ, ಆಯುಧಗಳಿದ್ದು ದಕ್ಷ ಬಲಕ್ಕೆ ಇದೆ. ಗರ್ಭಗುಡಿಯ ಬಂಡೆಯ ಕೆಳಗಡೆ ಇರುವುದರಿಂದ ಯಾವುದೇ ಕೆತ್ತನೆಗಳು ನಡೆದಿಲ್ಲ. ನವರಂಗದಲ್ಲಿ ನಾಲ್ಕು ಕಂಬಗಳಿವೆ. ಮೃಗಪುರುಷ, ವಾದಕಿ, ಮಕರ, ಹಂಸ, ಪದ್ಮ, ಕಾಲಭೈರವ, ಫಲವಂತಿಕೆಯ ಶಿಲ್ಪ ಮುಂತಾದ ಶಿಲ್ಪಗಳಿವೆ. ಒಂದೊಂದು ಕಂಬಕ್ಕೂ ವಿಭಿನ್ನತೆ ಇದೆ. ಮತ್ತೊಂದು ಕಂಬದಲ್ಲಿ ಗಣೇಶ, ನರ್ತಕಿ, ರಂಗಭೋಗ, ವಾದಕ, ಮೃಗಪುರುಷ, ಕೈಲಾಸದ ಚಿತ್ರಣ, ಬೋಧಿನಿಯ ಶಿಲ್ಪಗಳಿವೆ. ಪ್ರತಿವರ್ಷವು ಇಲ್ಲಿ ಜಾತ್ರೆ ಉತ್ಸವಗಳು ನಡೆಯುತ್ತವೆ. ಇಲ್ಲಿ ಉತ್ಸವ ಮೂರ್ತಿಯಿದ್ದು ಸಂಚಾರಕ್ಕೆ ಹೋಗುತ್ತದೆ.

ಈ ಎಲ್ಲಾ ದೇವಾಲಯಗಳ ವಾಸ್ತುಶಿಲ್ಪವನ್ನು ಗಮನಿಸಿದಾಗ ಕಾಲಕ್ಕೆ ತಕ್ಕಂತೆ ಶೈಲಿಯನ್ನು ರೂಢಿಸಿಕೊಂಡಿವೆ. ದೇವಾಲಯಗಳು ಜೀರ್ಣೋದ್ಧಾರವಾಗಿ ಬದಲಾವಣೆಯಾಗಿವೆ. ಸಂಸ್ಕೃತಿ ವಾಣಿಜ್ಯೀಕರಣವಾದಂತೆ ಜನರು ನಿರ್ಲಕ್ಷ್ಯ ಹೊಂದಿದ್ದಾರೆ. ಈ ದೇವಾಲಯಗಳ ರಕ್ಷಣೆಯಿಲ್ಲದೇ ಹಾಳಾಗುತ್ತಿವೆ. ಈ ನಿಟ್ಟಿನಲ್ಲಿ ಅವುಗಳ ರಕ್ಷಣೆ ಆಗಬೇಕಾಗಿದೆ.

### ೫.೩. ಸಂಗೀತ ಮತ್ತು ನೃತ್ಯ

ಒಂದು ಪ್ರದೇಶದ ಸಂಸ್ಕೃತಿಯ ಹಿನ್ನೆಲೆಯಲ್ಲಿ ಅಲ್ಲಿಯ ಕಲೆಗಳು ರೂಪಗೊಂಡಿವೆ. ರಾಜಕೀಯ ಚಿಂತನೆಯೇ ಆಗಿರಲಿ, ಸಾಮಾಜಿಕ, ಶೈಕ್ಷಣಿಕ, ವೈಜ್ಞಾನಿಕ ಚಿಂತನೆಗಳೇ ಆಗಿರಲೀ ಜನರು ಕಲಾತ್ಮಕವಾಗಿಯೇ ಚಿಂತಿಸುತ್ತಾರೆ. ಆಡಳಿತಾತ್ಮಕವಾಗಿ ವಿಭಾಗಿಸಲ್ಪಟ್ಟ ಪ್ರತಿಯೊಂದು ಪ್ರದೇಶವೂ ಅದರದೇ ಆದ ಕಲಾ-ಸಂಸ್ಕೃತಿಯನ್ನು ಹೊಂದಿರುತ್ತದೆ. ಅದರಂತೆ ನೆಲಮಂಗಲ ತಾಲ್ಲೂಕು ಕೂಡ ತನ್ನದೇ ಆದ ಕಲಾ-ಸಂಸ್ಕೃತಿಯನ್ನು ಹೊಂದಿದೆ. ನೆಲಮಂಗಲದಲ್ಲಿ ಸಾಂಸ್ಕೃತಿಕವಾಗಿ ಇತಿಹಾಸ ಹೊಂದಿರುವ ಸಂಗೀತ ಮತ್ತು ನೃತ್ಯಕಲೆಗಳನ್ನು ಶಾಸನಗಳು ಮತ್ತು ಸಾಹಿತ್ಯ ಕೃತಿಗಳು ಪ್ರತಿಬಿಂಬಿಸುತ್ತವೆ. ಇಲ್ಲಿನ ಗಂಗರ ಆಳ್ವಿಕೆಯ ಕಾಲದಲ್ಲಿ ಸಂಗೀತ ಮತ್ತು ನೃತ್ಯಕಲೆಗಳು ದೇವಾಲಯಗಳಲ್ಲಿ ನಡೆಯುತ್ತಿದ್ದು, ಸಂಗೀತಗಾರರು ಮತ್ತು ನೃತ್ಯಗಾರರಿಗೆ ದಾನ-ದತ್ತಿಗಳು ದೊರೆತಿವೆ ಎಂಬುದಕ್ಕೆ ಶಾಸನಗಳು ಸಾಕ್ಷಿಯಾಗಿವೆ.

ಕ್ರಿ.ಶ. ೭೯೭ರಲ್ಲಿ ಮಾರಸಿಂಹನ ತಾಮ್ರಶಾಸನ ಮಣ್ಣೆಯಲ್ಲಿ ದೊರಕಿದ್ದು, ಇದು ಮಾರಸಿಂಹನು ತನ್ನ ಸಾಮಂತ ಶ್ರೀವಿಜಯನು ಮಾನ್ಯಪುರದಲ್ಲಿ ಕಟ್ಟಿಸಿದ್ದ ಜಿನೇಂದ್ರಭವನದ ದೇವಭೋಗಕ್ಕಾಗಿ 'ಕಿರುವೆಕ್ಕೂರ' ಗ್ರಾಮವನ್ನು ದಾನವಾಗಿ ನೀಡಿರುವುದನ್ನು ತಿಳಿಸಿದೆ. ಅಲ್ಲದೇ ರಂಗಭೂಮಿ ಮತ್ತು ನಾಟಕಕಲೆಯಲ್ಲಿಯೂ ಶಿವಮಾರನು ಚತುರನಾಗಿದ್ದನು ಎಂಬುದನ್ನು ತಿಳಿಸುತ್ತದೆ. ಅನಂತರ 'ವಾರವಿಲಾಸಿನೀ ವಿರಚಿತ ನೃತ್ತಗೀತ ಬಾದ್ಯ್ಯ ಬಲಿವಿಲೇಪನ ದೇವಪೂಜಾನವಕರ್ಮ್ಮಪ್ರವರ್ತ್ತನಾರ್ಥ' ಎಂದು ಉಲ್ಲೇಖವಾಗಿದ್ದು,[೧೪] ಇದರಿಂದ ಶ್ರೀವಿಜಯ ಜಿನಾಲಯದಲ್ಲಿ ವಾರವಿಲಾಸಿನಿಯರಿಂದ ರಚಿಸಲ್ಪಟ್ಟ ನೃತ್ಯ ಗೀತವಾದ್ಯಗಳ ಸೇವೆ ನಡೆಯಲಾಗುತ್ತಿತ್ತು ಎಂಬ ಅಂಶವನ್ನು ತಿಳಿಯಬಹುದು.

ಕ್ರಿ.ಶ. ೮೦೨ರ ಮತ್ತೊಂದು ತಾಮ್ರಶಾಸನವು ಮಣ್ಣೆಯಲ್ಲಿ ದೊರಕಿದ್ದು, ಇದು ರಾಷ್ಟ್ರಕೂಟರ ಪ್ರಭೂತವರ್ಷನ ಆಳ್ವಿಕೆಯ ಕಾಲಕ್ಕೆ ಸಂಬಂಧಿಸಿದ್ದಾಗಿದೆ. ಈ ಕಾಲಾವಧಿಯಲ್ಲಿ ಗಂಗ ಸಾಮ್ರಾಜ್ಯವು ಸಂಪೂರ್ಣವಾಗಿ ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟಿತು ಎಂದು ತಿಳಿಯುವುದರ ಜೊತೆಗೆ ಪ್ರಭೂತವರ್ಷನ ತಮ್ಮ ರಣಾವಲೋಕ ಕಂಬಯ್ಯನು ಮಾನ್ಯಪುರದ ಪಶ್ಚಿಮ ಭಾಗದಲ್ಲಿದ್ದ ಜಿನಾಲಯಕ್ಕೆ ಎಡೆದಿಂಡೆ ವಿಷಯದ ಪೆರ್ಬ್ಬಡಿಯೂರನ್ನು ರಂಗಭೋಗಕ್ಕಾಗಿ ದಾನವಾಗಿ ನೀಡಿರುವುದನ್ನು ತಿಳಿಸುತ್ತದೆ.[೧೫] ಈ ಶಾಸನ ಇಡೀ ಕರ್ನಾಟಕದಲ್ಲಿ ರಂಗಭೋಗ ವಿಷಯ ಇರುವ ಮೊಟ್ಟಮೊದಲ ಉಲ್ಲೇಖವಾಗಿದೆ. ಈ ರಂಗಭೋಗದ ಪ್ರಸ್ತಾಪ ವಿಶೇಷವಾಗಿದ್ದು, ದೇವರಿಗೆ ಎರಡು ರೀತಿಯ ಸೇವೆ ಮಾಡುವುದು ಜನರ ನಂಬಿಕೆಯಾಗಿದೆ.

೧. **ಅಂಗಭೋಗ:** ಪ್ರತಿರೂಪಕವಾಗಿ ಜೀವವಿರುವ ಶಕ್ತಿಗೆ ಸೇವೆ ಮಾಡುವುದು, ದೈಹಿಕವಾಗಿ ಸ್ನಾನ, ಬಟ್ಟೆ, ಆಹಾರ ನೈವೇದ್ಯ ಮಾಡುವುದು.

೨. **ರಂಗಭೋಗ:** ವೇದಿಕೆಯ ಮೂಲಕ ಖುಷಿಪಡಿಸುವುದರ ಮೂಲಕ ಸೇವೆ ಸಲ್ಲಿಸುವುದು. ಸಂಗೀತ, ಗೀತೆ-ಗಾಯನ, ನೃತ್ಯದ ಮೂಲಕ ಸೇವೆ ಸಲ್ಲಿಸುವುದು. ಇದಕ್ಕೆ ಸಾಕ್ಷಿಯಾಗಿ ಸೂಳೆಯರ ಗುಡಿಯಿದೆ. ಇದರ ಬಗ್ಗೆ ಈ ಶಾಸನ ತಿಳಿಸುತ್ತದೆ. ಅಂದರೆ ದೇವಾಲಯದ ರಂಗಭೋಗದ ಸಂದರ್ಭದಲ್ಲಿ ಸಂಗೀತಗಾರರಿಂದ ಸಂಗೀತ ಸೇವೆಯೂ, ನೃತ್ಯಗಾರ್ತಿಯವರಿಂದ ನೃತ್ಯಸೇವೆಯೂ ಆಗುತ್ತಿತ್ತು. ನೃತ್ಯಗಾರ್ತಿಯರನ್ನು ಸಾಮಾನ್ಯವಾಗಿ ಸೂಳೆಯರು ಎಂದು ಕರೆಯಲಾಗುತ್ತಿತ್ತು. ಅವರ ಗುರುವೇ ಸೂಳೆವೆಳ. ನೃತ್ಯಕಲೆಗೆ ದೇವಾಲಯಗಳಲ್ಲಿನ ಪಾತ್ರಗಳ ಸೇವೆಯೂ ಲಭಿಸಿ ಸೂಳೆಯರ ಗುಡಿ ಎಂದು ಕರೆಯಲಾಗುತ್ತಿದ್ದು, ನೆಲಮಂಗಲ ತಾಲ್ಲೂಕಿನ ಮಣ್ಣೆಯಲ್ಲಿ ಸಂಗೀತ ಮತ್ತು ನೃತ್ಯಕಲೆಗೆ ಸಾಕ್ಷಿಯಾಗಿ ಸೂಳೆಯರ ಗುಡಿಯಿದೆ.

ರಾಜಮನೆತನದ ಕೆಲವು ಸ್ತ್ರೀಯರೂ ಸಹ ನೃತ್ಯಗಾರ್ತಿಯರಾಗಿದ್ದರು. ಅದರಲ್ಲಿ ಹೊಯ್ಸಳರ ವಿಷ್ಣುವರ್ಧನನ ರಾಣಿ ಶಾಂತಲೆಯ ಹೆಸರು ಮುಖ್ಯವಾದುದು. ಹೊಯ್ಸಳರಿಗೂ ಮತ್ತು ಶಿವಗಂಗೆಗೂ ಸಂಪರ್ಕ ಇದ್ದದನ್ನು ಶಾಂತಲೆಯ ಮರಣವನ್ನು ಉಲ್ಲೇಖಿಸುವ ಶ್ರವಣಬೆಳಗೊಳದ ಶಾಸನದಿಂದ ತಿಳಿಯಬಹುದು.

ಹೊಯ್ಸಳರ ವಿಷ್ಣುವರ್ಧನನು ಗಂಗಾಧರೇಶ್ವರ ದೇವಾಲಯವನ್ನು ಕ್ರಿ.ಶ. ೧೧೪೦ ರಲ್ಲಿ ಮಾಡಿಸಿದನೆಂದು ಅಲ್ಲಿಯದೇ ಒಂದು ಶಾಸನ ತಿಳಿಸಿದೆ. ಈ ದೇವಾಲಯದ ನವರಂಗದಲ್ಲಿ ನೃತ್ಯ ಮತ್ತು ಸಂಗೀತಕ್ಕೆಂದೇ ವೇದಿಕೆಗಳನ್ನು ನಿರ್ಮಿಸಲಾಗಿರುವುದನ್ನು ನೋಡಬಹುದು. ಶಾಂತಲೆಯು ತನ್ನ ಜೀವಿತದ ಕೊನೆಯ ದಿನಗಳನ್ನು ಶಿವಗಂಗೆಯಲ್ಲಿ ಕಳೆದು ನಾಟ್ಯ ಮಾಡುತ್ತಲೇ ಆತ್ಮಾರ್ಪಣೆ ಮಾಡಿಕೊಂಡಳು ಎಂಬ ಪ್ರತೀತಿಯೂ ಇದೆ. ಇಂದಿಗೂ ಶಿವಗಂಗೆಯ ಗಂಗಾಧರೇಶ್ವರ ದೇವಾಲಯದ ನವರಂಗದಲ್ಲಿ ಸಂಗೀತ ಮತ್ತು ನೃತ್ಯದ ವೇದಿಕೆಗಳಿದ್ದು, ಕಾರ್ತಿಕ ಮಾಸ, ಶಿವರಾತ್ರಿ, ಯುಗಾದಿಯ ಹಬ್ಬಗಳಂದು ಭಕ್ತಾದಿಗಳು ಭಜನೆ, ಪ್ರಾರ್ಥನೆ ಮಾಡುತ್ತಾರೆ. ಕಾಲ ಕಾಲಕ್ಕನುಗುಣವಾಗಿ ಸಂಗೀತ ಮತ್ತು ನೃತ್ಯ ಕಲೆಯು ಬೆಳೆಯುತ್ತಾ ಬಂದಿದೆ.

**ಇಂದಿನ ಸಾಧಕರು:** ಕಾಲಕ್ಕೆ ತಕ್ಕಂತೆ ಸಂಸ್ಕೃತಿಯ ಬೆಳವಣಿಗೆಯ ನೆಲೆಯಲ್ಲಿ ಅನೇಕ ಸಂಗೀತಗಾರರ ಸಾಧನೆಯನ್ನು ವಿವರಿಸಬಹುದು.

**ಎ. ಪುಟ್ಟಯ್ಯ:** ನೆಲಮಂಗಲ ತಾಲ್ಲೂಕಿನ ತ್ಯಾಮಗೊಂಡ್ಲು ಗ್ರಾಮದ ಎ. ಪುಟ್ಟಯ್ಯನವರು ಹಾರ್ಮೋನಿಯಂ ವಾದನ ನುಡಿಸುವುದರಲ್ಲಿ ಖ್ಯಾತರಾಗಿದ್ದಾರೆ. ಅಲ್ಲದೇ ಸಂಗೀತ, ನಾಟಕ, ನೃತ್ಯ ಕಲೆಗಳಲ್ಲಿಯೂ ಪರಿಣಿತಿಯನ್ನು ಹೊಂದಿರುವಂತಹವರು. ನಾಟಕದಲ್ಲಿ ರಾಣಿಯ ಪಾತ್ರ ಮುಖ್ಯವಾಗಿ ಇವರೇ ಅಭಿನಯಿಸುತ್ತಿದ್ದರು. ಅಂದಿನ ದಿನಗಳಲ್ಲಿ ಪುಟ್ಟಯ್ಯನವರು ಸ್ತ್ರೀಪಾತ್ರವನ್ನು ಹಾಕಿ ಅಭಿನಯಿಸುತ್ತಿದ್ದ ಸ್ಫುರದ್ರೂಪಿಯಾಗಿದ್ದರು. ಇದರಿಂದ 'ರಾಣಿ ಪಾರ್ಟು ಪುಟ್ಟು' ಎಂಬ ಬಿರುದಿನಿಂದಲೇ ಪ್ರಸಿದ್ಧಿ ಹೊಂದಿದ್ದರು. ಇವರ ಅನೇಕ ಶಿಷ್ಯರು ಸಂಗೀತ, ನಾಟಕ, ನೃತ್ಯ, ಚಲನಚಿತ್ರ ರಂಗದ ಕಲಾವಿದರಾಗಿ ಹೆಸರು ಪಡೆದಿದ್ದಾರೆ.

**ಎ. ವಿ. ನಾರಾಯಣರಾವ್:** ಗಮಕ ಗಂಧರ್ವ ಎಂದೇ ಹೆಸರಾಗಿರುವ ಎ. ವಿ. ನಾರಾಯಣರಾವ್‌ರವರು ನೆಲಮಂಗಲ ತಾಲ್ಲೂಕಿನ ಅರೇಬೊಮ್ಮನಹಳ್ಳಿಯುವರಾಗಿದ್ದು ವೆಂಕಟನಾರಾಯಣಪ್ಪ ಮತ್ತು ಮಹಾಲಕ್ಷ್ಮಮ್ಮನವರ ಪುತ್ರರಾಗಿ ೧೮ನೇ ಏಪ್ರಿಲ್ ೧೯೪೪ ರಂದು ಜನಿಸಿದರು. ಇವರು ಕಾವ್ಯ, ಕವನಗಳನ್ನು ರಾಗಜಾಲದಲ್ಲಿ ಬಂಧಿಸಿ ಗಮಕ ಸಮಾರಾಧನೆ ಮಾಡುವುದರಲ್ಲಿ ನಿಷ್ಣಾತರಾದವರು. ಅಲ್ಲದೇ ವಚನ ಸಾಹಿತ್ಯವನ್ನೂ ಸಹ ಕರ್ನಾಟಕದ ಸಂಗೀತಕ್ಕೆ ಅಳವಡಿಸಿ ವಚನಗಮಕವನ್ನು ಮಾಡುವುದರಲ್ಲಿ ಪರಿಣಿತರಾಗಿದ್ದಾರೆ. ಕುಮಾರವ್ಯಾಸನ ಕರ್ಣಾಟ ಭಾರತ ಕಥಾಮಂಜರಿಯ ಷಟ್ಪದಿ ಕಾವ್ಯವನ್ನು ಅದ್ಭುತ, ರಸಭರಿತ, ರಾಗಬದ್ಧರಾಗಿ ಹಾಡಬಲ್ಲರು. ಇವರು ತಾಲ್ಲೂಕಿನ ಎಲ್ಲಾ ಕೇಂದ್ರಗಳಲ್ಲಿ ಕಾರ್ಯಕ್ರಮವನ್ನು ಅತ್ಯಂತ ಯಶಸ್ವಿಯಾಗಿ ನಡೆಸಿಕೊಟ್ಟಿದ್ದಾರೆ. ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ ಕಾರ್ಯಕ್ರಮ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವೇ ಮೊದಲಾದ ಕಡೆ ತಮ್ಮ ರಾಗಜಾಲವನ್ನು ಹರಡಿದ್ದಾರೆ.[೧೬] ೧೯೯೬ರಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಸಂಗೀತ ನಾಟಕ ಪ್ರಶಸ್ತಿಯೂ ಕೂಡ ಇವರಿಗೆ ಸಂದಿದ್ದು ಇನ್ನೂ ಅನೇಕ ಸಂಘ-ಸಂಸ್ಥೆಗಳಿಂದ ಪ್ರಶಸ್ತಿ ಹಾಗೂ ಸನ್ಮಾನಗಳು ಲಭಿಸಿವೆ. ಆಕಾಶವಾಣಿ ಕಾರ್ಯಕ್ರಮ, ದೂರದರ್ಶನ ಕಾರ್ಯಕ್ರಮಗಳಲ್ಲಿ ಹರಿಭಕ್ತಸಾರ ದೇವರನಾಮಗಳನ್ನು ಹಾಡಿದ್ದಾರೆ. ಇಂದಿಗೂ ನೂರಾರು ವಿದ್ಯಾರ್ಥಿಗಳಿಗೂ ಸಂಗೀತ, ಗಮಕ ಸ್ತೋತ್ರ, ದೇವರನಾಮಗಳನ್ನು ಹೇಳಿ ಕೊಡುತ್ತಿದ್ದಾರೆ. ಇವರಿಗೆ ಸಂಗೀತ ಸೇವೆಯಲ್ಲಿ ಅಪರೂಪದ ಕಲೆ ಸಿದ್ಧಿಸಿದೆ ಎಂದರೆ ತಪ್ಪಾಗಲಾರದು.

**ಕೆ. ಆರ್. ಗಂಗಾಧರ್:** ಕೆ. ಆರ್. ಗಂಗಾಧರರವರು ನೆಲಮಂಗಲ ತಾಲ್ಲೂಕಿನ ಕೆರೆಕತ್ತಿಗನೂರಿನ ಕೆ. ಆರ್. ರಾಮರಾವ್ ಮತ್ತು ಎನ್. ಆರ್. ಗೌರಮ್ಮನವರ ಪುತ್ರರಾಗಿ ೩೦ನೇ ಸೆಪ್ಟೆಂಬರ್ ೧೯೪೬ ರಂದು ಜನಿಸಿದರು. ಮೊದಲಿನಿಂದಲೂ ಲಲಿತಕಲೆಗಳಲ್ಲಿ ಆಸಕ್ತಿ ಇದ್ದು, ತನ್ನ ತಂದೆಯುವರಿಂದಲೇ ತಬಲದ ಅಭ್ಯಾಸವಾಯಿತು.

ಇವರು ಹೆಚ್ಚಿನ ಅಭ್ಯಾಸಕ್ಕಾಗಿ ಮೈಸೂರಿನ ವಿದ್ವಾನ್ ಎ. ವಿ. ಆನಂದ್‌ರವರ ಶಿಷ್ಯರಾಗಿ ಸೇರಿದರು. ಆನಂತರ ಟಿ. ವಿ. ಭದ್ರಚಾರ್‌ರವರಿಂದ, ಹ್ಯಾಡ್ಯಾಳು ಪುಟ್ಟಾಚಾರ್‌ರವರಿಂದ ತಾಳವಾದ್ಯವನ್ನು ಕಲಿತು ತಾಳವಾದ್ಯ ಪರೀಕ್ಷೆಯಲ್ಲಿ ಜೂನಿಯರ್ ವಿಭಾಗದಲ್ಲಿ ಮೈಸೂರು ರಾಜ್ಯಕ್ಕೆ ೨ನೇ ರ್‍ಯಾಂಕ್ ತೆಗೆದುಕೊಂಡ ಮೇಧಾವಿಯಾದರು.

ಪ್ರಾಥಮಿಕ ಶಿಕ್ಷಣವನ್ನು ಕೆರೆಕತ್ತಿಗನೂರಿನಲ್ಲಿ ಮುಗಿಸಿ, ಮಾಧ್ಯಮಿಕ ಶಿಕ್ಷಣವನ್ನು ಮೈಸೂರಿನ ಸದ್ವಿದ್ಯಾ ಪಾಠಶಾಲೆಯಲ್ಲಿ ಮುಂದುವರಿಸಿ, ಪ್ರೌಢಶಾಲಾ ಶಿಕ್ಷಣವನ್ನು ತ್ಯಾಮಗೊಂಡ್ಲು ಟೌನಿನಲ್ಲಿ ಮುಗಿಸಿದರು. ಟಿ.ಸಿ.ಎಚ್. ಮುಗಿಸಿ ಪ್ರೌಢಶಾಲಾ ಉಪಾಧ್ಯಾಯರಾದರೂ ತಾಳವಾದ್ಯದ ಮೋಹ ಕಡಿಮೆಯಾಗದೇ ಅದು ತೀವ್ರವಾಯಿತು.

ಇವರು ಲೆಕ್ಕಕ್ಕೆ ಸಿಗದಷ್ಟು ದೂರದರ್ಶನ ಕಾರ್ಯಕ್ರಮಗಳಲ್ಲಿ, ಆಕಾಶವಾಣಿ ಕಾರ್ಯಕ್ರಮಗಳಲ್ಲಿ, ಪ್ರತಿಷ್ಠಿತ ವೇದಿಕೆಗಳಲ್ಲಿ ತಾಳವಾದ್ಯ ನುಡಿಸಿದ್ದಾರೆ. ಹರಿಕಥಾ ವಿದ್ವಾನ್ ಗುರುರಾಜಲು ನಾಯ್ಡು (ಅರುಣ್‌ಕುಮಾರ್) ಇವರೊಂದಿಗೆ, ಹೊನ್ನಪ್ಪ ಭಾಗವತರ್‌ರವರೊಂದಿಗೆ ಕಚೇರಿ, ಪಂಡರೀಬಾಯಿಯವರ ಶ್ರೀಕೃಷ್ಣಚೈತನ್ಯ ನಾಟಕ ಸಭಾದಲ್ಲಿ ಸೇವೆ, ನಾಡಿನಲ್ಲಿ ಖ್ಯಾತರಾದ ರೊಳ್ಳೆ ವೆಂಕಟಾಚಲಯ್ಯನವರ ನಾಟಕಗಳಲ್ಲಿ ತಬಲ ನುಡಿಸಿ ಹಲವಾರು ಪ್ರಶಸ್ತಿ, ಸನ್ಮಾನಗಳನ್ನು ಪಡೆದಿದ್ದಾರೆ.[೧೭] ತಾಳವಾದ್ಯ ಸಂಗೀತ ಪರೀಕ್ಷಾ ಮೇಲ್ವಿಚಾರಕರಾಗಿ ಸೇವೆ ಸಲ್ಲಿಸುತ್ತಾ ವಿದ್ಯಾರ್ಥಿಗಳಿಗೆ ಶಾಸ್ತ್ರೀಯ ತಬಲ ಮತ್ತು ಮೃದಂಗಗಳನ್ನು ಕಲಿಸಿ ಕೊಡುತ್ತಿದ್ದಾರೆ. ಇವರ ಶಿಷ್ಯರು ಹಲವಾರು ವೇದಿಕೆಗಳಲ್ಲಿ ಕಾರ್ಯಕ್ರಮ ನೀಡಿ ಗುರುವಿಗೆ ಗೌರವ ತಂದುಕೊಟ್ಟಿದ್ದಾರೆ. ಈ ತಬಲಾ ವಿದ್ವಾನ್ ಕೆ. ಆರ್. ಗಂಗಾಧರರವರು ನೆಲಮಂಗಲ ತಾಲ್ಲೂಕಿನ ಸಂಗೀತ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ.

**ಎಂ. ಕೃಷ್ಣಮೂರ್ತಿ :** ಹೆಚ್. ಮಂಚಯ್ಯ ಮತ್ತು ಲಿಂಗಮ್ಮನವರ ಪುತ್ರರಾಗಿ ೨೦ನೇ ಮೇ ೧೯೫೭ರಲ್ಲಿ ಜನಿಸಿದ ಇವರು ಜನ್ಮತಃ ಅಂಧರು. ಅಂಧರಾದರೂ ಕೂಡ ಸಂಗೀತ ಕಲಿಯಲು ಉತ್ಸುಕರಾದರು. ಸಂಗೀತದ ಗಂಧವೇ ಅರಿಯದ ಮುಗ್ಧ ದಂಪತಿಗಳ ಮಗನಾದವನಿಗೆ ಸಂಗೀತ ಉಸಿರಾಯಿತು. ಮೊದಲ ಬಾರಿಗೆ ಮೈಸೂರಿನ ಆಸ್ಥಾನ ವಿದ್ವಾನ್ ಟಿ. ಎಂ. ಮುರುಗೇಶ್‌ರವರಲ್ಲಿ ಶಾಸ್ತ್ರೀಯ ಸಂಗೀತ ಪಾಠವನ್ನು ಕಲಿತರು. ಜೂನಿಯರ್ ಮತ್ತು ಸೀನಿಯರ್ ಪರೀಕ್ಷೆಗಳಲ್ಲಿ ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾಗಿ ೧೯೭೬ ರಲ್ಲಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗೆ, ಸಂಗೀತ ಶಿಕ್ಷಕರಾಗಿ ನೇಮಕಗೊಂಡರು. ಇದರಿಂದ ಸಂಗೀತ ಇವರಿಗೆ ಜೀವನಕ್ಕೊಂದು ಮಾರ್ಗವಾಯಿತು. ಇವರು ಸ್ವಂತ ಪರಿಶ್ರಮದಿಂದ ಹಾರ್ಮೋನಿಯಂ ಮತ್ತು ಕೀಬೋರ್ಡ್‌ಗಳನ್ನು ನುಡಿಸುವುದನ್ನು ಕಲಿತಿದ್ದಾರೆ. ಬ್ರೈಲ್ ಲಿಪಿಯನ್ನು ಅರ್ಥೈಸಿಕೊಂಡು ಓದುವ ಇವರಿಗೆ ಅಂಧತ್ವ ಇವರ ಸಾಧನೆಗೆ ಅಡ್ಡಿ ಬಂದಿಲ್ಲ. ೧೯೮೧ ರಿಂದ ನೆಲಮಂಗಲ ಪಟ್ಟಣದ ಕೋಟೆ ಬೀದಿಯ ಸರ್ಕಾರಿ ಹಿರಿಯ ಪ್ರಾಥಮಿಕ ಪಾಠಶಾಲೆಯಲ್ಲಿ ಸಂಗೀತ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿರುವ ಇವರು, ವಿದ್ಯಾರ್ಥಿಗಳಿಗೆ ಭಾವಗೀತೆ, ಜನಪದಗೀತೆ, ದೇಶಭಕ್ತಿಗೀತೆ, ನಾಡಗೀತೆಗಳನ್ನು ಕಲಿಸುತ್ತಿದ್ದಾರೆ. ಅಂಧರಾದರೂ ಸಂಗೀತ ಸಾಧನೆ ಅವರ ಜೀವನದ ಒಂದು ಮೈಲಿಗಲ್ಲು ಎನ್ನಬಹುದು.

**ಹೆಚ್. ಆರ್. ಜಯಲಕ್ಷ್ಮಿ :** ನೆಲಮಂಗಲದ ಅರಿಶಿನಕುಂಟೆಯ ಆದರ್ಶನಗರದಲ್ಲಿ ವಾಸವಾಗಿರುವ ಹೆಚ್. ಆರ್. ಜಯಲಕ್ಷ್ಮಿಯವರು ಸಂಗೀತ ಕ್ಷೇತ್ರದಲ್ಲಿ ಸಾಧನೆ ಮಾಡಿ 'ಗಾಯನ ಶ್ರೀ', 'ಕಾವ್ಯಗಂಗಾ', 'ಭಜನಾರತ್ನ' ಬಿರುದುಗಳನ್ನು ಪಡೆದಿದ್ದಾರೆ. ರಾಜನಿಗೆ ಕಿರೀಟ ಹೇಗೆ ಭೂಷಣವೋ ಹಾಗೆ, ನೆಲಮಂಗಲದ ಎಲ್ಲ ಸಾಂಸ್ಕೃತಿಕ ಕಾರ್ಯಕ್ರಮಗಳಿಗೂ ಇವರ ಗಾಯನವೇ ಭೂಷಣ. ವೃತ್ತಿಯಲ್ಲಿ ನೆಲಮಂಗಲದ ಶಾಂತಿನಗರದ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಯ ಉಪಾಧ್ಯಾಯಿನಿಯಾಗಿದ್ದು, ಖ್ಯಾತ ಸಂಗೀತ ವಿದೂಷಿ ಶ್ರೀಮತಿ ಡಾ. ನಾಗವಲ್ಲಿ ನಾಗರಾಜ್ ರವರ ಹತ್ತಿರ ಕರ್ನಾಟಕ ಶಾಸ್ತ್ರೀಯ ಸಂಗೀತ ಅಧ್ಯಯನ ಮಾಡಿ ಕರ್ನಾಟಕ ಶಾಸ್ತ್ರೀಯ ಸಂಗೀತದ ವಿಭಾಗದಲ್ಲಿ ಪ್ರಥಮ ದರ್ಜೆ ಪಡೆದಿದ್ದಾರೆ. ಅಲ್ಲದೇ ಎಂ.ಎ.ಬಿ.ಇಡಿ. (ಕನ್ನಡ) ಪದವೀದರರು ಆಗಿರುವುದರಿಂದ ಪದಗಳ ಅಪಾರ್ಥವಾಗದೇ ಮಧುರ ರಾಗಾಲಾಪನೆ ಮಾಡುತ್ತಾರೆ. ಆಕಾಶವಾಣಿ, ದೂರದರ್ಶನ ಕಾರ್ಯಕ್ರಮಗಳಲ್ಲಿ ದೇವರನಾಮ, ಭಾವಗೀತೆ, ಜನಪದ ಗೀತೆಗಳ ಗಾಯನ ಕಾರ್ಯಕ್ರಮಗಳನ್ನು ನಡೆಸಿಕೊಟ್ಟಿದ್ದಾರೆ. ಅನೇಕ ಸಂಘ-ಸಂಸ್ಥೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಆಶ್ರಯದಲ್ಲಿ ಮುನ್ನೂರಕ್ಕೂ ಹೆಚ್ಚು ಕಾರ್ಯಕ್ರಮ ನೀಡಿದ್ದು, ಅನೇಕ ಧ್ವನಿ ಸುರುಳಿಗಳಲ್ಲಿ ಹಾಡಿದ್ದಾರೆ. ೨೦೦೦ - ೨೦೦೧ ನೇ ಸಾಲಿನಲ್ಲಿ ಮಧ್ಯಪ್ರದೇಶದ ರಾಜಧಾನಿ ಭೋಪಾಲ್‌ನಲ್ಲಿ ನಡೆದ ರಾಷ್ಟ್ರಮಟ್ಟದ ನಾಗರೀಕ ಸೇವಾ ಸಂಗೀತ ಮತ್ತು ನೃತ್ಯ ಸ್ಪರ್ಧೆಯಲ್ಲಿ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿ ಲಘು ಶಾಸ್ತ್ರೀಯ ಸಂಗೀತದಲ್ಲಿ ಪ್ರಥಮ ಬಹುಮಾನ ಮತ್ತು ಪ್ರಶಸ್ತಿಗಳನ್ನು ಪಡೆದು ನೆಲಮಂಗಲದ ಕೀರ್ತಿಯನ್ನು ಭೋಪಾಲದವರೆಗೂ ಹರಡಿದ್ದಾರೆ.[೧೮] 'ನೆಲ' ಕೋಗಿಲೆಯಾಗಿ ಗುರುತಿಸಿಕೊಂಡಿದ್ದಾರೆ.

**ವಿನುತಾ ಬೂದಾಳು :** ನೆಲಮಂಗಲ ತಾಲ್ಲೂಕಿನ ಬೂದಾಳಿನ ಗೋಪಾಲಕೃಷ್ಣ ಶ್ಯಾನುಭೋಗ ಮತ್ತು ಸೀತಾಲಕ್ಷ್ಮಿಯವರ ಮಗಳಾಗಿ ಜನಿಸಿದರು. ಕರ್ನಾಟಕ ಶಾಸ್ತ್ರೀಯ ಸಂಗೀತದಲ್ಲಿ ಬಿ.ಎ. ಪದವಿ ಮುಗಿಸಿ, ಕನ್ನಡ ಜಾನಪದ ಅಧ್ಯಯನದಲ್ಲಿ ಡಿಪ್ಲೊಮಾ ಶಿಕ್ಷಣವನ್ನು ಪಡೆದರು. ವೃತ್ತಿಪರ ಗಾಯಕಿಯಾಗಿ, ಬೆಂಗಳೂರು ಆಕಾಶವಾಣಿ ಕೆಂದ್ರ, ಎಫ್. ಎಂ. ರೈನ್‌ಬೋದಲ್ಲಿ ನಿರೂಪಕಿಯಾಗಿ, ಸಂಗೀತ ನಿರ್ದೇಶಕಿಯಾಗಿ ಸೇವೆ ಸಲ್ಲಿಸುತ್ತಾ

ಬಂದಿದ್ದಾರೆ. ಬೆಂಗಳೂರಿನ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಹಿಡಿದು ಶಿವಮೊಗ್ಗದ ವಿಶ್ವವಿದ್ಯಾಲಯದವರೆಗೆ ಇವರ ಪ್ರತಿಭೆ ಗುರುತಿಸಿ ಗೌರವಿಸಿದೆ. ೧೯೯೬, ೯೭, ೯೮ ಈ ವರ್ಷಗಳಲ್ಲಿ ಪತ್ರಿಕಾ ಕಲಾ ಸಂಸ್ಕೃತಿ ವೇದಿಕೆಯಿಂದ ಗಾಯನಶ್ರೀ ಪ್ರಶಸ್ತಿ, ೧೯೯೮ ರಲ್ಲಿ ಅತ್ತಿಮಬ್ಬೆ ಪ್ರತಿಷ್ಠಾನದ ಕಾವ್ಯ ಗಂಗಾ ಪ್ರಶಸ್ತಿ, ಅಲ್ಲದೇ ರಾಷ್ಟ್ರ, ಜಿಲ್ಲೆ, ತಾಲ್ಲೂಕು ಮಟ್ಟಗಳಲ್ಲಿ ೨೮೦ ಕ್ಕೂ ಹೆಚ್ಚು ಪ್ರಶಸ್ತಿಗಳು ಬಂದಿವೆ. ದೆಹಲಿಯ ಆಗ್ರಾ ರಾಷ್ಟ್ರೀಯ ಮಟ್ಟದಲ್ಲಿ ದ್ವಿತೀಯ ಬಹುಮಾನ ಪಡೆದಿರುವುದು ಕರ್ನಾಟಕ ಸಂಘದಲ್ಲಿ ನಾಲ್ಕು ಬಾರಿ ಕಾರ್ಯಕ್ರಮ, ಮದ್ರಾಸ್ ಕನ್ನಡ ಸಂಘ, ಹರಿಯಾಣ, ಚಂಡೀಗಡ, ಗುರಗಾಂ ಕನ್ನಡ ಸಂಘ, ನೈನಿತಾಲ್, ರ್‍ಹೋಟಕ್ ಕನ್ನಡ ಸಂಘ, ಭೂಪಾಲ್ ಹೀಗೆ ದೇಶದ ನಾನಾ ಭಾಗಗಳಿಗೆ ಕನ್ನಡದ ಕಂಪನ್ನು ಹರಡಿದ್ದಾರೆ. ಬೀದರ್ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಿಂದ ಪ್ರತಿನಿಧಿಸಿದ್ದರು.[೧೯] ಇಡೀ ಬದುಕನ್ನು ಸಂಗೀತಕ್ಕೆ ಮೀಸಲಾಗಿಟ್ಟು ನೆಲದ ಕಂಪನ್ನು ಸೂಸಲು ವಿಶಿಷ್ಟ ಸಾಧನೆಗಳನ್ನು ಮಾಡಿದ್ದಾರೆ ಎಂದರೆ ತಪ್ಪಾಗಲಾರದು.

**ರಂಗಕಲಾವಿದರು**

**ಪಿ. ಸುಶೀಲಮ್ಮ:** ರಂಗಭೂಮಿ, ಆಕಾಶವಾಣಿ, ದೂರದರ್ಶನ ಮತ್ತು ಚಲನಚಿತ್ರ ರಂಗದ ಕಲಾವಿದೆ ಸುಶೀಲಮ್ಮನವರ ಹೆಸರು ನೆಲಮಂಗಲ ತಾಲ್ಲೂಕಿನಾದ್ಯಂತ ಚಿರಪರಿಚಿತವಾದುದ್ದು. ಇವರು ವೃತ್ತಿಯಲ್ಲಿ ಉಪಾಧ್ಯಾಯಿನಿಯಾಗಿದ್ದು, ತನ್ನ ತಂದೆಯ ಪ್ರಭಾವದಿಂದಾಗಿ ಒಂಭತ್ತನೆಯ ವಯಸ್ಸಿಗೆ ನಾಟಕದಲ್ಲಿ ಅಭಿನಯಿಸಿದರು. ಕಲಾವಿದೆ ಸುಶೀಲಮ್ಮನವರು ಇಂದಿಗೂ ಚಲನಚಿತ್ರ, ಧಾರವಾಹಿ ಮತ್ತು ಬಾನುಲಿ ಕೇಂದ್ರದಲ್ಲಿ ಅಭಿನಯನಿಸುತ್ತಲೇ ಇದ್ದಾರೆ. ಚಲನಚಿತ್ರಗಳಾದ 'ಓಂ' ಚಿತ್ರದಲ್ಲಿ ನಟ ಶಿವರಾಜ್‌ಕುಮಾರ್‌ರವರ ತಾಯಿಯಾಗಿ, ಮಹಾಶಕ್ತಿಮಾಯಿ, ದಂಡನಾಯಕ, ಕೂಲಿರಾಜ, ಹತ್ತೂರ ಒಡೆಯ, ಧರ್ಮದೇವತೆ, ಹಾಲಪ್ಪ ಇತ್ಯಾದಿ ಚಲನಚಿತ್ರಗಳಲ್ಲಿ ವಿವಿಧ ಪಾತ್ರಗಳಲ್ಲಿ ಅಭಿನಯಿಸಿದ್ದಾರೆ. ಅಲ್ಲದೇ ಕಿರುತೆರೆಯ ಧಾರಾವಾಹಿಗಳಾದ ಒಂದೇ ಸುಳ್ಳು, ಜನನಿ, ವಠಾರ, ಅರ್ಧಸತ್ಯ, ತೇಲಿ ಹೋದ ನೌಕೆ ಇತ್ಯಾದಿಗಳಲ್ಲಿ ಅಭಿನಯಿಸಿದ್ದಾರೆ. ಸಾಹಿತ್ಯ, ಸಂಗೀತ, ನೃತ್ಯ, ನಾಟಕಗಳಲ್ಲಿ ಮಕ್ಕಳಿಗೆ ತರಬೇತಿ ನೀಡಿ ಕಾರ್ಯಕ್ರಮಗಳನ್ನು ನಡೆಸಿಕೊಡುತ್ತಾ ಬಂದಿದ್ದಾರೆ. 'ಕಿತ್ತೂರ ರಾಣಿ ಚೆನ್ನಮ್ಮ' ಮಕ್ಕಳ ನಾಟಕಕ್ಕೆ ಬೆಂಗಳೂರು ದೂರದರ್ಶನ ಕೇಂದ್ರದಿಂದ ರಾಷ್ಟ್ರ ಪ್ರಶಸ್ತಿ ಪಡೆದ ಹೆಗ್ಗಳಿಕೆ ಸುಶೀಲಮ್ಮನವರದು.[೨೦] ಕರ್ನಾಟಕದಾದ್ಯಂತ ಸಂಚರಿಸಿ ಅನೇಕ ನಾಟಕಗಳ ಪ್ರದರ್ಶನ ನೀಡಿ ಸ್ಪರ್ಧೆಯಲ್ಲೂ ಭಾಗವಹಿಸಿ ಲೆಕ್ಕವಿಲ್ಲದಷ್ಟು ಪ್ರಶಸ್ತಿ, ಸನ್ಮಾನ, ಪುರಸ್ಕಾರ ಪಡೆದಿರುವುದು ಇವರ ಕಲೆಗೆ ದೊರೆತ ಮನ್ನಣೆಯಾಗಿದೆ.

ನೆಲಮಂಗಲ ತಾಲ್ಲೂಕಿನ ಹಸುರುವಳ್ಳಿಯ ವೆಂಕಟಪ್ಪನವರು ನಾಟಕ, ಹರಿಕಥೆ, ಕಲಾವಿದರಾಗಿ ಖ್ಯಾತಿಯನ್ನು ಪಡೆದಿದ್ದಾರೆ. ಇವರು ನಾಟಕದ ಆಂಜನೇಯನ ಪಾತ್ರದಲ್ಲಿ ಹೆಚ್ಚಾಗಿ ಗುರುತಿಸಿಕೊಂಡವರು. ಬಿ. ರಾಮಚಂದ್ರರಾವ್ ಮತ್ತುಜಿ. ಎಂ. ರುದ್ರಾರಾಧ್ಯರು ಜಾನಪದ ಗೀತೆ ಗಾಯಕರಾಗಿ ಹೆಸರನ್ನು ಪಡೆದಿದ್ದಾರೆ. ಚಿಕ್ಕನಾಯಕನಹಳ್ಳಿಯ ಕೆ. ಎಸ್. ಸುಬ್ಬರಾವ್, ಕೆ. ಆರ್. ವೆಂಕಟಸುಬ್ಬಯ್ಯನವರು ಹಾರ್ಮೋನಿಯಂ ವಾದಕರೂ ಆಗಿದ್ದಾರೆ.

ಸಂಗೀತ ಕ್ಷೇತ್ರಕ್ಕೆ ಈ ಪ್ರದೇಶ ತೋರಿದ ಒಲವು ನೃತ್ಯಕಲೆಯಲ್ಲಿ ಮೊದಲಿನಿಂದಲೂ ತೋರಲಾರದ್ದು ಕಂಡುಬರುತ್ತದೆ. ರಂಗಭೂಮಿಯಲ್ಲಿ ಕೆಲವರು ನೃತ್ಯಗಾರರಿದ್ದು, ಭರತನಾಟ್ಯದ ನೃತ್ಯಗಾರರು ಕಂಡುಬರುವುದಿಲ್ಲ.

ಇತ್ತೀಚಿನ ದಿನಗಳಲ್ಲಿ ಪಿ. ಸುಶೀಲಮ್ಮನವರ ನಿರ್ದೇಶನದಲ್ಲಿ ಸಾಗುತ್ತಿರುವ ಭವಾನಿ ವಿದ್ಯಾಪೀಠವೂ ನೃತ್ಯವನ್ನು ಕಲಿಸಲು ತರಬೇತಿ ನೀಡುತ್ತದೆ. ಆದರೆ ಸಂಗೀತ ಕ್ಷೇತ್ರದಲ್ಲಿ ಈ ತಾಲ್ಲೂಕು ಸಾಕಷ್ಟು ಹೆಸರು ಮಾಡಿದೆ.

**೫.೪ ಸಾಹಿತ್ಯ ಪರಂಪರೆಗೆ ಕೊಡುಗೆ :**

ಸಾಂಸ್ಕೃತಿಕ ಇತಿಹಾಸದ ರಚನೆಯಲ್ಲಿ ಸಾಹಿತ್ಯದ ನೆರವು ಪಡೆಯಲೇ ಬೇಕಾಗುತ್ತದೆ. ಸಾಂಸ್ಕೃತಿಕ ಇತಿಹಾಸದಲ್ಲಿ ಸಾಹಿತ್ಯದ ನೇಪಥ್ಯ ಇರಲೇಬೇಕು. ಏಕೆಂದರೆ ರಾಜಕೀಯ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಪ್ರಭಾವಗಳನ್ನು ಗುರುತಿಸಲು ಸಾಹಿತ್ಯದ ಸಹಕಾರ ಅಗತ್ಯವಾಗಿದೆ. ನೆಲಮಂಗಲ ತಾಲ್ಲೂಕಿನ ಸಾಹಿತ್ಯ ಪರಂಪರೆಯನ್ನು ಕ್ರಿ.ಶ. ೮ನೇಯ ಶತಮಾನದಿಂದ ಆರಂಭಿಸಬಹುದು. ಗಂಗವಂಶದ ಪ್ರಖ್ಯಾತ ದೊರೆ ಶ್ರೀಪುರುಷನು ಮಣ್ಣೆಯಲ್ಲಿ ಆಳ್ವಿಕೆಯನ್ನು ಮಾಡಿದ್ದು ಈತನು ಗಜಯುದ್ಧದ ಬಗ್ಗೆ ತಿಳಿಸಲು 'ಗಜಶಾಸ್ತ್ರ' ಎಂಬ ಶಾಸ್ತ್ರ ಗ್ರಂಥವನ್ನು ರಚಿಸಿದನೆಂದು ಶಾಸನಗಳು ತಿಳಿಸುತ್ತವೆ. ಅವನ ಮಗ ಎರಡನೇ ಶಿವಮಾರನು ಸ್ವತಃ ವಿದ್ವಾಂಸನಾಗಿದ್ದು, 'ಸೇತುಬಂಧ' ಮತ್ತು 'ಗಜಾಷ್ಟಕ' ಎಂಬ ಕೃತಿಗಳನ್ನು ರಚಿಸಿದನು. ಆದರೆ ಈ ಯಾವ ಗ್ರಂಥಗಳೂ ಈಗ ಉಪಲಬ್ಧವಿಲ್ಲ.

ಕ್ರಿ.ಶ. ೧೫೩೦ ರಲ್ಲಿ ಶಿವಗಂಗೆಯ ಮೇಲಣ ಗವಿ ಮಠದ ಸಿಂಹಾಸನಾಧೀಶ್ವರನಾದ ಶಾಂತ ನಂಜೇಶ್ವರನ ಶಿಷ್ಯನಾಗಿದ್ದ ಗುಬ್ಬಿಯ ಮಲ್ಲಣಾರ್ಯನು ವೀರಶೈವಾಮೃತ ಮಹಾಪುರಾಣ ಮತ್ತು ಭಾವಚಿಂತಾರತ್ನ ಎಂಬ ಕೃತಿಗಳನ್ನು ರಚಿಸಿದನೆಂದು ಶಾಸನಗಳಿಂದ ತಿಳಿದುಬರುತ್ತದೆ.[೨೧] ಈ ಕೃತಿಗಳನ್ನು ಮಲ್ಲಣಾರ್ಯನು ಶೂನ್ಯಸಂಪಾದನೆ ಮಾಡಿದ ಹಲಗೆಯಾರ್ಯನ ಮಾರ್ಗದರ್ಶನದಲ್ಲಿ ರಚಿಸಿದನೆಂದು ತಿಳಿಯುತ್ತದೆ. ಕ್ರಿ.ಶ. ೧೬೭೮ ರಲ್ಲಿ ವಾರ್ಧಕಷಟ್ಪದಿಯಲ್ಲಿ ಕೊಟ್ಟೂರು-ಬಸವೇಶ್ವರ ಪುರಾಣವನ್ನು ರಚಿಸಿದ ಬಸವಲಿಂಗ ಕವಿಯು ಶಿವಗಂಗೆಗೆ ಸೇರಿದ್ದವನು. ಶಿವಗಂಗೆಯ ಗಂಗ ಎಂಬ ಕವಿಯು 'ಗಿರಿಜಾಕಲ್ಯಾಣ' ಎಂಬ ಯಕ್ಷಗಾನವನ್ನು ರಚಿಸಿದ್ದಂತೆ ತಿಳಿದು ಬಂದಿದೆ. 'ಗಂಗಾ-ಗೌರಿ ಸಂವಾದ' ಎಂಬ ಸಾಂಗತ್ಯ ಕಾವ್ಯವನ್ನು ರಚಿಸಿದ ತರಳ ಚರಪತಿಯು ಶಿವಗಂಗೆಯ ಹಿರಿಯ ಸಿಂಹಾಸನದ ಸಂಗಮೇಶ್ವರನ ಶಿಷ್ಯನಾಗಿದ್ದನು.

ಕ್ರಿ.ಶ. ೧೮೬೬ ರಲ್ಲಿ ನೆಲಮಂಗಲದಲ್ಲಿ ಜನಿಸಿದ ಹೆಸರಘಟ್ಟದಲ್ಲಿ ವಾಸವಾಗಿದ್ದ ಶ್ರೀಲಕ್ಷ್ಮೀನರಸಿಂಹ ಶಾಸ್ತ್ರಿಗಳ ತಂದೆ ನರಸಿಂಹಶಾಸ್ತ್ರಿಗಳು ತಮ್ಮ ತಾಯಿ ಪಾರ್ವತಮ್ಮನವರಾಗಿದ್ದು, ಶ್ರೀಲಕ್ಷ್ಮೀನರಸಿಂಹ ಶಾಸ್ತ್ರಿಗಳು ಸಂಸ್ಕೃತದಲ್ಲಿ ತಮ್ಮ ಮನೆ ದೇವರಾದ ಕಮ್ಮಸಂದ್ರದ ಲಕ್ಷ್ಮೀನರಸಿಂಹ ಸ್ವಾಮಿಯನ್ನು ಸ್ತುತಿಸಿ 'ನಕ್ಷತ್ರ ಮಾಲಿಕೆ'ಯನ್ನು ರಚಿಸಿದ್ದಾರೆ. ಹಾಗೆಯೇ ಇವರು ರಚಿಸಿರುವ 'ದುರ್ಗಾ ಪಂಚರತ್ನ'ದಲ್ಲಿ ನೆಲಮಂಗಲದ ಪ್ರಸ್ತಾಪವೂ ಇದೆ.[೨೨]

ವನಜೇಕ್ಷಣ ವನಜಾಸನ ದಿವಿಜಾಧಿಪವರದೇ ಸಂಪದೇ |
ಮಮ ವಿಪದಂ ಜಹಿ ನಿಖಿಟಾಮರ ಸುಖವೇ ||
ಮಣಿರಂಜಿತ ಸುಪಯೋಧರವಲಯೇ ಧೃತವಲಯೇ |
ಕಲಯೇ ತವಪದಪಲ್ಲವಮ ಚಲಾಧಿಪ ತನಯೇ ||
ಬಹುಮಂಗಳ ನೆಲಮಂಗಳ ಪುರ ಪಾಲಿನಿ ಕುಶಲಂ
ದಿಶ ತಾವಕ
ಪಡ ಸೇವಕ ನರಸಿಂಹ ಕವಯೇ||

ಕ್ರಿ.ಶ. ೧೬ನೇ ಶತಮಾನದ ಅಂತ್ಯ ಭಾಗದಲ್ಲಿ ಹೆಗ್ಗುಂದದ ಶೇಷರಾಮಯ್ಯ ಎಂಬುವರು 'ನೀಲ ಧ್ವಜನ ಕಾಳಗ' ಎಂಬ ಗ್ರಂಥವನ್ನು ರಚಿಸಿದ್ದಾರೆ.

ಎಲೆಕ್ಯಾತನಹಳ್ಳಿಯ ವೈ. ಜೆ. ಶಾಂತರಾಜಯ್ಯನವರು ಮಕ್ಕಳಿಗಾಗಿ ಶ್ರವಣಬೆಳಗೊಳ ಕ್ಷೇತ್ರ ಅಥವಾ ಬಾಹುಬಲಿ ವಿಜಯ, ಜೈಮಿನಿ ಭಾರತ ಹಾಗೂ ರಾಮಾಯಣದ ಕಥೆಗಳು, ಶ್ರಮದಾನ ಗೀತೆಗಳನ್ನು ಬರೆದು ಪ್ರಕಟಿಸಿದ್ದಾರೆ.

ಕನ್ನಡ ಸಾಹಿತ್ಯ ಮತ್ತು ಸಂಶೋಧನಾ ಕ್ಷೇತ್ರದಲ್ಲಿ ನೆಲಮಂಗಲ ತಾಲ್ಲೂಕಿನ ಹೆಸರು ಚಿರಸ್ಥಾಯಿಯಾಗಿರುವುದು ಮಹಾವಿದ್ವಾಂಸರಾದ **ಡಾ. ಡಿ. ಎಲ್. ನರಸಿಂಹಾಚಾರ್** ಅವರಿಂದ ಎನ್ನಬಹುದು. ನೆಲಮಂಗಲ ತಾಲ್ಲೂಕಿನ ದೊಡ್ಡಬೆಲೆಯ ಸಂಪರ್ಕವಿಲ್ಲವಾದರೂ ಅವರ ಪೂರ್ವಿಕರ ಕುರುಹಾಗಿ ತಮ್ಮ ಹೆಸರಿನೊಂದಿಗೆ ಸೇರಿಕೊಂಡಿತ್ತು. ಡಿ. ಎಲ್. ನರಸಿಂಹಾಚಾರ್‌ರವರು ವಿದ್ಯಾರ್ಥಿ ದೆಸೆಯಲ್ಲಿಯೇ ಬಿ.ಎಂ.ಶ್ರೀ ಅವರ ಪ್ರಭಾವದಿಂದ 'ದೊಡ್ಡ ಮನುಷ್ಯರು ಯಾರು?' ಮತ್ತು 'The story of cotton seed' ಎಂಬ ಲೇಖನಗಳನ್ನು ಪ್ರಕಟಿಸಿದರು. 'ವೀರಶೈವ ಸಾಹಿತ್ಯದ ಉಗಮ' ಎಂಬ ಸಂಶೋಧನಾ ನಿಬಂಧವನ್ನು ರಚಿಸಿದರು. ಸಂಶೋಧನಾ-ವಿಮರ್ಶಾ ಕ್ಷೇತ್ರಗಳಲ್ಲಿ ಪರಿಣಿತಿ ಹೊಂದಿ 'ಪಂಪ ರಾಮಾಯಣ ಸಂಗ್ರಹ', 'ಸುಕುಮಾರ ಚರಿತೆ', 'ಸಿದ್ಧರಾಮ ಚರಿತೆ'ಯ ವಿಮರ್ಶಾತ್ಮಕ ಮುನ್ನುಡಿಗಳನ್ನು ಬರೆದರು.[೨೩] ರಂ. ಶ್ರೀ. ಮುಗಳಿಯವರ 'Heritage of Karnataka' ಶಂ.ಬಾ. ಅವರ 'ಕಣ್ಮರೆಯಾದ ಕನ್ನಡ', 'ಮಹಾರಾಷ್ಟ್ರದ ಮೂಲೆ', ಶ್ರೀರಂಗರ 'ವೈದ್ಯರಾಜ', ಕಾರಂತರ 'ಮರಳಿ ಮಣ್ಣಿಗೆ' ಇತ್ಯಾದಿ ಗ್ರಂಥಗಳ ವಿಮರ್ಶೆಯನ್ನು ಮಾಡಿದ್ದಾರೆ. 'ಶಬ್ದಮಣಿ ದರ್ಪಣ' ಮತ್ತು 'ವಡ್ಡಾರಾಧನೆ' ಕೃತಿಗಳನ್ನು ಸಂಪಾದಿಸಿದ್ದಾರೆ.

ಕರ್ನಾಟಕ ಶಾಸನಾಧ್ಯಯನದ ಇತಿಹಾಸದಲ್ಲಿ ಮಾತ್ರವೇ ಅಲ್ಲದೇ ಭಾರತೀಯ ಶಾಸನಾಧ್ಯಯನದ ಇತಿಹಾಸದಲ್ಲೂ ಮಹತ್ವದ ಸ್ಥಾನ ಪಡೆದಿರುವ **ಎನ್. ಲಕ್ಷ್ಮೀನಾರಾಯಣರು** ನೆಲಮಂಗಲದವರೇ ಆಗಿದ್ದಾರೆ. ಐವತ್ತಕ್ಕೂ ಹೆಚ್ಚು ಸಂಶೋಧನಾ ಲೇಖನಗಳನ್ನು ಪ್ರಕಟಿಸಿರುವ ರಾಯರು ರಚಿಸಿರುವ ಒಂದೇ ಒಂದು ಗ್ರಂಥ ಕರ್ನಾಟಕದ ಅರಸು ಮನೆತನಗಳು ಅದನ್ನು ಅವರು ಆರ್. ಎಸ್. ಪಂಚಮುಖಿ ಅವರೊಂದಿಗೆ ಸಂಯುಕ್ತವಾಗಿ ರಚಿಸಿದ್ದಾರೆ. 'South Indian Inscriptions' ಗಳ ಹಲವು ಸಂಪುಟಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಅವುಗಳಲ್ಲಿ ಬಹಳ ಮುಖ್ಯವಾದವು ೯ನೇ ಸಂಪುಟದ ೨ನೆಯ ಭಾಗ, ೧೧ನೇ ಸಂಪುಟದ ೨ ಭಾಗಗಳು ಮತ್ತು ೧೮ನೆಯಸಂಪುಟಗಳು. ೧೮ನೇ ಸಂಪುಟವನ್ನು ಅವರು ವೃತ್ತಿಯಿಂದ ನಿವೃತ್ತರಾದ ನಂತರ ಸಂಪಾದಿಸಿ ಕೊಟ್ಟಿದ್ದಾರೆ. ಇವುಗಳಲ್ಲದೇಗಳ 'Epigraphia Indica' ಗಳ ೨೭, ೨೯ ಮತ್ತು ೩೦ನೆಯ ಸಂಪುಟಗಳನ್ನೂ ಅವರು ಸಂಪಾದಿಸಿದ್ದಾರೆ.[೨೪] ಇನ್ನೂ ಹಲವು ಸಂಪುಟಗಳನ್ನು ಪ್ರಕಟಿಸಿದ್ದಾರೆ.

ಪ್ರಖ್ಯಾತ ಇತಿಹಾಸತಜ್ಞ **ಜಿ. ಆರ್. ರಂಗಸ್ವಾಮಯ್ಯನವರು** ನೆಲಮಂಗಲ ತಾಲ್ಲೂಕಿನ ಗೋರನ ಬೆಲೆಯವರು. ಇವರು ಹೊಯ್ಸಳ ವಂಶವನ್ನು ಕುರಿತು ಶ್ಲಾಘನೀಯ ಕೆಲಸ ಮಾಡಿದ್ದಾರೆ.

ಮೈಲನಹಳ್ಳಿಯ ಡಾ. ಜಿ. ಮರುಳಸಿದ್ದಪ್ಪನವರು ಪ್ರಖ್ಯಾತ ವಿದ್ವಾಂಸರು. ಇವರು ಬಾಣ ಕಾದಂಬರಿ, ಪ್ರಭುಲೀಲೆ, ಭರತನ ನಾಟ್ಯಶಾಸ್ತ್ರ ಇತ್ಯಾದಿ ಗ್ರಂಥಗಳನ್ನು ಸಂಪಾದಿಸಿರುವ ಕೀರ್ತಿ ಇವರ ಪಾಲಿನದು.

ಈಗ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿರುವ **ಸುಧಾಕರ** ಅವರು ನೆಲಮಂಗಲ ತಾಲ್ಲೂಕಿನ ಮಲ್ಲರಬಾಣವಾಡಿಯವರು. ಪ್ರಖ್ಯಾತ ಜಾನಪದ ಸಂಶೋಧಕರು ಮತ್ತು

ಉತ್ತಮ ಕಥೆಗಾರರಾಗಿದ್ದಾರೆ. ಇವರು 'ಕಣ್ಣೆ ಕಿತ್ತ ಹಸು', 'ಗರಿಕೆ ಬೇರು', 'ಬಾಡುಮುಕ್ಕನ ಮುಳ್ಳು', 'ಪ್ರೇಮ ಸುಧಾ' ಕಥಾಸಂಕಲನಗಳು, 'ದಡ ಕುಸಿದ ಬಾವಿ' ಎಂಬ ಕಾದಂಬರಿಯೂ ವಿಶೇಷ ಗಮನ ಸೆಳೆದಿವೆ. ಇತ್ತೀಚಿಗೆ ಅವರು ಷೇಕ್ಸ್‌ಪಿಯರ್ ಕವಿಯ 'ಮ್ಯಾಕ್‌ಬತ್' ನಾಟಕವನ್ನು ಕನ್ನಡಕ್ಕೆ ಸಮರ್ಥವಾಗಿ ಅನುವಾದಿಸಿ ಬೆಳಕಿಗೆ ತಂದಿದ್ದಾರೆ.[೨೫] ಸುಧಾಕರ ಅವರ 'ಜನಪದ ಬೆಡಗಿನ ವಚನಗಳು', 'ನಮ್ಮ ಸುತ್ತಿನ ಜನಪದ ಕಥೆಗಳು', ಜಾನಪದ ಮತ್ತು ಕಲಬೆರಕೆತನ' ಇತ್ಯಾದಿ ಜಾನಪದ ಕೃತಿಗಳು ಜಾನಪದ ಅಧ್ಯಯನದಲ್ಲಿ ಅವರಿಗಿರುವ ಪರಿಶ್ರಮದ ಹೆಜ್ಜೆ ಗುರುತುಗಳಾಗಿವೆ.

ಕಥೆಗಾರರ ಪೈಕಿ ನೆಲಮಂಗಲದ ವಿಶ್ವನಾಥ ಅವರ ಹೆಸರು ಗಮನಾರ್ಹವಾದುದು. ಸುಧಾ, ಮಯೂರ, ಇತ್ಯಾದಿ ಪತ್ರಿಕೆಗಳಲ್ಲಿ ಅವರ ಹಲವಾರು ಸಣ್ಣಕಥೆಗಳು ಪ್ರಕಟವಾಗಿವೆ. ಉತ್ತಮ ಕಥೆಗಾರರಲ್ಲೊಬ್ಬರೆಂದು ಪರಿಗಣಿತರಾಗಿರುವ ನೆಲಮಂಗಲದ ವಿಶ್ವನಾಥ ಅವರ ಕಿರುಕೃತಿ 'ಮನೆದೇವರ ಸನ್ನಿಧಿಯಲ್ಲಿ' ಲಲಿತ ಪ್ರಬಂಧಗಳ ಗ್ರಂಥಕ್ಕೆ ಉದಾಹರಣೆಯಾಗಿದೆ. ಇವರ ಸಾಹಿತ್ಯ ಪ್ರೇಮಕ್ಕೆ ಈ ಕೃತಿ ಸಾಕ್ಷಿಯಾಗಿದೆ.

ಕಂಬಾಳಿನ **ಬಿ. ಸಿದ್ಧಗಂಗಯ್ಯ** ಅವರು ಜಾನಪದ ಕ್ಷೇತ್ರದಲ್ಲಿ ತುಂಬಾ ಹೆಸರು ಮಾಡಿರುವ ನಾಟಕಕಾರರು. 'ನಿಸರ್ಗಪ್ರಿಯ' ಎನ್ನುವ ಕಾವ್ಯನಾಮದಿಂದ ಬರೆಯುವ ಇವರ 'ಸ್ವರ್ಗಸ್ಥ', 'ಶುನಶ್ಯೇಪ', 'ಚೋರ ಪುರಾಣ', 'ಅಗ್ನಿ', 'ಕರಿಭಂಟ', 'ಜುಂಜಪ್ಪ', 'ತಿರುಕರಾಜ', 'ವ್ಯವಸ್ಥೆ', 'ನಿಜಗುಣ', 'ಕೆರೆಗೆ ಹಾರ', ಇತ್ಯಾದಿ ನಾಟಕಗಳು ಪ್ರಸಿದ್ಧಿ ಪಡೆದಿವೆ. 'ನಿರಿಗೆ' ಎಂಬ ಕವನ ಸಂಕಲನ, 'ಮಾತಾಡು ಮಾತಾಡು ಮಲ್ಲಿಗೆ' ಎಂಬ ಜಾನಪದ ಕೃತಿಗಳನ್ನು ಬರೆದಿದ್ದಾರೆ. ಇತ್ತೀಚಿಗೆ 'ಶ್ರೀಶಿವಗಂಗಾ ಕ್ಷೇತ್ರದ ಐತಿಹಾಸಿಕ ದಾಖಲೆಗಳು' ಎಂಬ ಹೊತ್ತಿಗೆಯನ್ನು ಪ್ರಕಟಿಸಿದ್ದಾರೆ. ಮತಕೂರು ನಂಜುಂಡ ಶಿವಯೋಗಿ 'ಭಾರವಿ' ಕೇಂದ್ರ ಸಾಹಿತ್ಯ ಅಕಾಡೆಮಿಯ ಭಾಷಾಂತರ ಕೃತಿ, 'ವೋಡಿ ಕನ್ನಡ' ಎರಡು ಗ್ರಂಥಗಳನ್ನು ರಚಿಸಿದ್ದಾರೆ. ಈ ಎಲ್ಲ ಕೃತಿಗಳು ಅವರ ಸಾಧನೆಯ ಮೈಲಿಗಲ್ಲುಗಳಾಗಿವೆ.

ವಿಮರ್ಶಕರ ಪೈಕಿ ನೆಲಮಂಗಲದವರೇ ಆದ **ಮಲ್ಲೇಪುರಂ ಜಿ. ವೆಂಕಟೇಶರವರು** ಶಂ.ಬಾ.ಜೋಷಿ ಅವರ ಸಂಶೋಧನೆಯನ್ನು ಚೆನ್ನಾಗಿ ಅರ್ಥಮಾಡಿಕೊಂಡಿರುವ ಸಹೃದಯ ವಿಮರ್ಶಕರೆಂಬ ಹೆಸರಿಗೆ ಪಾತ್ರರಾಗಿದ್ದಾರೆ. 'ತಿಳಿವ ತೇಜದ ಮುಂದೆ', 'ಕನ್ನಡಿಯ ನೋಟ' ಎಂಬ ವಿಮರ್ಶಾ ಲೇಖನಗಳು, 'ಅರಿವಿನ ಕಥನ', 'ತೌಲನಿಕ ಸಾಹಿತ್ಯ', 'ನಲ್ನುಡಿ', 'ಗಾದೆಯ ಮಾತು', ಎಂಬ ಕೃತಿಗಳು 'ಮೂರ್ಖರ ಮೇಳ' - ಅನುವಾದಿತ ನಾಟಕ, ಶಂಕರ ಬಾಳೆ ದೀಕ್ಷಿತ ಜೋಷಿಯವರ ಜೀವನ ಚರಿತ್ರೆ ಇತ್ಯಾದಿ ಕೃತಿಗಳನ್ನು ಬರೆದಿದ್ದಾರೆ.

ನೆಲಮಂಗಲ ತಾಲ್ಲೂಕಿನ ಅರಿಶಿನಕುಂಟೆಯಲ್ಲಿ ವಾಸವಾಗಿರುವ **ಡಾ. ಎಚ್. ಎಸ್. ಗೋಪಾಲರಾವ್** ರವರು ಸಾಹಿತಿಯಾಗಿ, ಇತಿಹಾಸಕಾರರಾಗಿ ಗುರುತಿಸಿಕೊಂಡು, 'ಜೇನು-ನಂಜು', 'ಗತಿ', 'ಭಿನ್ನ', 'ಪರಿಗ್ರಹಣ', ಮುಂತಾದ ಕಾದಂಬರಿಗಳನ್ನು ಬರೆದಿದ್ದಾರೆ. 'ಗುಲ್ಬುಟ್ಟಿ-ಮುನ್ಬುಟ್ಟಿ' ಎಂಬ ಮಕ್ಕಳ ನಾಟಕವನ್ನೂ ಪ್ರಕಟಿಸಿದ್ದಾರೆ. ಕರ್ನಾಟಕ ಇತಿಹಾಸಕ್ಕೆ ಸಂಬಂಧಿಸಿದ ಹಲವು ಕೃತಿಗಳು ಪ್ರಕಟವಾಗಿವೆ. 'ಕರ್ನಾಟಕ ಏಕೀಕರಣ ಇತಿಹಾಸ' ಇವರ ಮೇರು ಕೃತಿಯಾಗಿದೆ.

**ಎನ್. ವಿಜಯೇಂದ್ರ ರಾವ್** ಇವರು ದಾಸ ಸಾಹಿತ್ಯದ ಪರಿಚಾರಕರಾಗಿ ಕವನ, ಚುಟುಕು, ದೇವರ ನಾಮಗಳು, ನಾಟಕಗಳನ್ನು ಬರೆದಿದ್ದಾರೆ. ಹರಿದಾಸರ ಸಾಹಿತ್ಯ ಪ್ರಚಾರಕ್ಕಾಗಿ ಭಜನಾಮಂಡಳಿಗಳನ್ನು ಸ್ಥಾಪಿಸಿದ್ದಾರೆ. ನುಡಿನಮನ ಧ್ವನಿಸುರುಳಿಯಲ್ಲಿ ಪ್ರಕಟವಾಗಿರುವ ಗೀತೆಗಳಿಗೆ ಸಾಹಿತ್ಯ ರಚಿಸಿದ್ದಾರೆ. ಇವರು

ಗುರು ಶ್ರೀಪತಿ ವಿಠಲ ಎಂಬ ಅಂಕಿತನಾಮದಿಂದ ಶ್ರೀ ರಾಘುವೇಂದ್ರಸ್ವಾಮಿ, ಗಣಪತಿ, ಪಾರ್ವತಿ, ರುದ್ರದೇವರು ಮುಂತಾದ ದೇವರನ್ನು ಸ್ತುತಿಸಿ ೮೦ ಕ್ಕೂ ಹೆಚ್ಚು ದೇವರ ನಾಮಗಳನ್ನು ರಚಿಸಿದ್ದಾರೆ.

**ತ್ಯಾಮಗೊಂಡ್ಲ ಅಂಬರೀಶ್** (ಟಿ. ಜಿ. ಅಂಬರೀಶ್) ಅವರು ಸಾಹಿತಿಯಾಗಿ, ಆಳ, ಗರ್ಭ, ಮುಕ್ತಾ ಕಾದಂಬರಿಗಳು, ಮೂಕಸಾಕ್ಷಿ, ಕಬ್ಬ, ಲೆಕ್ಕಾಚಾರ ಎಂಬ ಕವನ ಸಂಕಲನಗಳನ್ನು ಬರೆದಿದ್ದಾರೆ. ಅವರು 'ನಾಯಿ ಹಾಲಿನ ಕಾಫಿ' ಎಂಬ ಲಲಿತ ಪ್ರಬಂಧವನ್ನು ಬರೆದಿದ್ದಾರೆ. ಇವರು ಕಥೆಗಾರರು ಆಗಿದ್ದು ತರಂಗ, ಅಭಿಮಾನಿ, ಸುಧಾ, ಮಂಗಳ ಇತ್ಯಾದಿ ಪತ್ರಿಕೆಗಳಲ್ಲಿ ಅವರ ಕಥೆಗಳು ಪ್ರಕಟವಾಗಿವೆ. ಇವರ 'ಅಗ್ನಿ ಪರ್ವತ' ನಾಟಕವು ಆಕಾಶವಾಣಿಯಲ್ಲಿ ಹಲವು ಬಾರಿ ಬಿತ್ತರಗೊಂಡಿದೆ.

**ಎಚ್. ಎಸ್. ನಾಗೇಶರಾವ್** ಅವರು ಪತ್ರಕರ್ತರಾಗಿದ್ದು ಷೇಕ್ಸ್‌ಪಿಯರ್‌ನ 'ಟೆಂಪೆಸ್ಟ್' ಅನ್ನು 'ಪ್ರೇತದ್ವೀಪ' ಎಂದೂ, ಅಗಸ್ಟ್ ಸ್ಟ್ರಿನ್ ಬರ್ಗ್‌ನ 'ಡ್ಯಾನ್ಸ್ ಆಫ್ ದಿ ಡೆತ್' ಅನ್ನು 'ಸಾವಿನ ಸುತ್ತು' ಹೆಸರಿನಲ್ಲಿ ರೂಪಾಂತರಗೊಳಿಸಿದ್ದಾರೆ. ಅಲ್ಲದೇ ಇವುಗಳು ರಂಗಭೂಮಿಯ ಮೇಲೆ ಯಶಸ್ವಿ ಪ್ರಯೋಗಗಳಾಗಿವೆ.[೨೫] ಇವರು ದೂರದರ್ಶನದ ಹಲವು ಧಾರಾವಾಹಿಗಳಿಗೆ ಸಾಹಿತ್ಯವನ್ನೂ ಒದಗಿಸಿದ್ದಾರೆ.

ನೆಲಮಂಗಲದ **ನೆ. ಸು. ಕೃಷ್ಣಮೂರ್ತಿ** ಅವರು 'ಕನ್ನಡ ಪ್ರಭ' ಪತ್ರಿಕೆಯಲ್ಲಿ ಉಪಸಂಪಾದಕರಾಗಿದ್ದು ಹಲವು ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ.

**ಎನ್. ವೆಂಕಟರಾಮಯ್ಯನವರು** 'ರಾಷ್ಟ್ರೀಯ ಉತ್ತಮ ಶಿಕ್ಷಕ' ಪ್ರಶಸ್ತಿ ಪಡೆದವರಾಗಿದ್ದು, ಇವರೂ ಕೂಡ ಸಾಹಿತ್ಯ ರಚನೆ ಮಾಡಿದ್ದಾರೆ. 'ಅರ್ಘ್ಯ' ಎಂಬ ಕವನ ಸಂಕಲನ, 'ರಾಮಚಂದ್ರ ಉಡುಪ' ಎಂಬ ಕಥೆಗಳನ್ನು ಬರೆದಿದ್ದಾರೆ.

ಇವರಲ್ಲದೇ ಇತ್ತೀಚಿನ ದಿನಗಳಲ್ಲಿ ಬಿ. ಎಸ್. ರಾಘುವೇಂದ್ರ ರಾವ್, ನೆ. ವಿ. ವಾಸುದೇವಶರ್ಮಾ, ತ್ಯಾ. ಚ. ಶೇಖರ್, ಸಂಗಮೇಶ ಹೋಳೇಚಿ, ಸಿ. ಆರ್. ಸುಂದರೇಶ್, ರಮೇಶ್, ಇನ್ನೂ ಮುಂತಾದ ತರುಣ ಕವಿಗಳು ಮತ್ತು ಎನ್. ಎಚ್. ಉಮಾ, ಎಸ್. ತಾರಾ ಇತ್ಯಾದಿ ಕವಯಿತ್ರಿಯವರು ಕಾವ್ಯ ರಚನೆಯಲ್ಲಿ ತೊಡಗಿದ್ದಾರೆ.

### ೫.೫. ಪ್ರೇಕ್ಷಣೀಯ ಸ್ಥಳಗಳು

ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆಯಿಂದ ಶ್ರೀಮಂತವಾಗಿರುವ ಹಲವು ನಗರಗಳು, ಪಟ್ಟಣಗಳು, ಗ್ರಾಮಗಳು, ಗಿರಿಧಾಮಗಳು, ಇತರ ತಾಣಗಳು ಪ್ರೇಕ್ಷಣೀಯ ಸ್ಥಳಗಳಾಗಿವೆ. ಇವುಗಳಲ್ಲಿ ಕೆಲವು ಸ್ಥಳಗಳು, ಕೋಟೆ, ದೇಗುಲ, ಚರ್ಚ್, ಮಸೀದಿ ಮತ್ತಿತರ ಪ್ರಾಚೀನ ಸ್ಮಾರಕಗಳಿಂದ ಕೂಡಿ ಪುರಾತತ್ವದ ಅವಶೇಷಗಳಿಂದಾಗಿ ಪ್ರಸಿದ್ಧವಾಗಿವೆ. ಹಲವು ಸ್ಥಳಗಳು ಧಾರ್ಮಿಕ ಮಹತ್ವವುಳ್ಳವಾಗಿವೆ. ಇನ್ನೂ ಕೆಲವು ಸ್ಥಳಗಳು ಉದ್ಯಾನಗಳಿಂದ ಮತ್ತು ಪ್ರಕೃತಿ ಸೌಂದರ್ಯಗಳಿಂದಾಗಿ ಖ್ಯಾತವಾಗಿವೆ. ಈ ಬಗೆಯ ಸ್ಥಳಗಳನ್ನು ನೆಲಮಂಗಲ ತಾಲ್ಲೂಕಿನ ದೃಷ್ಟಿಯಿಂದ ಪರಿಚಯಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

#### ೫.೫.೧. ನೆಲಮಂಗಲ

ನೆಲಮಂಗಲವು ಐತಿಹಾಸಿಕ ಮಹತ್ವವುಳ್ಳ ಸಾಂಸ್ಕೃತಿಕ ಕೇಂದ್ರವಾಗಿ ಜನರನ್ನು ಆಕರ್ಷಿಸಿದೆ. ನೆಲಮಂಗಲ - ತುಮಕೂರು ರಾಷ್ಟ್ರೀಯ ಹೆದ್ದಾರಿ ನಂ.೪ ಕ್ಕೆ ಹೊಂದಿಕೊಂಡಂತೆ ಬೆಂಗಳೂರಿನಿಂದ ೨೭ ಕಿ.ಮೀ. ದೂರದಲ್ಲಿರುವ

ತಾಲ್ಲೂಕು ಕೇಂದ್ರ 'ನೆಲಮಂಗಲ'ವಾಗಿದೆ. ಕ್ರಿ.ಶ. ೧೪೬೪ ರ ಶಾಸನವು ಕನಸವಾಡಿಯ ವಿಜಯನಗರದ ಸಾಮಂತನೊಬ್ಬನ ಆಡಳಿತದ ಕಾಲಾವಧಿಯಲ್ಲಿ 'ನೆಲಮಂಗಲ'ವು ಈ ಸೀಮೆಯ ಕೇಂದ್ರವಾಗಿದ್ದ ವಿಷಯವನ್ನು ತಿಳಿಸುತ್ತದೆ. ನೆಲಮಂಗಲದಲ್ಲಿ ರುದ್ರೇಶ್ವರ, ಅಡಿಕೆ, ಆಂಜನೇಯ, ಗಣೇಶ, ಕಾಶೀವಿಘ್ನೇಶ್ವರ, ಬಸವಣ್ಣ ಹಾಗೂ ಇನ್ನಿತರ ದೇವಾಲಯಗಳಿವೆ. ಬಸ್‌ನಿಲ್ದಾಣದ ಹತ್ತಿರ ಒಂದು ಮಸೀದಿಯೂ ಇದೆ.[೨೨] ಬಯಲು ಗಣಪತಿ ದೇವಾಲಯವಿದ್ದು, ಪ್ರತಿ ವರ್ಷವು ಇಲ್ಲಿ ಜಾತ್ರೆ ಹಾಗೂ ಉತ್ಸವವು ಮಾರ್ಚ್ ತಿಂಗಳಿನಲ್ಲಿ ಜರುಗುತ್ತದೆ. ಇದನ್ನು 'ಕಡಲೇಕಾಯಿ ಪರೀಷೆ' ಎಂದು ಕರೆಯುವದು ಜನರ ವಾಡಿಕೆಯಾಗಿದೆ.

ನೆಲಮಂಗಲ ತಾಲ್ಲೂಕಿಗೆ ಸೇರಿದ ಭಿನ್ನಮಂಗಲ ವಿಶ್ವಶಾಂತಿ ಆಶ್ರಮ, ಮಣ್ಣೆ ಅಥವಾ ಮಾನ್ಯಪುರ, ಶಿವಗಂಗೆ, ನಿಜಗಲ್ಲು, ದೇವರ ಹೊಸಹಳ್ಳಿ, ಮಹಿಮಾಪುರ, ಇವೇ ಮೊದಲಾದವು ಐತಿಹಾಸಿಕ, ರಮಣೀಯ ದೃಶ್ಯಗಳಿಂದ, ಸಾಹಿತ್ಯ, ಸಂಸ್ಕೃತಿ, ದೇವಾಲಯಗಳ ವಾಸ್ತುಶಿಲ್ಪ, ಕಲೆಗಳ ವೈಭವದಿಂದ ಜನರನ್ನು ಆಕರ್ಷಿಸುವ ಪ್ರೇಕ್ಷಣೀಯ ಸ್ಥಳಗಳಾಗಿವೆ.

**೫.೫.೨. ಭಿನ್ನಮಂಗಲ**

ನೆಲಮಂಗಲದಿಂದ ಸುಮಾರು ೩ ಕಿ.ಮೀ. ದೂರದಲ್ಲಿರುವ ಒಂದು ಸಣ್ಣ ಗ್ರಾಮವಾಗಿದ್ದು, ಹೆದ್ದಾರಿಯ ಪಕ್ಕದಲ್ಲಿ ಅರಸಿನಕುಂಟೆ ಕರೆಯ ಕೋಡಿಯ ಮೂಲಕ ಇಲ್ಲಿರುವ ಮುಕ್ತಿನಾಥೇಶ್ವರ ದೇವಾಲಯವನ್ನು ತಲುಪಬಹುದು. ಈ ಭಿನ್ನಮಂಗಲವು ವಿಶಿಷ್ಟವಾದ ಚೋಳರ ಕಾಲದ ದೇವಾಲಯದಿಂದ ಪ್ರಸಿದ್ಧಿಯಾಗಿದ್ದು, ಇಲ್ಲಿನ ದೇವಾಲಯವು ವಾಸ್ತುಶಿಲ್ಪದ ಮೇರು ವೈಭವದಿಂದ ಜನರನ್ನು ಆಕರ್ಷಿಸುವ ಪ್ರೇಕ್ಷಣೀಯ ಸ್ಥಳವಾಗಿದೆ. ಕ್ರಿ.ಶ. ೧೧೧೦ರ ಚೋಳರ ಶಾಸನವು 'ವಿನ್ನಮಂಗಲ' ಎಂಬ ಹೆಸರನ್ನು ಉಲ್ಲೇಖಿಸಿದೆ. ಕ್ರಿ.ಶ. ೧೦೩೮ ರಲ್ಲಿ ರಾಜೇಂದ್ರ ಚೋಳನ ಕಾಲದಲ್ಲಿ 'ಮುಕ್ತಿನಾಥೇಶ್ವರ ದೇವಾಲಯ'ವು ನಿರ್ಮಾಣಗೊಂಡಿದ್ದು, ಕ್ರಿ.ಶ. ೧೧೧೦ರಲ್ಲಿ ಕುಲೋತ್ತುಂಗ ಚೋಳ ರಾಜನ ೪೧ನೆಯ ಆಳ್ವಿಕೆಯ ಕಾಲದಲ್ಲಿ ಈ ದೇವಾಲಯಕ್ಕೆ ನಕ್ಕೂರು ಗ್ರಾಮವನ್ನು ದಾನವಾಗಿ ನೀಡಿದ್ದಾನೆ.[೨೩] ಎಂಬುದನ್ನು ತಿಳಿಯಬಹುದು. ಮೊದಲು ಇದೊಂದು ಅಗ್ರಹಾರವೂ ಆಗಿತ್ತು. ಇಲ್ಲಿ ಶೈವ ಮತ್ತು ವೈಷ್ಣವ ಧರ್ಮಗಳ ಸಮನ್ವಯತೆಯನ್ನು ನೋಡಬಹುದು.

ಈ ದೇವಾಲಯದ ಗರ್ಭಗೃಹವು ನಾಲ್ಕು ಮೂಲೆಗಳಲ್ಲೂ ನಾಲ್ಕು ಕಂಬಗಳನ್ನು ಹೊಂದಿದೆ. ಪಾಣಿಪೀಠವು ಚೌಕಾಕಾರವಾಗಿದ್ದು, ಕಂಬಗಳ ಮೇಲೆ ಕುಳಿತಿರುವ ಭೈರವ, ಗಣಪತಿ ಹಾಗೂ ಮಹಿಷಾಸುರಮರ್ಧಿನಿಯ ಶಿಲ್ಪಗಳು ಇಲ್ಲಿವೆ. ಈ ಶಿಲ್ಪಗಳನ್ನು ಗಮನಿಸಿದರೆ ವಿಜಯನಗರದ ಕಾಲದಲ್ಲಿ ಜರ್ಣೋದ್ಧಾರಗೊಂಡಿದೆ ಎಂದು ಹೇಳಬಹುದು. ಪ್ರವೇಶದ್ವಾರದಲ್ಲಿ ಎರಡು ಕಡೆಗಳಿಗೂ ಸೂರ್ಯ ಮತ್ತು ಚಂದ್ರರ ಕೆತ್ತನೆಗಳಿವೆ. ಬಾಗಿಲುವಾಡದ ಮೇಲೆ ಎರಡೂ ಕಡೆ ಕೆತ್ತನೆಗಳಿದ್ದು, ಸಂಗೀತ ವಾದ್ಯಗಳನ್ನು ನುಡಿಸುತ್ತಿರುವ ಸಂಗೀತಗಾರರ ಭಾವನಾಭರಿತ ಶಿಲ್ಪಗಳಿವೆ. ಈ ರೀತಿಯಾಗಿ ಇಲ್ಲಿನ ದೇವಾಲಯದ ವಾಸ್ತುಶಿಲ್ಪ ಶೈಲಿಯಿಂದ ಈ ಸ್ಥಳವು ಪ್ರಾಮುಖ್ಯತೆ ಹೊಂದಿ ಪ್ರೇಕ್ಷಕರನ್ನು ಆಕರ್ಷಿಸುತ್ತಿದೆ. ಆದರೆ ಈ ದೇವಾಲಯಕ್ಕೆ ಯಾವುದೇ ರೀತಿಯ ರಕ್ಷಣೆಯಿಲ್ಲ. ಮುಂದಿನ ದಿನಗಳಲ್ಲಿ ನಾಶವಾಗುವ ಸಂಭವ ಉಂಟು.

**೫.೫.೩. ವಿಶ್ವಶಾಂತಿ ಆಶ್ರಮ**

ನೆಲಮಂಗಲದ ಅರಸಿನಕುಂಟೆಯ ಹೊರಭಾಗದಲ್ಲಿ ರಾಷ್ಟ್ರೀಯ ಹೆದ್ದಾರಿ- ೪ ಕ್ಕೆ ಹೊಂದಿಕೊಂಡಂತೆ ಇರುವ ಈ ಸ್ಥಳವು ಸುಮಾರು ೩೦ ಅಡಿ ಎತ್ತರದ ವಿಠಲನ ವಿಗ್ರಹದ ಮೂಲಕ ಧಾರ್ಮಿಕ ಕ್ಷೇತ್ರವಾಗಿ

ಜನರನ್ನು ತನ್ನತ್ತ ಸೆಳೆಯುತ್ತದೆ. ಈ ಆಶ್ರಮವು ಭದ್ರಗಿರಿ ಅಚ್ಯುತದಾಸ ಹಾಗೂ ಕೇಶವದಾಸರ ಪರಿಶ್ರಮದ ಫಲವಾಗಿ ಸ್ಥಾಪನೆಯಾಯಿತು. ಶ್ರೀಕೃಷ್ಣನ ವಿಶ್ವರೂಪ ದರ್ಶನದ ಬೃಹತ್ ವಿಗ್ರಹ ಇಲ್ಲಿದೆ. ಮಹಾಭಾರತದ ಕುರುಕ್ಷೇತ್ರ ಯುದ್ಧದ ಸಮಯದಲ್ಲಿ ಶ್ರೀಕೃಷ್ಣನು ಅರ್ಜುನನ ಸಾರಥಿಯಾಗಿ ಭಗವದ್ಗೀತೆಯ ವಾಣಿಯನ್ನು ಉಪದೇಶ ಮಾಡಿದ ಶ್ಲೋಕಗಳನ್ನು ವಿಠಲನ ಮಂದಿರದ ಒಳಭಾಗದ ಸುತ್ತಲೂ ಬಿಡಿಸಲಾಗಿದೆ. ಅಲ್ಲದೇ ಸಾರಾಂಶವನ್ನು ಕೊಡಲಾಗಿದೆ. ಈ ಶ್ಲೋಕಗಳು ಮಾನವನ ಬದುಕನ್ನು ಹಸನುಗೊಳಿಸುತ್ತವೆ. ಮಂದಿರದ ಮುಂಭಾಗದಲ್ಲಿ ಅರ್ಜುನನಿಗೆ ಕೃಷ್ಣನು ಸಾರಥಿಯಾಗಿರುವ ಮೂರ್ತಿಯನ್ನು ಸುಂದರವಾಗಿ ಕಟ್ಟಲಾಗಿದೆ. ಈ ಆಶ್ರಮವು ವೈಷ್ಣವ ಧರ್ಮದ ಪ್ರತೀಕವಾಗಿದೆ.

ವಿಠಲನ ವಿಗ್ರಹವು ೩೦ ಅಡಿ ಎತ್ತರವಿದ್ದು ಕಪ್ಪುಶಿಲೆಯಿಂದ ಕೆತ್ತಿದ ಮೂರ್ತಿಯಾಗಿದೆ. ಗಣೇಶ, ಗಾಯಿತ್ರಿ, ರಾಮ, ಆಂಜನೇಯ, ದತ್ತಾತ್ರೇಯ ಇತ್ಯಾದಿ ದೇವಾಲಯಗಳೂ ಇವೆ. ಭವ್ಯವಾದ ವಿಠಲನ ವಿಗ್ರಹವನ್ನು ನೋಡಲು ಸಾವಿರಾರು ಜನರು ಬರುತ್ತಾರೆ. ಜನರ ಕುತೂಹಲ ಮತ್ತು ಆಕರ್ಷಣೆಗೆ ಒಳಗಾಗಿ ಇದೊಂದು ಪ್ರೇಕ್ಷಣೀಯ ಸ್ಥಳವಾಗಿದೆ.

### ೫.೫.೪. ಮಣ್ಣೆ ಅಥವಾ ಮಾನ್ಯಪುರ

ಮಣ್ಣೆ ಅಥವಾ ಮಾನ್ಯಪುರವು ಐತಿಹಾಸಿಕ ಮಹತ್ವವುಳ್ಳ ಪ್ರೇಕ್ಷಣೀಯ ಸ್ಥಳವಾಗಿದೆ. ಸುಮಾರು ೮ ಮತ್ತು ೯ನೇ ಶತಮಾನಗಳಲ್ಲಿ ಗಂಗರ ರಾಜನೆಲೆವೀಡು ಆಗಿತ್ತು. ಇಲ್ಲಿ ಕಂಡುಬರುವ ದೇವಾಲಯಗಳು, ಬಸದಿ, ಮೂರ್ತಿ ಶಿಲ್ಪಗಳು, ಶಾಸನಗಳು ಇದರ ವಿಶೇಷತೆಯನ್ನು ಸಾರುವ ಪ್ರತೀಕವಾಗಿವೆ. ಗಂಗರ ಪ್ರಸಿದ್ಧ ದೊರೆ ಶ್ರೀಪುರುಷನ ಕಾಲದಲ್ಲಿ ಈಗಿನ ಮಣ್ಣೆಯು ಮಾನ್ಯಪುರ ಎಂಬ ಹೆಸರಿನಿಂದ ರಾಜನೆಲೆವೀಡಾಗಿ ಪ್ರಸಿದ್ಧಿ ಪಡೆದಿತ್ತು.[೨೮] ಅಲ್ಲಿನ ಶಾಸನಗಳು ಬಸದಿ, ದೇವಾಲಯಗಳಿಗೆ ಗ್ರಾಮಗಳನ್ನು ದಾನದತ್ತಿಯಾಗಿ ಬಸದಿ, ದೇವಾಲಯಗಳಿಗೆ ಗ್ರಾಮಗಳನ್ನು ದಾನದತ್ತಿಯಾಗಿ ನಿಡಿದ ಉಲ್ಲೇಖವನ್ನು ಪರಿಚಯಿಸುತ್ತದೆ. ರಾಜಕೀಯವಾಗಿ ಮಣ್ಣೆ ಪ್ರಸಿದ್ಧಿಯನ್ನು ಹೊಂದಿದೆ.

ಶ್ರೀವಿಜಯ ಜಿನಾಲಯ (ಸೂಳೆಯರ ಗುಡಿ), ಕಪಿಲೇಶ್ವರ ದೇವಾಲಯ, ಅಕ್ಕ-ತಂಗಿಯರ ಗುಡಿ, ಇಡೀ ಭಾರತದ ಪುರಾತನವಾದ ಸೂರ್ಯ ವಿಗ್ರಹಗಳಲ್ಲಿ ಒಂದಾದ ಮಾನ್ಯಪುರದ ಸೂರ್ಯವಿಗ್ರಹ ಹಾಗೂ ಸಪ್ತಮಾತೃಕೆಯರು, ಗಣಪತಿ ವಿಗ್ರಹ, ಬಹುಸುಂದರವಾದ ಮತ್ತು ಎತ್ತರವಾದ ಈಶ್ವರಲಿಂಗ, ವೀರಶಿಲೆಗಳು, ಭೈರವಿ, ಜಿನಮೂರ್ತಿಗಳಂತಹ ಶಿಲ್ಪಕಲಾಕೃತಿಗಳು ಜನರನ್ನು ಆಕರ್ಷಿಸಿವೆ. ಅಲ್ಲದೇ ಮಣ್ಣೆಯ ಶೈಕ್ಷಣಿಕ ಕೇಂದ್ರವಾಗಿದ್ದು, ಜೈನ, ಶೈವ ಧರ್ಮಗಳ ಸಮನ್ವಯಕ್ಕೂ ಹೆಸರುವಾಸಿಯಾಗಿದೆ. ಆದರೆ ಇತ್ತೀಚಿಗೆ ಈ ಸ್ಥಳದಲ್ಲಿನ ದೇವಾಲಯಗಳು ರಕ್ಷಣೆಯಿಲ್ಲದೇ ಹಾಳಾಗುತ್ತಿವೆ.

### ೫.೫.೫. ಶಿವಗಂಗೆ

ನೆಲಮಂಗಲ ತಾಲ್ಲೂಕಿನ ವಾಯುವ್ಯಕ್ಕೆ ದಾಬಸಪೇಟೆಯಿಂದ ೬ ಕಿ.ಮೀ.ದೂರದಲ್ಲಿರುವ ಪವಿತ್ರ ಗಿರಿಕ್ಷೇತ್ರ ಶಿವಗಂಗೆಯಾಗಿದೆ. ಇದು ಧಾರ್ಮಿಕ ಕ್ಷೇತ್ರವಾಗಿ ಯಾತ್ರಿಕರನ್ನು ಆಕರ್ಷಿಸುವ ದಕ್ಷಿಣಕಾಶಿಯಾಗಿ ಪ್ರೇಕ್ಷಣೀಯ ಸ್ಥಳವಾಗಿದೆ. ಅಲ್ಲದೇ ಪ್ರಕೃತಿ ಸೌಂದರ್ಯದ ಮಡಿಲಿನಲ್ಲಿರುವ ಶಿವಗಂಗೆಯು ಪ್ರವಾಸಿಗರನ್ನು ತನ್ನತ್ತ ಸೆಳೆಯುತ್ತದೆ. ಸುಮಾರು ೪,೫೬೦ ಅಡಿಗಳಷ್ಟು ಎತ್ತರದಲ್ಲಿರುವ ಶಿವಗಂಗೆ ಬೆಟ್ಟವನ್ನು ಪುರಾಣಗಳಲ್ಲಿ ಕಕುದ್ಗಿರಿ

ಎಂದು ಹೇಳಲಾಗಿದೆ. ಈ ಶಿವಗಂಗೆಯು ಪೂರ್ವದಲ್ಲಿ ವೃಷಭನಂತೆ, ಪಶ್ಚಿಮದಲ್ಲಿ ಗಣೇಶನಂತೆ, ಉತ್ತರದಲ್ಲಿ ಸರ್ಪದಂತೆ ಹಾಗೂ ದಕ್ಷಿಣಕ್ಕೆ ಲಿಂಗದಂತೆ ಕಾಣುತ್ತದೆ.

ಕ್ರಿ.ಶ. ೧೧ನೇ ಶತಮಾನದಲ್ಲಿ ವಿಶೇಷ ಪ್ರಾಶಸ್ತ್ಯ ಪಡೆದಿದ್ದ ಶಿವಗಂಗೆಯು ಹೊಯ್ಸಳರು, ವಿಜಯನಗರದ ಅರಸರು, ಯಲಹಂಕದ ಪಾಳೆಯಗಾರರು ಮತ್ತು ಮೈಸೂರು ಮಹಾರಾಜರುಗಳಿಂದ ಪೋಷಿಸಲ್ಪಟ್ಟಿವೆ. ಹೊಯ್ಸಳರ ದೊರೆ ವಿಷ್ಣುವರ್ಧನನ ಪಟ್ಟಮಹಿಷಿ ನಾಟ್ಯರಾಣಿ ಶಾಂತಲೆ ಕ್ರಿ.ಶ. ೧೧೩೧ ರಂದು ಶಿವಗಂಗೆಯಲ್ಲಿ ಸಲ್ಲೇಖನ ವ್ರತವನ್ನು ಕೈಗೊಂಡು ಆತ್ಮಾರ್ಪಣೆ ಮಾಡಕೊಂಡಳೆಂದು ಕ್ರಿ.ಶ. ೧೧೩೧ ರ ಶ್ರವಣಬೆಳಗೊಳದ ಶಾಸನದಿಂದ ತಿಳಿದುಬರುತ್ತದೆ. ಶಾಂತಲೆ ಮೃತಳಾದ ಸ್ಥಳವೆಂಬ ಕಾರಣದಿಂದಲೂ ಶಿವಗಂಗೆ ಖ್ಯಾತಿಗೆ ಬಂದಿದ್ದು, ಈತಳ ನೆನಪಿಗಾಗಿ ಶಾಂತಲೇಶ್ವರ ದೇವಾಲಯ ನಿರ್ಮಾಣಗೊಂಡಿದೆ.

ಬೆಟ್ಟದ ತಪ್ಪಲಿನಲ್ಲಿ ಅಗಸ್ತ್ಯೇಶ್ವರ ತೀರ್ಥ ಮತ್ತು ಕಮರಿ ತೀರ್ಥ ಎಂದೂ ಕರೆಯಲಾಗುವ ದೊಡ್ಡ ಕಲ್ಯಾಣಿಗಳು ಯಾತ್ರಿಕರನ್ನು ಬಹುವಾಗಿ ಆಕರ್ಷಿಸುತ್ತವೆ. ಬೆಟ್ಟವನ್ನು ಹತ್ತಲು ಮೆಟ್ಟಿಲುಗಳಿದ್ದು, ಅಲ್ಲದೇ ಮಂಟಪಗಳೂ ಇವೆ. ಬೆಟ್ಟದ ಉತ್ತರಭಾಗದಲ್ಲಿ ಗಂಗಾಧರೇಶ್ವರ ಮತ್ತು ಹೊನ್ನಾದೇವಿ ದೇವಾಲಯಗಳಿದ್ದು, ಈ ಎರಡೂ ದೇವಾಲಯಗಳು ನೈಸರ್ಗಿಕ ಗವಿಗಳಲ್ಲಿ ಇದ್ದು, ಶಿವಗಂಗೆಯ ಪ್ರಮುಖ ಆಕರ್ಷಣೆಯಾಗಿವೆ.[೨೯] ಗಂಗಾಧರೇಶ್ವರ ದೇವಾಲಯದಲ್ಲಿರುವ ಶಿವಲಿಂಗಕ್ಕೆ ತುಪ್ಪ ಸವರಿದರೆ ಬೆಣ್ಣೆಯಾಗಿ ಪರಿವರ್ತನೆಯಾಗುವುದು ಇಲ್ಲಿನ ಆಶ್ಚರ್ಯಕರ ಸಂಗತಿ. ಶಿವಗಂಗೆಯಲ್ಲಿ ಮಕರ ಸಂಕ್ರಾಂತಿಯ ದಿನದಂದು ಸಂಭ್ರಮದಿಂದ ವಿಶಿಷ್ಟ ಪೂಜೆಗಳು ನಡೆಯುತ್ತವೆ. ಇದನ್ನು ಸ್ಥಳೀಯ ಜನರು ಗಂಗಪ್ಪನ ಧಾರೆ ಎಂದು ಕರೆಯುವುದುಂಟು. ಇಲ್ಲಿನ ಒರಳುಕಲ್ಲು ತೀರ್ಥ ಪುಣ್ಯವಂತರಿಗೆ ಮಾತ್ರ ಲಭ್ಯವೆಂದು ಜನರು ಇಂದಿಗೂ ನಂಬಿದ್ದಾರೆ. ಶಿವಗಂಗೆಯಲ್ಲಿ ೬೪ ವೀರಶೈವ ಮಠಗಳಿದ್ದವೆಂದು ಉಲ್ಲೇಖವಾಗಿದ್ದು ಈಗ ಮೇಲಣ ಗವಿಮಠ, ಶಾರದ ಮಠಗಳು ಉಳಿದಿವೆ. ಈ ಮಠಗಳು ಧಾರ್ಮಿಕವಾಗಿ ಪ್ರಾಮುಖ್ಯತೆ ಗಳಿಸುವಂತೆ ಶೈಕ್ಷಣಿಕವಾಗಿಯೂ ವಿದ್ಯಾಕೇಂದ್ರಗಳಾಗಿದ್ದವು. ಇಲ್ಲಿ ಶೃಂಗೇರಿಯ ಶಾಖಾ ಮಠವೊಂದಿದೆ. ಅದರ ಜೊತೆಗೆ ಇರುವ ಶಾರದಾದೇವಿಯ ದೇವಾಲಯವು ಪ್ರೇಕ್ಷಣೀಯವಾಗಿದೆ. ಬೆಟ್ಟದ ತುದಿಯಲ್ಲಿ ಕಲ್ಲಿನ ಕೋಡುಗಲ್ಲು ಬಸವನ ವಿಗ್ರಹವು, ದೀಪ ಕಂಬವು ವಿಶೇಷತೆಯನ್ನು ಹೊಂದಿದೆ.

ಕಲೆ ಮತ್ತು ವಾಸ್ತು ಶಿಲ್ಪ ಸಾಹಿತ್ಯದ ಸಾಂಸ್ಕೃತಿಕ ಬಿಂಬವಾಗಿ ಕಾಣುತ್ತಿದ್ದ ಶಿವಗಂಗೆಯು ಇಂದು ತನ್ನ ಗತ ವೈಭವವನ್ನು ಕಳೆದುಕೊಳ್ಳುತ್ತಿದ್ದು ಜನರು ಅದರತ್ತ ಗಮನ ಹರಿಸಿ ಸಂರಕ್ಷಿಸಬೇಕಾಗಿದೆ.

**೪.೫.೬. ನಿಜಗಲ್ಲು**

ಬೆಂಗಳೂರಿನಿಂದ ರಾಷ್ಟ್ರೀಯ ಹೆದ್ದಾರಿ ೪ಕ್ಕೆ ಹೊಂದಿಕೊಂಡಂತೆ ೪೮.ಕಿ.ಮೀ. ದೂರದಲ್ಲಿನ ನಿಜಗಲ್ಲು ಐತಿಹಾಸಿಕವಾಗಿ ಮಹತ್ವವುಳ್ಳ ಪ್ರೇಕ್ಷಣೀಯ ಸ್ಥಳವಾಗಿದೆ. ಈ ಸ್ಥಳಕ್ಕೆ ನಿಜಗಲಿಪುರ, ಶೂರಗಿರಿ, ನಿಜಗಲ್ಲು ಎಂದು ಹೆಸರಿತ್ತೆಂದು ಶಾಸನಗಳು ತಿಳಿಸುತ್ತವೆ. ಇಲ್ಲಿನ ಮಲ್ಲಿಕಾರ್ಜುನ ದೇವಾಲಯವು ದಾನ-ದತ್ತಿಗಳನ್ನು ಪಡೆದಿದೆ. ದುರ್ಗದ ಮೇಲೆ ಲಕ್ಷ್ಮೀನರಸಿಂಹ, ವಿಘ್ನೇಶ್ವರ ಗುಡಿಗಳೂ ನಿರ್ಮಾಣಗೊಂಡಿವೆ. ಇಲ್ಲಿ ಮುಖ್ಯವಾಗಿ ೧೨ ಅಡಿ ಎತ್ತರವಾದ ಉದ್ಭಾನ ವೀರಭದ್ರಸ್ವಾಮಿ ದೇವಾಲಯವೂ ಇದೆ. ಅಕ್ಕ-ತಂಗಿಯರ ದೊಣೆ, ಕಂಚಿನ ದೊಣೆ, ಸಿದ್ಧರ ದೊಣೆ, ಆನೆ ದೊಣೆಗಳಿವೆ. ಇಲ್ಲಿನ ಶ್ರೀ ನರಸಿಂಹ ದೇವಾಲಯ ಯುದ್ಧದಲ್ಲಿ ಹಾಳಾದ ಬಳಿಕ ಊರಿನ ಒಳಗಡೆ ಸ್ಥಾಪನೆ ಗೊಂಡಿದೆ.

ದಳವಾಯಿ ನಂಜರಾಜಯ್ಯನ ಆಡಳಿತದ ಕಾಲದಲ್ಲಿ ನಿಜಗಲ್ಲು ವೈಭವದಿಂದ ಮೆರೆದಿತ್ತು. ನಂತರ ಹೈದರಾಲಿಗೂ ಮತ್ತು ಮರಾಠರಿಗೂ ಯುದ್ಧ ನಡೆದ ಸಂದರ್ಭದಲ್ಲಿ ಹೈದರಾಲಿ ಇದನ್ನು ವಶಪಡಿಸಿಕೊಂಡನು. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ನಿಜಗಲ್ಲು ತಾಲ್ಲೂಕಾಗಿತ್ತು. ನಂತರ ಹೋಬಳಿಯಾಯಿತು.

ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಆಡಳಿತ ಘಟಕವಾಗಿತ್ತು. ಮುಂದೆ ಗ್ರಾಮ ಪಂಚಾಯಿತಿಗೆ ಸೇರಿಕೊಂಡಿತು. ಹೀಗೆ ನಿಜಗಲ್ಲು ಐತಿಹಾಸಿಕ ಮಹತ್ವವುಳ್ಳದಾಗಿದೆ. ಈ ದುರ್ಗ ೩೫೬೨ ಅಡಿ ಎತ್ತರವಾಗಿದ್ದು, ವಿಶಾಲವಾದ ಆವರಣ, ತಂಪಾದ ತಾಣವನ್ನು ಹೊಂದಿದೆ. ಸರ್ಕಾರ ಇದರತ್ತ ಗಮನ ಹರಿಸಿದರೆ ನಂದಿದುರ್ಗದಂತೆ ಇದು ಒಂದು ಉತ್ತಮ ಗಿರಿಧಾಮವಾಗಬಹುದು.

**೪.೫.೭. ದೇವರ ಹೊಸಹಹಳ್ಳಿ**

ದೇವರ ಹೊಸಹಳ್ಳಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕಿನ ರಾಷ್ಟ್ರೀಯ ಹೆದ್ದಾರಿ ನಂ.೪ಕ್ಕೆ ಹೊಂದಿ ಕೊಂಡಂತೆ ತುಮಕೂರಿಗೆ ಸಮೀಪವಾಗಿದ್ದು, ಧಾರ್ಮಿಕ ಕ್ಷೇತ್ರವಾಗಿ ಪ್ರೇಕ್ಷಣೀಯ ಸ್ಥಳವಾಗಿದೆ. ನೆಲಮಂಗಲ ತಾಲ್ಲೂಕಿನ ಗಡಿತಾಣೆ ದೇವರ ಹೊಸಹಳ್ಳಿ ತುಮಕೂರಿನ ಜೊತೆಯಲ್ಲೇ ಹೆಚ್ಚು ಸಂಪರ್ಕವಿರಿಸಿಕೊಂಡಿರುವ ಈ ಊರು ಶಿವಗಂಗೆ ದೇವರಾಯದುರ್ಗದ ನಡುವಿನ ಗುಡ್ಡಸಾಲಿನಲ್ಲಿದೆ. ಇಲ್ಲಿರುವ ಶಾಸನದ ಪ್ರಕಾರ ವಿಜಯನಗರದ ಕಾಲಕ್ಕಾಗಲೇ ಪ್ರಸಿದ್ಧಿ ಪಡೆದಿತ್ತು. ಇದು ವೀರಶೈವ ಮತ್ತು ವೈಷ್ಣವ ಧರ್ಮಗಳೆರಡರ ಮಿಳಿತವನ್ನು ಒಳಗೊಂಡಿದೆ.

ದೇವರ ಹೊಸಹಳ್ಳಿಯಲ್ಲಿ ವೀರಭದ್ರೇಶ್ವರ ದೇವಾಲಯವನ್ನು ಬೆಟ್ಟದ ಮೇಲೆ ಕಟ್ಟಲಾಗಿದೆ. ಇಲ್ಲಿ ಮುಪ್ಪಿನ ವೀರಭದ್ರ ಮತ್ತು ಯುಪ್ಪಿನೇಶ್ವರ ಮೂರ್ತಿಗಳನ್ನು ನೋಡಬಹುದು. ವೀರಶೈವದ ಜನರು ಇಲ್ಲಿನ ದೇವರನ್ನು ಮನೆದೇವರಾಗಿ ಒಪ್ಪಿಕೊಂಡು ಪೂಜೆಗಳನ್ನು ಸಲ್ಲಿಸುತ್ತಾ ಬಂದಿದ್ದಾರೆ. ಯುಗಾದಿಯ ನಂತರ ಜಾತ್ರೆ ಉತ್ಸವಗಳು ನಡೆಯುತ್ತವೆ. ಇಲ್ಲಿ ಪ್ರಕೃತಿ ಸೌಂದರ್ಯವು ಸುಂದರವಾಗಿದ್ದು, ಜನರು ಇದರತ್ತ ಗಮನ ಹರಿಸಿದರೆ ಇದೊಂದು ಗಿರಿಧಾಮವನ್ನಾಗಿಸಬಹುದು.

**೫.೬. ಪ್ರಶಸ್ತಿ ಪುರಸ್ಕೃತ ಮಹನೀಯರು**

'ಮಾನವ ಜನ್ಮ ಶ್ರೇಷ್ಠವಾದುದು. ಅದ ಹಾನಿ ಮಾಡಿಕೊಳ್ಳಬೇಡಿರಿ ಹುಚ್ಚಪ್ಪಗಳಿರಾ' ಎನ್ನುವ ಪುರಂದರದಾಸರ ನುಡಿಯಂತೆ ಪ್ರತಿಯೊಬ್ಬ ವ್ಯಕ್ತಿಯು ತನ್ನ ಜೀವಿತಾವಧಿಯಲ್ಲಿ ಒಂದಲ್ಲ ಒಂದು ಒಳ್ಳೆಯ ಕಾರ್ಯ ಮಾಡಿದ್ದು ನೆನಪಿನಲ್ಲಿ ಉಳಿಯಬಲ್ಲದು. ಯಾವುದೇ ಒಂದು ಪ್ರದೇಶದಲ್ಲಿ ಹಲವಾರು ಕ್ಷೇತ್ರಗಳಿದ್ದು, ಒಬ್ಬರಿಗಿಂತ ಒಬ್ಬರು ಈ ಕ್ಷೇತ್ರಗಳಲ್ಲಿ ಸಾಧನೆ ಮಾಡಿ ವಿಶೇಷವಾಗಿರುತ್ತಾರೆ. ನಾಡು-ನುಡಿ, ಕಲೆ, ಸಂಸ್ಕೃತಿ ಮತ್ತು ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿರುತ್ತಾರೆ. ಅದರಂತೆ ನೆಲಮಂಗಲ ತಾಲ್ಲೂಕಿನಲ್ಲಿಯೂ ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಹೀಗೆ ಯಾವುದೇ ಕ್ಷೇತ್ರಗಳಿದ್ದರೂ, ಒಂದೊಂದು ಕ್ಷೇತ್ರದಲ್ಲಿ ವ್ಯಕ್ತಿಗಳು ತಮ್ಮನ್ನು ತಾವು ಗುರುತಿಸಿಕೊಂಡು ನಮ್ಮ ನಾಡು-ನುಡಿ, ಕಲೆ, ಸಂಸ್ಕೃತಿ ಮತ್ತು ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿ ಅನೇಕ ಪ್ರಶಸ್ತಿ-ಪುರಸ್ಕಾರಗಳನ್ನು ಪಡೆದುಕೊಂಡಿದ್ದಾರೆ ಎಂಬುದನ್ನು ಇಲ್ಲಿ ವಿವೇಚಿಸಬಹುದು.

**೫.೬.೧. ಸಾಹಿತಿಗಳು**

ಸಾಹಿತ್ಯ ಎಲ್ಲಾ ಕಾಲದಲ್ಲೂ, ಎಲ್ಲಾ ಜನ ಸಮುದಾಯದಲ್ಲೂ ವಿಶಿಷ್ಟ ಮನ್ನಣೆ ಪಡೆಯುತ್ತದೆ. ನೆಲಮಂಗಲ ತಾಲ್ಲೂಕಿನ ಸಾಹಿತ್ಯ ಕೃಷಿ ವಿಶೇಷತೆಯಿಂದ ಕೂಡಿದ್ದು, ಪ್ರಾಚೀನ ಸಾಹಿತ್ಯ, ದಾಸ ಸಾಹಿತ್ಯ, ಅಲ್ಲದೇ ಆಧುನಿಕ ಕಾಲದ ಕಾದಂಬರಿ, ಕಥೆ, ಕಾವ್ಯ, ನಾಟಕ, ಹೀಗೆ ಹಲವು ಹತ್ತು ಪ್ರಕಾರಗಳಲ್ಲಿ ತನ್ನದೇ ಆದ ಸಾಹಿತ್ಯ ಚರಿತ್ರೆಯನ್ನು ನಿರ್ಮಿಸಿಕೊಂಡ ತಾಲ್ಲೂಕು ಇದಾಗಿದ್ದು, ಅನೇಕ ಪ್ರಶಸ್ತಿ ಪುರಸ್ಕೃತ ಸಾಹಿತಿಗಳನ್ನು ಇಲ್ಲಿ ಪರಿಚಯಿಸಲಾಗಿದೆ.

**ಡಾ. ಡಿ. ಎಲ್. ನರಸಿಂಹಾಚಾರ್:** ಕನ್ನಡ ಸಾಹಿತ್ಯ ಮತ್ತು ಸಂಶೋಧನಾ ಕ್ಷೇತ್ರಗಳಲ್ಲಿ ಡಾ. ಡಿ. ಎಲ್. ನರಸಿಂಹಾಚಾರ್‌ರವರ ಹೆಸರು ಚಿರಸ್ಥಾಯಿಯಾಗಿರುವುದು. ಇವರು ಅಕ್ಟೋಬರ್ ೨೭ನೇ ೧೯೦೬ ರಂದು ಅಜ್ಜನ ಮನೆ ಚಿಕ್ಕನಾಯಕನಹಳ್ಳಿಯಲ್ಲಿ ಜನಿಸಿದರೂ, ತಮ್ಮ ಪೂರ್ವಿಕರ ಕುರುಹಾಗಿ ಅವರ ಹೆಸರಿನೊಂದಿಗೆ ನೆಲಮಂಗಲ ಸೇರಿಕೊಂಡಿತು. ಹೈಸ್ಕೂಲು ವಿದ್ಯಾಭ್ಯಾಸದ ಸಮಯದಲ್ಲಿ ರಾಜಶೇಖರ ವಿಳಾಸ, ಗದಾಯುದ್ಧ, ಛಂದೋಬದಿಗಳ ಅಧ್ಯಯನ ನಡೆಸಿದ ಇವರು ಬಿ.ಎಂ.ಶ್ರೀ. ಅವರ ಪ್ರಭಾವದಿಂದಾಗಿ 'ದೊಡ್ಡ ಮನುಷ್ಯರು ಯಾರು?' ಮತ್ತು 'The Story of cotton seed' ಎಂಬ ಲೇಖನಗಳನ್ನು ಬರೆದರು.

ಕನ್ನಡಕ್ಕೆ ದೊರೆತ ಮೊದಲ ಸಂಶೋಧನಾ ವೇತನ ಪಡೆದ ನರಸಿಂಹಾಚಾರ್‌ರವರು 'ವೀರಶೈವ ಸಾಹಿತ್ಯ ಉಗಮ' ಎಂಬ ನಿಬಂಧವನ್ನು ಸಿದ್ಧಪಡಿಸಿದರು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಕೆಲವು ವರ್ಷಗಳ ಕಾಲ ಪ್ರಾಧ್ಯಾಪಕರಾಗಿದ್ದರು. ಸಕಲ ವೈದ್ಯ ಸಂಹಿತ್ಯಾ ಸಾರಾರ್ಣವ, ಬೀಷ್ಮಪರ್ವ ಕೃತಿಗಳನ್ನು ರಚಿಸಿದರು. ಸಂಶೋಧನಾ-ವಿಮರ್ಶಾ ಕ್ಷೇತ್ರಗಳಲ್ಲಿ ನರಸಿಂಹಾಚಾರ್ಯರು ಪರಿಣಿತಿ ಹೊಂದಿದ್ದು, ಅವರು ಸಂಪಾದಿಸಿರುವ ಪಂಪರಾಮಾಯಣ ಸಂಗ್ರಹ, ಸುಕುಮಾರ ಚರಿತೆ, ಸಿದ್ಧರಾಮ ಚರಿತೆ ಕೃತಿಗಳ ವಿಮರ್ಶಾತ್ಮಕ ಮುನ್ನುಡಿಗಳನ್ನು ಬರೆದರು. ೧೯೬೪ರಲ್ಲಿ 'ಕನ್ನಡ ಗ್ರಂಥ ಸಂಪಾದನೆ' ಕೃತಿಯನ್ನು ನೀಡಿದರು. ಶಂ. ಬಾ. ಅವರ 'ಕಣ್ಮರೆಯಾದ ಕನ್ನಡ', ರಂ. ಶ್ರೀ. ಮುಗಳಿಯವರ Heritage of Karnataka, ಕಾರಂತರ 'ಮರಳಿ ಮಣ್ಣಿಗೆ' ಇತ್ಯಾದಿ ಗ್ರಂಥಗಳ ವಿಮರ್ಶೆ ಮಾಡಿದ್ದಾರೆ.[೬೦] ಅವರು ಸಂಪಾದಿಸಿರುವ 'ಶಬ್ದಮಣಿ ದರ್ಪಣಂ' ಮತ್ತು ಮತ್ತು 'ವಡ್ಡಾರಾಧನೆ' ಕೃತಿಗಳು ಕನ್ನಡ ಸಾಹಿತ್ಯ ವಿದ್ಯಾರ್ಥಿಗಳಿಗೆ ಅಮೂಲ್ಯ ಆಸ್ತಿಗಳಾಗಿವೆ. ೧೯೬೦ರಂದು ಬೀದರ್‌ನಲ್ಲಿ ನಡೆದ ೪೧ನೇ ಸಾಹಿತ್ಯಸಮ್ಮೇಳನದ ಅಧ್ಯಕ್ಷರೂ ಆಗಿದ್ದರು.

**ಸುಧಾಕರ :** ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿರುವ ಸುಧಾಕರರವರು ನೆಲಮಂಗಲ ತಾಲ್ಲೂಕಿನ ಮಲ್ಲರಬಾಣವಾಡಿಯವರಾಗಿದ್ದಾರೆ. ಕಣ್ಣೆ ಕಿತ್ತ ಹಸು ಎಂಬ ಕಥಾ ಸಂಕಲನದ ಮೂಲಕ ಶ್ರೇಷ್ಠ ಕಥೆಗಾರರಾಗಿ, ನಂತರ ಸಾಹಿತ್ಯವಲಯದಲ್ಲಿ ದೊಡ್ಡ ಸಾಹಿತಿಗಳಾಗಿ ಜಾನಪದ ಸಂಶೋಧಕರಾಗಿ ಗುರುತಿಸಿಕೊಂಡರು.

'ಗರಿಕೆ ಬೇರು', 'ಬಾಡು ಮುಕ್ಕನ ಮುಳ್ಳು', 'ಪ್ರೇಮ ಸುಧಾ' ಮೊದಲಾದ ಕಥಾಸಂಕಲನಗಳನ್ನು ಪ್ರಕಟಿಸಿದರು. 'ಜಲದ ಕಣ್ಣು' ಎಂಬ ಕಥೆಯು ಸುಧಾ ಕಥಾ ಸ್ಪರ್ಧೆಯಲ್ಲಿ ಬಹುಮಾನ ಪಡೆಯಿತು. ಇವರ ಬಹುತೇಕ ಕೃತಿಗಳಲ್ಲಿ ವರ್ಗಸಂಘರ್ಷ ಕೇಂದ್ರಪ್ರಜ್ಞೆಯಾಗಿದ್ದು, ದಲಿತರ ನೋವು, ಬಂಡವಾಳಶಾಹಿಗಳ ಕುಟಿಲತೆ ಬಿಂಬಿತವಾಗಿರುತ್ತದೆ. 'ನಮ್ಮ ಸುತ್ತಿನ ಗಾದೆಗಳು', 'ಜನಪದ ಬೆಡಗಿನ ವಚನಗಳು', 'ಒಡಚುವ ಕಥೆಗಳು', 'ಶಿವಗಂಗೆ ಸುತ್ತಿನ ಜನಪದ ಕಥೆಗಳು' ಮೊದಲಾದ ಜಾನಪದ ಸಂಗ್ರಹವನ್ನು ಈ ಕೃತಿಗಳಲ್ಲಿ ಕಾಣಬಹುದು. 'ಜಾನಪದ ಮತ್ತು ಕಲಬೆರಕೆತನ' ಕೃತಿಯು ಜಾನಪದ ಸಂಶೋಧನಾ ವಿಮರ್ಶಾತ್ಮಕ ಗ್ರಂಥವಾಗಿದೆ. ಕೃತಿ ಚೌರ್ಯದಂತಹ ಕೆಲಸ ಮಾಡುವವರನ್ನು ಸಾಂದರ್ಭಿಕ ಉದಾಹರಣೆಗಳೊಂದಿಗೆ ತೌಲನಿಕವಾಗಿ ಅಧ್ಯಯನ ಮಾಡಿರುವುದು ಮಹತ್ವದ ಸಂಗತಿ. ಈ ಗ್ರಂಥಕ್ಕೆ ಕರ್ನಾಟಕ ಜಾನಪದ ಅಕಾಡೆಮಿ ಪ್ರಶಸ್ತಿ ಬಂದಿದೆ. ಷೇಕ್ಸ್‌ಪಿಯರ್‌ನ ಮ್ಯಾಕ್‌ಬತ್ ನಾಟಕವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. 'ದಿಟ', 'ಕೊಚ್ಚಿಕೊಳ್ಳು', 'ದೌಡಾಡು' ಎಂಬ ಗ್ರಾಮ್ಯ ಪದಗಳು ಅವರಿಗೆ ಕೀರ್ತಿ ತಂದವು. ಸುಧಾಕರರವರು ಸತತ ಪರಿಶ್ರಮದಿಂದ ಉತ್ತಮ ಸಂಶೋಧಕರಾಗಿ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದಿದ್ದಾರೆ.

**ಸಿದ್ಧಗಂಗಯ್ಯ ಕಂಬಾಳು :** 'ನಿಸರ್ಗಪ್ರಿಯ' ಎಂಬ ಕಾವ್ಯನಾಮದಿಂದ ಜನಪದ ಸಾಹಿತ್ಯ, ಶಿಷ್ಟಸಾಹಿತ್ಯ ಮತ್ತು ರಂಗಭೂಮಿಯಲ್ಲಿ ತಮ್ಮದೇ ಆದ ಛಾಪು ಮೂಡಿಸಿರುವ ಹಿರಿಯ ಲೇಖಕ ಸಿದ್ಧಗಂಗಯ್ಯ ಕಂಬಾಳು ಅವರು ನೆಲಮಂಗಲ ತಾಲ್ಲೂಕಿನ ಕಂಬಾಳು ಗ್ರಾಮದವರು.

ಶಿಕ್ಷಣ, ಸಾಹಿತ್ಯ ಮತ್ತು ಸಾರ್ವಜನಿಕ ಕ್ಷೇತ್ರದಲ್ಲಿ ಪ್ರಸಿದ್ಧಿ ಪಡೆದಿರುವ ಕಂಬಾಳರು ಸೃಜನಶೀಲ ಲೇಖಕರಾಗಿದ್ದಾರೆ. ವಿಶ್ವವಿದ್ಯಾಲಯದ ಅತಿಥಿ ಉಪನ್ಯಾಸಕರಾಗಿ, ಸಂಪನ್ಮೂಲ ವ್ಯಕ್ತಿಯಾಗಿ ಪಿ.ಯು. ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿ, ರಾಜ್ಯ ಪತ್ರಾಗಾರ ಇಲಾಖೆಯಲ್ಲಿ ಪತ್ರಪಾಲಕರಾಗಿ ಹಾಗೂ ವಿವಿಧ ಸಾರ್ವಜನಿಕ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ್ದಾರೆ.

ಇವರ 'ಬೆನಕನಕೆರೆ' ಕೃತಿಯು ಪುರಾತನ ಪರಂಪರೆಯನ್ನು ಆಧುನಿಕ ಚಿಂತನೆಗಳೊಂದಿಗೆ ಮುಖಾ ಮುಖಿಗೊಳಿಸುವ ಕ್ರಿಯೆ ಆಗಿದ್ದು, ಮನುಷ್ಯನ ಒಳವಿವೇಕವನ್ನು ಜಾಗೃತಗೊಳಿಸುವುದು. ಇವರು ರಚಿಸಿದ 'ಕಂಬಾಳು' ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ. 'ಶ್ರೀ ಶಿವಗಂಗಾ ಐತಿಹಾಸಿಕ ದಾಖಲೆಗಳು', 'ಭಾರವಿ', 'ಮತಕೂರು', 'ನಂಜುಂಡ ಶಿವಯೋಗಿ', ಕೃತಿಗಳನ್ನು ರಚಿಸಿದ್ದಾರೆ. 'ಮೈಥಿಲಿ' ಕಾದಂಬರಿ ಧಾರವಾಹಿಯಾಗಿ ಪ್ರಕಟನೆಗೊಂಡು ಅಪಾರ ಮನ್ನಣೆ ಗಳಿಸಿವೆ.

ಸಿದ್ಧಗಂಗಯ್ಯ ಕಂಬಾಳರು ಸ್ನಾತಕೋತ್ತರ ವಿದ್ಯಾರ್ಥಿಯಾಗಿದ್ದಾಗ ಸಂಗ್ರಹಿಸಿದ ಮಾತಾಡು ಮಲ್ಲಿಗೆ ಎಂಬ ಜಾನಪದ ಸಾಹಿತ್ಯ ಸಂಗ್ರಹವನ್ನು ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಂಗವು ಪ್ರಕಟಿಸಿ ಅವರ ಪ್ರತಿಭೆಗೆ ಪುರಸ್ಕಾರವನ್ನೂ ನೀಡಿತು. ಇವರು ಬೆನಕನಕೆರೆ, ಶುನಶ್ಯೇಪ, ಸ್ವರ್ಗಸ್ಥ, ಅಗ್ನಿ, ಕಂಭಂಟ, ಜುಂಜಪ್ಪ, ತಿರುಕರಾಜ, ಚೋಳಪುರಾಣ, ವ್ಯವಸ್ಥೆ, ನಿಜಗುಣ ಇನ್ನೂ ಅನೇಕ ನಾಟಕಗಳನ್ನು ರಚಿಸಿದ್ದಾರೆ.

ಸಿದ್ಧಗಂಗಯ್ಯ ಕಂಬಾಳರ ಪ್ರತಿಭೆಗೆ ತಕ್ಕಂತೆ ಅನೇಕ ಪ್ರಶಸ್ತಿ-ಪುರಸ್ಕಾರಗಳು ಲಭಿಸಿವೆ. ರಂಗ ಸಂಪದ (೧೯೮೦) ಪ್ರಶಸ್ತಿ, ಸ್ವರ್ಗಸ್ಥ (೧೯೮೩) ಮತ್ತು ಚೋರ ಪುರಾಣಕ್ಕೆ (೧೯೮೪) ನಾಟಕ ಅಕಾಡೆಮಿ ಪ್ರಶಸ್ತಿ, ನಂಜುಂಡ ಶಿವಯೋಗಿ ಮತ್ತು ಕಂಬಾಳು ಕೃತಿಗೆ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವ ಸಾಹಿತ್ಯ ಪ್ರಶಸ್ತಿ (೧೯೮೩), ಕರ್ನಾಟಕ ಜಾನಪದ ಅಕಾಡೆಮಿ (೧೯೮೫) ಪ್ರಶಸ್ತಿ, ಉಡುಪಿ ರಂಗಭೂಮಿ ಪ್ರಶಸ್ತಿ (೧೯೯೦), ಸಮಗ್ರ ಜನಪದ ಸೇವೆ ಪರಿಗಣಿಸಿ ಜಾನಪದ ಲೋಕ (೨೦೦೦) ಪ್ರಶಸ್ತಿ, ಇವೇ ಮೊದಲಾದ ಪ್ರಶಸ್ತಿಗಳನ್ನು ಸಿದ್ಧಗಂಗಯ್ಯ ಕಂಬಾಳರು ಪಡೆದಿದ್ದಾರೆ. ಶ್ರೀಯುತರ ರಂಗಭೂಮಿಯಯ ಸಮಗ್ರ ಸೇವೆಯನ್ನು ಪರಿಗಣಿಸಿದ ಕರ್ನಾಟಕ ನಾಟಕ ಅಕಾಡೆಮಿ ಗೌರವ ಫೆಲೋ ಪ್ರಶಸ್ತಿ (೨೦೦೦)ಯನ್ನು ನೀಡಿದೆ.[೨೨] ವಿಶ್ವೇಶ್ವರಯ್ಯ ಪ್ರಶಸ್ತಿ (೨೦೦೨) ಸಂದಿದೆ. ಹೀಗೆ ಕರ್ನಾಟಕದ ಸಾಹಿತ್ಯ, ಜಾನಪದ, ನಾಟಕ ಅಕಾಡೆಮಿಗಳು, ಸಾರ್ವಜನಿಕ ಸಂಘ-ಸಂಸ್ಥೆಗಳು, ರಂಗ ಸಂಘಟನೆಗಳು ಇವೇ ಮೊದಲಾದ ಸಂಸ್ಥೆಗಳಿಂದ ಹಲವು ಪ್ರಶಸ್ತಿಗೆ ಭಾಜನರಾಗಿದ್ದಾರೆ. ಸಿದ್ಧಗಂಗಯ್ಯ ಕಂಬಾಳರು ನೆಲಮಂಗಲ ತಾಲ್ಲೂಕಿನ ೩ನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿರುವುದು ತಾಲ್ಲೂಕು ಪರಿಷತ್ತಿಗೆ ಸಂದ ಗೌರವವಾಗಿದೆ. ಅಲ್ಲದೇ ಜನವರಿ ೨೦೦೨ ರಲ್ಲಿ ಜೈಪುರದ ಅಖಿಲಭಾರತ ಸರ್ವಭಾಷಾ ಕವಿ ಸಮ್ಮೇಳನದಲ್ಲಿ ಕರ್ನಾಟಕವನ್ನು ಪ್ರತಿನಿಧಿಸಿ ಕವಿತಾ ವಾಚನ ಮಾಡಿ ನೆಲಮಂಗಲ ತಾಲ್ಲೂಕಿಗೆ ಮಾತ್ರವಲ್ಲದೇ ಕರ್ನಾಟಕಕ್ಕೆ ಕೀರ್ತಿಯ ಕಳಶವಾಗಿ ಆದರ್ಶಪ್ರಾಯವಾಗಿದ್ದಾರೆ.

**ಮಲ್ಲೇಪುರಂ ಜಿ. ವೆಂಕಟೇಶ್:** ಸಹೃದಯ ವಿಮರ್ಶಕರಾದ ಮಲ್ಲೇಪುರಂ ಜಿ. ವೆಂಕಟೇಶ್‌ರವರು ಶಂ. ಬಾ. ಜೋಷಿ ಅವರ ಸಂಶೋಧನೆಯನ್ನು ಆಳವಾಗಿ ಅಭ್ಯಾಸ ಮಾಡಿದ್ದಾರೆ. ಅದಕ್ಕಾಗಿ ಇವರಿಗೆ ೧೯೯೬ ರಲ್ಲಿ 'ಶಂ. ಬಾ. ಜೋಷಿ ಪ್ರಶಸ್ತಿ' ಲಬಿಸಿದೆ. ಇವರ ಸಮಗ್ರ ಸಾಹಿತ್ಯಕ್ಕೆ ೧೯೯೮ರಲ್ಲಿ 'ಆರ್ಯಭಟ ಪ್ರಶಸ್ತಿ'

ಬಂದಿದೆ. ಇವರು ತಿಳವತೇಜದ ಮುಂದೆ ಕೃತಿಗೆ 'ವರ್ಧಮಾನ ಪ್ರಶಸ್ತಿ'ಯನ್ನು ೨೦೦೧ ರಲ್ಲಿ ಪಡೆದುಕೊಂಡಿದ್ದಾರೆ. ಇವರಿಗೆ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಿಸಿದ 'ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ'ಯು ೨೦೦೪ರಲ್ಲಿ ನೀಡಲಾಗಿದೆ.ಇವರ ಜೀವಮಾನದ ಸಾಧನೆಗಾಗಿ ಕನ್ನಡ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿಯು ೨೦೦೬ರಲ್ಲಿ ಬಂದಿದೆ. ಪ್ರಸ್ತುತ ಇವರು ಕರ್ನಾಟಕ ಸರ್ಕಾರ ಸ್ಥಾಪಿಸಿರುವ ಸಂಗೀತ ವಿಶ್ವವಿದ್ಯಾಲಯದ ಪ್ರಥಮ ವಿಶೇಷ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

**ತ್ಯಾಮಗೊಂಡ್ಲು ಅಂಬರೀಶ್:** ತ್ಯಾಮಗೊಂಡ್ಲು ಅಂಬರೀಶ್‌ರವರು ಅನೇಕ ಕಾದಂಬರಿಗಳು, ಕವನ ಸಂಕಲನಗಳು ಮತ್ತು ನಾಟಕಗಳನ್ನು ಬರೆಯುವುದರ ಮೂಲಕ ಸಾಹಿತ್ಯ ಕ್ಷೇತ್ರದಲ್ಲಿ ಗುರುತಿಸಿಕೊಂಡವರು. ಇವರಿಗೆ ೨೦೦೫ರಲ್ಲಿ ಇವರ ಸಮಗ್ರ ಸಾಹಿತ್ಯಕ್ಕೆ 'ನಗೆ ಮಲ್ಲಿಗೆ ಪ್ರಶಸ್ತಿ' ಲಭಿಸಿದೆ. ಇವರು ನಾಯಿ ಹಾಲಿನ ಕಾಫಿ ಎಂಬ ಲಲಿತ ಪ್ರಬಂಧಕ್ಕೆ 'ಕಾಸರಗೋಡು ಕರಾವಳಿ ಸಾಹಿತ್ಯ ಪ್ರತಿಷ್ಠಾನ ಪ್ರಶಸ್ತಿ'ಯನ್ನು ೨೦೦೮ರಲ್ಲಿ ಪಡೆದಿದ್ದಾರೆ.

**೫.೬.೨. ಇತಿಹಾಸಕಾರರು**

**ಎನ್. ಲಕ್ಷ್ಮೀನಾರಾಯಣರಾಯರು:** ನೆಲಮಂಗಲ ಲಕ್ಷ್ಮೀನಾರಾಯಣರಾಯರು ಕರ್ನಾಟಕದ ಶಾಸನಾಧ್ಯಯನ ಇತಿಹಾಸದಲ್ಲಿ ಮಾತ್ರವಲ್ಲದೇ ಭಾರತೀಯ ಶಾಸನಾಧ್ಯಯನ ಇತಿಹಾಸದಲ್ಲೂ ಮಹತ್ವದ ಸ್ಥಾನ ಪಡೆದಿದ್ದಾರೆ. ಇವರು ಸುಬ್ಬಣ್ಣ ಮತ್ತು ಲಕ್ಷ್ಮೀದೇವಮ್ಮರ ಮಗನಾಗಿ ೧೯೪೮ ರ ಮೇ ೧೫ ರಂದು ನೆಲಮಂಗಲದಲ್ಲಿ ಜನಿಸಿದರು. ಇವರ ಪೂರ್ವಿಕರ ಊರು ಬೇರೆಯಾದರೂ, ವಿದ್ಯಾಭ್ಯಾಸ ಕೊಡಿಸಿ ಭವಿಷ್ಯ ರೂಪಿಸಿದ ತನ್ನ ತಾಯಿಯ ಕಡೆಯ ಸಂಬಂಧಿಗಳ ಊರಾದ ನೆಲಮಂಗಲವನ್ನೇ ತನ್ನ ಹೆಸರಿನೊಂದಿಗೆ ಸೇರಿಸಿಕೊಂಡರು. ಇವರು ಎಂ.ಎ. ಪದವಿಯನ್ನು ಪಡೆದ ನಂತರ ಭಾರತ ಸರ್ಕಾರದ ಶಾಸನ ತಜ್ಞರಾಗಿ ಸೇವೆ ಸಲ್ಲಿಸಿ ಭಾರತೀಯ ಮುಖ್ಯ ಶಾಸನತಜ್ಞರಾಗಿ ನಿವೃತ್ತಿ ಹೊಂದಿದರು.

ದಕ್ಷಿಣಭಾರತದ ಶಾಸನದ ಐದು ಸಂಪುಟಗಳನ್ನು ಪ್ರಕಟಿಸಿದರು. 'Epigraphia Indica'ಗಳ ೨೭, ೨೯ ಮತ್ತು ೩೦ನೇ ಸಂಪುಟಗಳನ್ನು ಅವರು ಸಂಪಾದಿಸಿದ್ದಾರೆ. ರಾಷ್ಟ್ರಕೂಟರ ೩ನೇ ಕೃಷ್ಣನ ಪ್ರಶಸ್ತಿ ಶಾಸನ, ಲಕ್ಕುಂಡಿಯ ಅತ್ತಿಮಬ್ಬೆಯ ಶಾಸನಗಳನ್ನು ಬೆಳಕಿಗೆ ತಂದರು. ಆರ್. ಎಸ್. ಪಂಚಮುಖಿಯವರ ಜೊತೆಗೆ ಕರ್ನಾಟಕ ಅರಸು ಮನೆತನಗಳು ಎಂಬ ಗ್ರಂಥವನ್ನು ಬರೆದಿದ್ದು, ಕದಂಬರು, ಬಾದಾಮಿ ಚಾಲುಕ್ಯರು, ಮೊದಲಾದ ಮನೆತನಗಳ ಸುದೀರ್ಘ ಲೇಖನ ಬರೆದಿದ್ದಾರೆ. ಶಾಸನಗಳ ಅಧ್ಯಯನದಲ್ಲಿ ತೊಡಗಿ ಸೇವೆ ಸಲ್ಲಿಸಿದ್ದಕ್ಕೆ ಅನೇಕ ಪ್ರಶಸ್ತಿಗಳು ಬಂದಿವೆ. ಬೆಂಗಳೂರು ಮಿಥಿಕ್ ಸೊಸೈಟಿಯು ತನ್ನ ವಜ್ರಮಹೋತ್ಸವದ ಕಾಲಕ್ಕೆ ೧೯೭೩ರಲ್ಲಿ ಅವರನ್ನು ಗೌರವಿಸಿತು.[೬೬] ಶಾಸನ ಸಂಶೋಧನಾ ಕಾರ್ಯದ ಮೂಲಕ ಈ ಕ್ಷೇತ್ರದಲ್ಲಿ ಎನ್. ಲಕ್ಷ್ಮೀನಾರಾಯಣರ ಹೆಸರಿನ ಮೂಲಕ ನೆಲಮಂಗಲದ ಹೆಸರು ಚಿರಸ್ಥಾಯಿಯಾಗಿರುತ್ತದೆ.

**ಎಚ್. ಎಸ್. ಗೋಪಾಲರಾವ್:** ಎಚ್, ಎಸ್, ಗೋಪಾಲರಾವ್‌ರವರು ಸಾಹಿತಿಯಾಗಿ, ಇತಿಹಾಸಕಾರರಾಗಿ ಗುರುತಿಸಿಕೊಂಡು ಕರ್ನಾಟಕ ಇತಿಹಾಸ ಮತ್ತು ಶಾಸನಾಧ್ಯಯನದಲ್ಲಿ ತೊಡಗಿದ್ದಾರೆ. ಇವರು ಮೂಲತಃ ಇಂಜಿನಿಯರ್ (ಕೆ.ಪಿ.ಟಿ. ಸಿ.ಎಲ್.) ಅಗಿ ಸೇವೆ ಸಲ್ಲಿಸಿದ್ದರೂ ಕರ್ನಾಟಕದ ಪ್ರಷ್ಟಿತ ಅಕಾಡೆಮಿಯಾದ ಕರ್ನಾಟಕ ಇತಿಹಾಸ ಅಕಾಡೆಮಿಯ ಕಾರ್ಯದರ್ಶಿಯಾಗಿ, ಸಂಸ್ಥಾಪಕರಾಗಿ ಹಲವಾರು ವರ್ಷಗಳಿಂದ ದುಡಿಯುತ್ತಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ವಿಭಾಗದ ಶಾಸನ ಶಾತ್ರ ವಿಷಯದ ಎಂ.ಎ.ಪದವಿಯಲ್ಲಿ ಎರಡು ಚಿನ್ನದ ಪದಕ ಮತ್ತು ಅದೇ ವಿಭಾಗದ ದಕ್ಷಿಣಭಾರತದ ಅಧ್ಯಯನ ಸಂಸ್ಥೆಯಲ್ಲಿ

'ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣಿ ಚಾಲುಕ್ಯರ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ವಿಷಯದಡಿಯಲ್ಲಿ ಪಿಎಚ್.ಡಿ. ಅಧ್ಯಯನಕ್ಕೆ ಒಂದು ಚಿನ್ನದ ಪದಕ ಪಡೆದಿದ್ದಾರೆ. ಇವರು ಕರ್ನಾಟಕ ಸಂಸ್ಕೃತಿಗೆ ಸಂಬಂಧಿಸಿದಂತೆ ಅನೇಕ ಕೃತಿಗಳನ್ನು ಬರೆದಿದ್ದಾರೆ. ಅಲ್ಲದೆ ಇವರಿಂದ ನೂರಾರು ಲೇಖನಗಳು ಪ್ರಕಟಗೊಂಡಿವೆ. ಇವರಿಗೆ 'ಕರ್ನಾಟಕ ಏಕೀಕರಣ ಇತಿಹಾಸ' ಎಂಬ ಕೃತಿಗೆ 'ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ' ೧೯೯೬ರಲ್ಲಿ ಲಭಿಸಿದೆ. ಇವರು 'ಗುಲ್ಬುಟ್ಟಿ-ಮುನ್ಬುಟಿ' ಎಂಬ ಮಕ್ಕಳ ನಾಟಕಕ್ಕೆ ಪ್ರಥಮ ಬಹುಮಾನ ಪಡೆದಿದ್ದಾರೆ. ಇವರು ಶಾಸನಾಧ್ಯಯನದಲ್ಲಿ ತೊಡಗಿ ಅನೇಕ ಶಾಸನಗಳನ್ನು ಪತ್ತೆ ಹಚ್ಚಿದ್ದಾರೆ. ಈ ನಿಟ್ಟಿನಲ್ಲಿ ಇವರ ಸೇವೆ ಅಪಾರವಾಗಿದೆ.

**೫.೬.೩ ರಾಜಕಾರಣಿಗಳು**

**ಟಿ. ಲಕ್ಷ್ಮೀನರಸಮ್ಮ**: ಲಕ್ಷ್ಮೀನರಸಮ್ಮನವರು ನೆಲಮಂಗಲದ ರಾಜಕಾರಣಿಯಾಗಿ ಗುರುತಿಸಿಕೊಂಡ ವ್ಯಕ್ತಿತ್ವ ಅವರದು. ನೆಲಮಂಗಲದ ರಾಜಕೀಯ ಕ್ಷೇತ್ರದಲ್ಲಿ ಮೂವತ್ತೆರಡು ವರ್ಷಗಳು ಸೇವೆ ಸಲ್ಲಿಸಿದ್ದಾರೆ. ಕಾಂಗ್ರೆಸ್ ಪಾರ್ಟಿಯ ಸಕ್ರಿಯ ಸದಸ್ಯರಾಗಿದ್ದು, ತಾಲ್ಲೂಕು ಅಭಿವೃದ್ಧಿ ಮಂಡಳಿಯ ಸದಸ್ಯರಾಗಿ ಮತ್ತು ಕುಟುಂಬ ಮತ್ತು ಮಕ್ಕಳ ಕಲ್ಯಾಣ ಯೋಜನೆಯಲ್ಲಿ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ನೆಲಮಂಗಲ ತಾಲ್ಲೂಕು ಭೂನ್ಯಾಯ ಮಂಡಳಿ ಮತ್ತು ಭೂಮಂಜೂರಾತಿ ಕಮಿಟಿಯಲ್ಲಿ ಸದಸ್ಯರಾಗಿ ಭೂಮಿ ಇಲ್ಲದ ರೈತರಿಗೆ ಭೂಮಿಯ ಹಂಚಿಕೆ ಕಾರ್ಯ ಕೈಗೊಂಡರು. ಕರ್ನಾಟಕ ಪ್ರದೇಶ ಕಾಂಗ್ರೆಸ್ ಮಹಿಳಾ ವಿಭಾಗದಲ್ಲಿ ಕಾರ್ಯದರ್ಶಿಯಾಗಿ ಅಮೂಲ್ಯ ಸೇವೆ ಒದಗಿಸಿದ್ದಾರೆ. ನೆಲಮಂಗಲ ಕ್ಷೇತ್ರದಲ್ಲಿ ನಡೆದ ಲೋಕಸಭೆ, ವಿಧಾನಸಭೆ ಹಾಗ ಸಂಘ-ಸಂಸ್ಥೆಗಳ, ಮೂಲಕ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು ಹಳ್ಳಿಗಳನ್ನು ಸುತ್ತಾಡಿ ಜನರ ಕಷ್ಟಗಳಿಗೆ ಸ್ಪಂದಿಸಿದರು. ಮಹಿಳೆಯರ ಆರ್ಥಿಕ ಅಭಿವೃದ್ಧಿಗೆ ಸಂಘಸಂಸ್ಥೆಗಳ ಮೂಲಕ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು ಹಳ್ಳಿಗಳನ್ನು ಸುತ್ತಾಡಿ ಜನರ ಕಷ್ಟಗಳನ್ನು ದೂರ ಮಾಡುತ್ತಿದ್ದರು. ಮಹಿಳೆಯರ ಆರ್ಥಿಕ ಅಭಿವೃದ್ಧಿಗೆ ಸಂಘ-ಸಂಸ್ಥೆಗಳ ಮೂಲಕ ಗುಡಿಕೈಗಾರಿಕೆಗಳನ್ನು ಸ್ಥಾಪಿಸಿದರು.[೨೪] ಮಕ್ಕಳ ಅಭಿವೃದ್ಧಿಗೆ ಶಾಲೆಗಳನ್ನು ಸ್ಥಾಪಿಸಲು ಹಣವನ್ನು ಮಂಜೂರಾತಿ ಮಾಡಿದರು. ಇವರ ರಾಜಕೀಯ ಕ್ಷೇತ್ರದ ಸಾಧನೆಗಾಗಿ ನೆಲಮಂಗಲದ ಸಂಘಸಂಸ್ಥೆಗಳು ಪ್ರಶಸ್ತಿ ನೀಡಿ ಸನ್ಮಾನಿಸಿವೆ.

**೫.೬.೪ ಸಮಾಜ ಸೇವಕರು**

**ಸೀತಮ್ಮ**: ನೆಲಮಂಗಲದಲ್ಲಿ ವಾಸವಾಗಿದ್ದ ಸೀತಮ್ಮನವರು ಬೆಂಗಳೂರು ಜಿಲ್ಲೆಗೆ ಹೆಸರುವಾಸಿಯಾದ ಸಮಾಜ ಸೇವಕಿಯಾಗಿ ಗುರುತಿಸಿಕೊಂಡಿದ್ದರು. ಕರ್ನಾಟಕದಲ್ಲಿ ಪ್ರಪ್ರಥಮ ಮಹಿಳಾ (೧೯೪೪) ಪುರಸಭಾ ಸದಸ್ಯೆಯಾದ ಹೆಗ್ಗಳಿಕೆ ಇವರದ್ದು. ಹಲವಾರು ವರ್ಷ ತಾಲ್ಲೂಕು ಅಭಿವೃದ್ಧಿ ಮಂಡಳಿಯ ಸದಸ್ಯರಾಗಿ ಕಾರ್ಯ ನಿರ್ವಹಿಸಿದ್ದಾರೆ. ಸಮಾಜ ಕಲ್ಯಾಣ ಮಂಡಳಿಯ ಅಧ್ಯಕ್ಷರಾಗಿ, ನೆಲಮಂಗಲ ಸಹಕಾರ ಸಂಘದ ಸ್ಥಾಪನೆಗೆ ಭಾಜನರಾದರು. ಅದರಂತೆ ಗ್ರಾಮಾಂತರ ಪ್ರದೇಶದ ಮಕ್ಕಳ ವಿದ್ಯಾಭ್ಯಾಸ ಹಾಗೂ ಅವರ ಏಳಿಗೆಗಾಗಿ ಅನೇಕ ಶಾಲೆಗಳು ಮತ್ತು ಅಂಗನವಾಡಿಗಳನ್ನು ಸ್ಥಾಪಿಸಿದರು. ಕುಟುಂಬ ಮತ್ತು ಮಕ್ಕಳ ಕಲ್ಯಾಣ ಯೋಜನೆಗಳ ಅಧ್ಯಕ್ಷರಾಗಿಯೂ ಬಹಳ ಕಾಲ ಸೇವೆ ಸಲ್ಲಿಸಿದ್ದಾರೆ. ಇವರ ಸೇವೆಗೆ ಪ್ರತಿಫಲವಾಗಿ ಪ್ರಶಸ್ತಿ, ಪುರಸ್ಕಾರಗಳು ಸಂದಿವೆ. ಪ್ರಧಾನಮಂತ್ರಿ ಇಂದಿರಾಗಾಂಧಿಯವರ ಕಾಲದಲ್ಲಿ ಅಖಿಲ ಭಾರತ ಮಟ್ಟದಲ್ಲಿ ಸಮಾಜ ಸೇವೆ ಮಾಡಿದ ಗಣ್ಯರನ್ನು ಗುರುತಿಸುವುದಕ್ಕಾಗಿ ಜಾರಿಗೆ ತಂದ ಹೊತ್ತಿಗೆಯಲ್ಲಿ ಸೀತಮ್ಮನವರ ಸೇವೆಯ ಕಿರು ಪರಿಚಯ ಸೇರ್ಪಡೆಯಾದದ್ದು

ಅವರ ಸಾಧನೆಗೆ ಒಂದು ನಿದರ್ಶನವಾಗಿದೆ. ಬಿ. ಡಿ. ಜತ್ತಿಯವರಿಂದ ಸನ್ಮಾನಿತರಾಗಿದ್ದಾರೆ.[೩೫] ಬೆಂಗಳೂರು ಲಯನ್ಸ್ ಕ್ಲಬ್‌ನವರು 'ಶ್ರೇಷ್ಠ ಸಮಾಜ ಸೇವಕಿ' ಎಂಬ ಬಿರುದನ್ನು ನೀಡಿ ಸ್ಮನಾಸಿದ್ದಾರೆ. ಅಲ್ಲದೇ ಅಂತರರಾಷ್ಟ್ರೀಯ ಮಹಿಳಾ ವರ್ಷದ ಸಮಾರಂಭದಲ್ಲೂ ಗೌರವಿತರಾಗಿದ್ದಾರೆ.

**ಡಾ. ಟಿ. ಮರಿಯಪ್ಪ**: ಡಾ. ಟಿ. ಮರಿಯಪ್ಪನವರು ನೆಲಮಂಗಲ ತಾಲ್ಲೂಕಿನ ಮಾರಗೊಂಡನಹಳ್ಳಿಯಲ್ಲಿ ೧ನೇ ಜೂನ್ ೧೯೨೯ರಂದು ಜನಿಸಿದರು. ನಾಗರೀಕ ಸೌಲಭ್ಯಗಳೂ ಇಲ್ಲದ ಆ ಕಾಲದ ಗ್ರಾಮದ ಹಿಂದುಳಿದ ವರ್ಗ(ಉಪೇಕ್ಷಿತ)ದಲ್ಲಿ ಜನಿಸಿ, ಸ್ವಸಾಮರ್ಥ್ಯದಿಂದ ಉನ್ನತ ಸಾಧನೆ ಮಾಡಿದ್ದಾರೆ. ಎಂ. ಎಸ್. ಆರ್ಥೋಪಿಡಿಕ್ಸ್ ವೈದ್ಯರಾಗಿ ಅಖಿಲ ಭಾರತ ಮಟ್ಟದಲ್ಲಿ ಕೀರ್ತಿ ಪಡೆದು, 'ಫಾದರ್ ಆಫ್ ಆರ್ಥೋಪಿಡಿಕ್ಸ್' ಎಂಬ ಪ್ರಶಂಸೆಗೆ ಪಾತ್ರವಾಗಿರುವರು. ಇವರು ಸ್ವಂತ ಪರಿಶ್ರಮದಿಂದ ಗಳಿಸಿದ್ದನ್ನು ಗ್ರಾಮೀಣ ಪ್ರದೇಶದ ಆರೋಗ್ಯ ಮತ್ತು ವಿದ್ಯಾಕ್ಷೇತ್ರಕ್ಕೆ ಸದ್ವಿನಿಯೋಗಿಸಿದ್ದಾರೆ.

ಇವರು ವಯೋಮಾನವನ್ನು ಲೆಕ್ಕಿಸದೇ ಸಮಾಜಕ್ಕೆ ಸ್ಪಂದಿಸಿ ಸಮಾಜಸೇವೆಗಾಗಿ ದುಡಿಯುತ್ತಿದ್ದಾರೆ. ಬೆಂಗಳೂರಿನ ಗುಟ್ಟಹಳ್ಳಿ ಮಾಧ್ಯಮಿಕ ಶಾಲೆಯಲ್ಲಿ ಶಿಕ್ಷಕರಾಗಿ (೧೯೪೮) ವೃತ್ತಿ ಜೀವನ ಪ್ರಾರಂಭಿಸಿ ನಂತರ ವಿಕ್ಟೋರಿಯಾ ಆಸ್ಪತ್ರೆಯ ಮೂಳೆ ವಿಭಾಗದ ಮುಖ್ಯಸ್ಥರಾಗಿ ೧೯೬೬ ರಲ್ಲಿ ಆಯ್ಕೆಯಾದರು. ಅದೇ ಆಸ್ಪತ್ರೆಯ ಅಧೀಕ್ಷಕರಾಗಿ (೧೯೬೬) ಆಯ್ಕೆಯಾದರು. ಅದೇ ಆಸ್ಪತ್ರೆಯ ಅಧೀಕ್ಷಕರಾಗಿ (೧೯೮೪) ನಿವೃತ್ತಿಯಾದ ನಂತರ ವಿಲ್ಸನ್ ಗಾರ್ಡನ್‌ನಲ್ಲಿ ನರ್ಸಿಂಗ್ ಹೋಂ ಆರಂಭಿಸಿದ್ದರೂ ಅವರ ಸಾಮಾಜಿಕ ಸೇವಾಕ್ಷೇತ್ರ ನೆಲಮಂಗಲ. ದಿವಂಗತ ಧರ್ಮಪತ್ನಿ 'ಶ್ರೀಮತಿ ಜಯಮ್ಮ ಡಾ. ಟಿ. ವಿ. ಮರಿಯಪ್ಪ ಚಾರಿಟಬಲ್ ಟ್ರಸ್ಟ್'ನ್ನು ಪ್ರಾರಂಭಿಸಿ ಬಡಮಕ್ಕಳ ಶಿಕ್ಷಣ ಆರೋಗ್ಯಕ್ಕಾಗಿ ಶ್ರಮಿಸುತ್ತಿದ್ದಾರೆ.

ನೆಲಮಂಗಲದ ಹಿಂದುಳಿದ ಮತ್ತು ಬಡವರ ಬಡಾವಣೆಯಾದ ಲೋಹಿತನಗರವನ್ನು ಸೇವೆಯ ಕರ್ಮ ಭೂಮಿಯನ್ನಾಗಿಸಿಕೊಂಡು ಪ್ರಥಮವಾಗಿ 'ಪ್ರಸಾದ ನಿಲಯ' ಸ್ಥಾಪಿಸಿದರು. ನಿರ್ಗತಿಕ ಮಕ್ಕಳಿಗೆ ಪ್ರಾಥಮಿಕ ಶಾಲೆ ಮತ್ತು ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸಿದರು. ವಿದ್ಯಾರ್ಥಿಗಳಿಗೆ ಪುಸ್ತಕ, ನೋಟ್‌ಪುಸ್ತಕಗಳನ್ನು ವಿತರಿಸಿದರು. ಆರಾಧ್ಯ ದೇವರಾದ ಶ್ರೀಕೃಷ್ಣ ದೇವಾಲಯದ ನಿರ್ಮಾಣ ಮಾಡಿದರು. ಇಲ್ಲಿ ಧಾರ್ಮಿಕ ಕಾರ್ಯಗಳ ಜೊತೆ ಉಚಿತ ಸಾಮೂಹಿಕ ವಿವಾಹ, ಭಜನೆ, ಯಜ್ಞ ಯಾಗಾದಿಗಳ ಆಚರಣೆಗಳನ್ನು ನಡೆಸುತ್ತಾರೆ. ಕಡಿಮೆ ಖರ್ಚಿನಲ್ಲಿ ವಿವಾಹವಾಗಲಿಚ್ಛಿಸುವವರಿಗೆ ಶ್ರೀಕೃಷ್ಣ ಕಲ್ಯಾಣ ಮಂಟಪ ನಿರ್ಮಿಸಿದರು.

ತಾವು ಹುಟ್ಟಿದ ಬೆಳೆದ ಮಾರಗೊಂಡನಹಳ್ಳಿ ತಂದೆ ತಿರುಮಲಯ್ಯ, ತಾಯಿ ಕೆಂಪಮ್ಮ ಅವರ ಸ್ಮರಣಾರ್ಥ ಸಮುದಾಯ ಭವನ ಕಟ್ಟಿಸಿದ್ದಾರೆ. ಅಲ್ಲಿನ ಸರ್ಕಾರಿ ಪ್ರೌಢಶಾಲೆಗೆ ಮಗ ಎಂ. ಸೋಮಶೇಖರ್ ಸ್ಮರಣಾರ್ಥವಾಗಿ ಎರಡು ಕೊಠಡಿಗಳನ್ನು ನಿರ್ಮಿಸಿಕೊಟ್ಟಿದ್ದಾರೆ. ಉಡುಪಿಯ ಶ್ರೀಕೃಷ್ಣದೇವಾಲಯಕ್ಕೆ, ಇಸ್ಕಾನ್ ದೇವಾಲಯಕ್ಕೆ, ಅರಿಶಿನಕುಂಟೆಯ ಆಶ್ರಮಕ್ಕೆ ಧನ ಸಹಾಯ ನೀಡಿದ್ದಾರೆ. ಹೀಗೆ ಬದುಕಿನುದ್ದಕ್ಕೂ ಸಮಯ ವ್ಯರ್ಥವಾಗಲು ಬಿಡದೇ ಆರ್ಥೋಪಿಡಿಕ್ಸ್ ಹೊಸ ಹೊಸ ಕಾರ್ಯಗಳನ್ನು ಮಾಡಿದ್ದಾರೆ. ಇದರಿಂದ ಅನೇಕ ಪ್ರಶಸ್ತಿಗಳೂ ಬಂದಿವೆ. ೧೯೮೬ ರಲ್ಲಿ ಅಲುಮಿ ಪ್ರಶಸ್ತಿ, ವೈದ್ಯಕ್ಷೇತ್ರದ ಅಪಾರ ಸೇವೆಯನ್ನು ಮನಗಂಡ ಕರ್ನಾಟಕ ಸರ್ಕಾರ ೧೯೯೧ ರಲ್ಲಿ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ. ಭೋವಿ ಜನಾಂಗದ ಜಸ್ಮ ಪ್ರಶಸ್ತಿ ಬಂದಿದೆ. ಭಾರತೀಯ ವೈದ್ಯ ಸಂಘ, ಬೆಂಗಳೂರು ಆರ್ಥೋಪಿಡಿಕ್ಸ್ ಸೊಸೈಟಿ, ನೆಲಮಂಗಲದ ಲಯನ್ಸ್ ಸಂಸ್ಥೆ, ಮಣಿಪಾಲ ಕಸ್ತೂರಿ

ಬಾ ಮೆಡಿಕಲ್ ಕಾಲೇಜು, ಇವೇ ಮೊದಲಾದ ಸಂಸ್ಥೆಗಳು ಪ್ರಶಸ್ತಿ ನೀಡಿವೆ. ೧೯೯೪ ರಲ್ಲಿ ಬಿ. ಸೀತಾರಾಮ್ ಪ್ರಶಸ್ತಿ, ೧೯೯೬ ರಲ್ಲಿ ನೆಲಮಂಗಲದ ಸೇವಾಟ್ರಸ್ಟ್, ಎಂ. ವಿ. ಸಿಗಳೂರ ಅವರ ಪತ್ನಿ ಅನುಸೂಯ ಕುಲಕರ್ಣಿ ಸ್ಮರಣಾರ್ಥ ಪುರಸ್ಕಾರವನ್ನು ನೀಡಿ ಸನ್ಮಾನಿಸಿದೆ.[೬೬] ನನಸು ಸಂಸ್ಥೆಯು ಅವರನ್ನು ಗೌರವಿಸಿ ಮಾನಪತ್ರ ನೀಡಿದೆ. ರಾಷ್ಟ್ರದ ಗಣ್ಯರಾದ ಬಿ. ಡಿ. ಜತ್ತಿರವರು ಇವರನ್ನು ಹೊಗಳಿದ್ದಾರೆ. ಇವರನ್ನು ನೆಲದ ಸೇವಾ ಜೀವಿ ಡಾ. ಟಿ. ವಿ. ಮರಿಯಪ್ಪ ಎಂದೇ ಕರೆಯುವುದೂ ಸೂಕ್ತವಾಗಿದೆ.

### ೫.೬.೫. ಶಿಕ್ಷಕರು

**ಟಿ. ಎನ್. ಶತ್ರುಘ್ನ:** ನೆಲಮಂಗಲ ತಾಲ್ಲೂಕಿನ ತ್ಯಾಮಗೊಂಡ್ಲುವಿನಲ್ಲಿ ೧೯೩೮ ರಂದು ಟಿ. ಎನ್. ಶತ್ರುಘ್ನರವರು ಜನಿಸಿದರು. ಇವರು ತ್ಯಾಮಗೊಂಡ್ಲುವಿನಲ್ಲಿ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣವನ್ನು ಪಡೆದು ನಂತರ ಮೈಸೂರು ವಿಶ್ವವಿದ್ಯಾಲಯದಲ್ಲಿ ಉನ್ನತ ವ್ಯಾಸಂಗ ಮಾಡಿದರು. ಬೆಂಗಳೂರಿನ ವೈ. ಎಂ. ಸಿ. ಎ. ಕಾಲೇಜಿನಲ್ಲಿ ದೈಹಿಕ ಶಿಕ್ಷಣವನ್ನು ಪಡೆದರು. ಆಚಾರ್ಯ ಪಾಠಶಾಲಾ ಬಾಲಕರ ಪ್ರೌಢಶಾಲೆಯಲ್ಲಿ ದೈಹಿಕ ಶಿಕ್ಷಕರಾಗಿ ವೃತ್ತಿಯನ್ನು ಆರಂಭಿಸಿದರು. ನಂತರ ನ್ಯಾಷನಲ್ ಡಿಸಿಪ್ಲಿನ್ (ಎನ್ ಡಿ ಎಸ್) ತರಬೇತಿಯನ್ನು ಸಿಮ್ಲಾದ ಜುಬ್ಬ್ಬರ್‌ನಲ್ಲಿ ಪಡೆದರು. ವಾಲಿಬಾಲ್ ತರಬೇತಿಯನ್ನು ಪಂಜಾಬಿನಲ್ಲಿರುವ ಪಾಟಿಯಾಲದಲ್ಲಿ ಪಡೆದು, ಬೆಂಗಳೂರಿನ ದಕ್ಷಿಣ ಎನ್ ಎಸ್ ಪಿ ಎಸ್ ತರಬೇತಿಯನ್ನು ಪಡೆದರು. ಕರ್ನಾಟಕ ರಾಜ್ಯದ ಕ್ರೀಡಾ ಪರಿಷತ್ತಿನಲ್ಲಿ ಕೋಚ್ ಆಗಿ ವಾಲಿಬಾಲ್, ಕ್ರಿಕೆಟ್, ಪುಟ್‌ಬಾಲ್ ಮಹಿಳೆಯರ ತಂಡಗಳನ್ನು ಕೇರಳದ ತಿರುವನಂತಪುರ, ಅಸ್ಸಾಂನ ಗೌಹಾತಿ, ಕಲ್ಕತ್ತಾ, ಬೊಂಬಾಯ್, ರಾಜಸ್ಥಾನ ಇತರೆ ರಾಜ್ಯಗಳಿಗೆ ಕರೆದುಕೊಂಡು ಹೋಗಿ ಛಾಂಪಿಯನ್‌ಷಿಪ್‌ನಲ್ಲಿ ಭಾಗವಹಿಸಿ ಅನೇಕ ಚಿನ್ನದ ಪದಕಗಳನ್ನು ಪಡೆದುಕೊಂಡಿದ್ದಾರೆ.

ಇವರು ಹೆಣ್ಣುಮಕ್ಕಳ ಕ್ರೀಡಾಭಿವೃದ್ಧಿಗೆ ಪ್ರೋತ್ಸಾಹ ನೀಡಿ, ಮೊಟ್ಟಮೊದಲ ಬಾರಿಗೆ ಹೆಣ್ಣುಮಕ್ಕಳ ವಾಲಿಬಾಲ್, ಕ್ರಿಕೆಟ್, ಪುಟ್‌ಬಾಲ್, ಸ್ಕೇಟಿಂಗ್, ದೈಹಿಕ ಶಿಕ್ಷಕರ ಅಸೋಸಿಯೇಷನ್ ಮತ್ತು ಕೋಚಿಂಗ್ ಅಸೋಸಿಯೇಷನ್ನನ್ನು ಸ್ಥಾಪಿಸಿದರು. ಪ್ರಥಮ ಬಾರಿಗೆ ಹೆಣ್ಣುಮಕ್ಕಳ ಆಲ್‌ಇಂಡಿಯಾ ಕ್ರಿಕೆಟ್ ಚಾಂಪಿಯನ್ ಷಿಪ್‌ನನ್ನು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ದಿವಗಂತ ಎಂ. ಜಿ. ವಿಜಯಸಾರಥಿ ಅವರ ನೇತೃತ್ವದಲ್ಲಿ ನಡೆಸಿದ್ದಾರೆ.[೬೭] ದೈಹಿಕ ಶಿಕ್ಷಣದ ಮೂಲಕ ಕ್ರೀಡಾ ಚಟುವಟಿಕೆಗಳನ್ನು ನಡೆಸಿ ರಾಜ್ಯ ರಾಷ್ಟ್ರಗಳ ಗಮನ ಸೆಳೆದು ೧೯೮೮-೮೯ನೇ ಸಾಲಿನ ರಾಷ್ಟ್ರಪ್ರಶಸ್ತಿಯನ್ನು ಪಡೆದಿದ್ದಾರೆ. ಇವರು ರಾಷ್ಟ್ರದಲ್ಲಿಯೇ ದೈಹಿಕ ಶಿಕ್ಷಣದಲ್ಲಿ ಪ್ರಥಮವಾಗಿ ರಾಷ್ಟ್ರಪ್ರಶಸ್ತಿ ಪಡೆದವರಾಗಿದ್ದಾರೆ. ಶಿಕ್ಷಕರಾಗಿದ್ದು ಕ್ರೀಡಾ ರಂಗಕ್ಕೆ ಅಪಾರ ಕೊಡುಗೆಯನ್ನು ನೀಡಿದ್ದಾರೆ.

### ೫.೬.೬. ಚಿತ್ರಕಲಾವಿದರು

ನೆಲಮಂಗಲ ತಾಲ್ಲೂಕು ಅನೇಕ ಚಿತ್ರಕಲಾವಿದರನ್ನು ಹೊಂದಿದ್ದು, ಇವರು ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ.

**ಕೆ. ಸೋಮಶೇಖರ್:**ಚಿತ್ರಕಲಾವಿದರಾಗಿ ತಮ್ಮ ಸಾಧನೆ ಮತ್ತು ಪ್ರಶಸ್ತಿಗಳಿಂದ ಗುರುತಿಸಿಕೊಂಡವರೆಂದರೆ ಕೆ. ಸೋಮಶೇಖರ್. ಇವರು 'ಚಿತ್ರ ಸೋಮ' ಎಂಬ ಕುಂಚನಾಮದಿಂದ ಚಿತ್ರಕಲಾವಿದರಾಗಿ ವರ್ಣಚಿತ್ರಗಳನ್ನು ಬಿಡಿಸಿದ್ದಾರೆ.

ಕೆ. ಸೋಮಶೇಖರ್‌ರವರು ಕೆಂಪಯ್ಯ ಮತ್ತು ಶಿವಯ್ಯನವರ ಪುತ್ರನಾಗಿ ೪ ನೇ ಆಗಸ್ಟ್ ೧೯೬೬ ರಂದು ನೆಲಮಂಗಲ ತಾಲ್ಲೂಕಿನ ತ್ಯಾಮಗೊಂಡ್ಲುವಿನಲ್ಲಿ ಜನಿಸಿದರು. ಪ್ರೌಢಶಾಲೆಯಲ್ಲಿ ಓದುವಾಗಲೇ ಶಿಕ್ಷಕರು

ಪಾಠ ಮಾಡುವ ಭಂಗಿಯ ಚಿತ್ರ ಬರೆಯುತ್ತಿದ್ದು, ಶಿಕ್ಷಕರಿಂದ ಪ್ರಶಂಸೆ ಪಡೆದಿದ್ದರು. ಅನಂತರ ಬೆಂಗಳೂರಿನ ಕೆನ್ ಕಲಾ ಶಾಲೆಯಲ್ಲಿ 'ಡಿಪ್ಲೊಮಾ ಇನ್ ಫೈನ್ ಆರ್ಟ್ಸ್' ಶಿಕ್ಷಣವನ್ನು ಐದು ವರ್ಷಗಳ ಅವಧಿಯಲ್ಲಿ ಮುಗಿಸಿದರು. ದೂರದರ್ಶನದಲ್ಲಿ ಗ್ರಾಫಿಕ್ ಡಿಸೈನರ್ ಆಗಿ ಐದು ವರ್ಷ ಕಾರ್ಯ ನಿರ್ವಹಿಸಿದರು. ಅಲ್ಲದೇ ಕೆಲವು ಚಿತ್ರಗಳಿಗೆ ಕಲಾ ನಿರ್ದೇಶಕ ಮತ್ತು ಗ್ರಾಫಿಕ್ ಡಿಸೈನರ್ ಆಗಿ ಕೆಲಸ ಮಾಡಿದರು. ಟೆರ್ರಕೋಟ, ಮೈಸೂರಿನ ಶೈಲಿ ಮತ್ತು ತಂಜಾವೂರು ಶೈಲಿಯ ಚಿತ್ರಗಳನ್ನು ವರ್ಣಮಯವಾಗಿ ಬಿಡಿಸುತ್ತಾರೆ. 'ಸುಧಾ' ವಾರಪತ್ರಿಕೆಯ 'ಕುಸುಮಬಾಲೆ' ಧಾರವಾಹಿಗೆ ವರ್ಣಚಿತ್ರಗಳನ್ನು ಬರೆದಿದ್ದಾರೆ. ತ್ಯಾಮಗೊಂಡ್ಲು ಅಂಬರೀಷ್ ಹಾಗೂ ಬ್ಯಾಂಕ್ ಚಂದ್ರಶೇಖರ್ ಸಂಯುಕ್ತವಾಗಿ ಹೊರತಂದಿರುವ 'ಹನಿ-ಮಿನಿ' ಕವನ ಸಂಕಲನಕ್ಕೆ ವ್ಯಂಗ್ಯಚಿತ್ರಗಳನ್ನು ರಚಿಸಿದ್ದಾರೆ.

ತ್ಯಾಮಗೊಂಡ್ಲುವಿನಲ್ಲಿ ನಡೆದ ನೆಲಮಂಗಲ ೩ನೇ ಕನ್ನಡ ಸಾಹಿತ್ಯ ಸಮ್ಮೇಳನದ ವೇದಿಕೆಯ ಹಿಂಭಾಗದ ಭುವನೇಶ್ವರಿ ಚಿತ್ರ ಎಲ್ಲರ ಮೆಚ್ಚುಗೆಗೆ ಪಾತ್ರವಾಯಿತು. ಅದೇ ಸಂದರ್ಭದಲ್ಲಿ ಹೊರತಂದ ಸ್ಮರಣ ಸಂಚಿಕೆಯ ವರ್ಣಮಯ ಮುಖಚಿತ್ರ ವಿಶೇಷತೆ ಹೊಂದಿದೆ . ಈ ಸ್ಮರಣ ಸಂಚಿಕೆಯಲ್ಲಿನ ತ್ಯಾಮಗೊಂಡ್ಲುವಿನ ಗದ್ದೆಬಯಲು, ಮಹಿಮ ರಂಗಸ್ವಾಮಿ ಬೆಟ್ಟ, ಶಿವಗಂಗೆ ಬೆಟ್ಟ ಅದಕ್ಕೆ ಬೆಂಗಾವಲಾಗಿ ತಾಯಿ ಭುವನೇಶ್ವರಿಯ ರಕ್ಷೆ ಈ ಮುಖಚಿತ್ರ ಎಲ್ಲರ ಮನಸ್ಸನ್ನು ಗೆದ್ದಿತು.[೬೮] ಶಾಲಾ-ಕಾಲೇಜುಗಳಿಗೆ ಭೇಟಿ ನೀಡಿ ಪೇಪರ್ ಕಟಿಂಗ್, ಡ್ರಾಯಿಂಗ್ ಹೇಳಿ ಕೊಡುತ್ತಿದ್ದಾರೆ. ಕೇಂದ್ರ ಸರ್ಕಾರದ ಪ್ರಾದೇಶಿಕ ವಿನ್ಯಾಸ ಕೇಂದ್ರದ ಉದ್ಯೋಗಿಯಾಗಿ ಕರಕುಶಲ ಕರ್ಮಿಗಳಿಗೆ ತರಬೇತಿ ನೀಡುತ್ತಿದ್ದಾರೆ. ಇವರ ಸಾಧನೆಗಾಗಿ ಕರಕುಶಲ ಕರ್ಮಿಗಳಿಗೆ ತರಬೇತಿ ನೀಡುತ್ತಿದ್ದಾರೆ. ಇವರ ಸಾಧನೆಗಾಗಿ ಸ್ವಾನಂದ ಆಶ್ರಮದ ಟ್ರಸ್ಟ್ ೨೦೦೩ರಲ್ಲಿ 'ಕಲಾವಲ್ಲಭ' ಎಂಬ ಬಿರುದನ್ನು ನೀಡಿದೆ.

**೫.೭ ಸಾಂಸ್ಕೃತಿಕ ಸಂಘಟನೆಗಳು ಮತ್ತು ದಲಿತ ಸಂಘ- ಸಂಸ್ಥೆಗಳು**

ನಮ್ಮ ನಾಡಿನ ಹಲವಾರು ಸಂಘ-ಸಂಸ್ಥೆಗಳು ಭಾಷೆ, ಸಾಹಿತ್ಯ ಹಾಗೂ ಸಂಸ್ಕೃತಿಯ ರಕ್ಷಣೆಗಾಗಿ ನಿರಂತರವಾಗಿ ಶ್ರಮಿಸುತ್ತಿರುತ್ತವೆ.ಅದರಂತೆ ನೆಲಮಂಗಲವು ಕೂಡ ಸಂಘ-ಸಂಸ್ಥೆಗಳನ್ನು ಹೊಂದಿದೆ.

೧. ಕನ್ನಡ ಗೆಳೆಯರ ಬಳಗ (೧೯೮೨, ನರಸಿಂಹ ಮೂರ್ತಿ)

೨. ರಂಗಶಿಕ್ಷಣ ಕೇಂದ್ರ ಮತ್ತು ವಿದ್ಯಾಪೀಠ (ಗಂಗರಾಜು)

೩. ತಾಲ್ಲೂಕು ಶರಣ ಸಾಹಿತ್ಯ ಪರಿಷತ್ತು (ಎಂ. ವಿ. ನೆಗಳೂರ)

೪. ಗುರುಕುಲ ವಿದ್ಯಾಲಯ, ತ್ಯಾಮಗೊಂಡ್ಲು (೧೯೪೮, ಗುರುಸತ್ಯನಾರಾಯಣ)

೫. ಕನ್ನಡ ಕೂಟ

ಈ ಎಲ್ಲಾ ಸಂಘಟನೆಗಳು 'ಸಾಹಿತ್ಯ ಸಂಜೆ' ವಿಚಾರ ಸಂಕಿರಣ, ನಾಟಕಾಭಿನಯ, ಜನಪದ ಕಲೆಯ ತರಬೇತಿ, ಅನುಭಾವ ಗೋಷ್ಠಿ, ಕವಿಯ ಜನ್ಮಶತದಿನೋತ್ಸವ ಮೊದಲಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ನಾಡು, ನುಡಿ, ಭಾಷೆ, ಸಂಸ್ಕೃತಿಯನ್ನು ಬಿಂಬಿಸುವ, ಪಸರಿಸುವ ನಾಡಿಗಳಾಗಿ ವಾಹಕಗಳಾಗಿ ಕಾರ್ಯ ನಿರ್ವಹಿಸುತ್ತಿವೆ.ನೆಲಮಂಗಲ ಪಟ್ಟಣದಲ್ಲಿ ಅಧಿಕೃತವಾದ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು ಇದ್ದು, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು ಕಳೆದ ಕೆಲವು ವರ್ಷಗಳಿಂದ ನವೆಂಬರ್ ತಿಂಗಳಿನಲ್ಲಿ ಸಾಹಿತ್ಯವಾಹಿನಿ ಕಾರ್ಯಕ್ರಮ ನಡೆಸುತ್ತಿದೆ. ಇಲ್ಲಿಯವರೆಗೆ ನೆಲಮಂಗಲದಲ್ಲಿ ನಾಲ್ಕು ಕನ್ನಡ ಸಾಹಿತ್ಯ ಸಮ್ಮೇಳನಗಳು ನಡೆದಿವೆ. ಮೊದಲನೇ ಸಮ್ಮೇಳನವು ನೆಲಮಂಗಲದಲ್ಲಿ ಸುಧಾಕರರವರ ಅಧ್ಯಕ್ಷತೆಯಲ್ಲಿ

ನಡೆಯಿತು. ಎರಡನೇ ಸಮ್ಮೇಳನವು ಶಿವಗಂಗೆಯಲ್ಲಿ ಎಚ್. ಎಸ್. ಗೋಪಾಲರಾವ್‌ರವರ ಅಧ್ಯಕ್ಷತೆಯಲ್ಲಿ ನಡೆಯಿತು. ಮೂರನೆ ಸಮ್ಮೇಳನವು ತ್ಯಾಮಗೊಂಡಲುವಿನಲ್ಲಿ ಸಿದ್ಧಗಂಗಯ್ಯ ಕಂಬಾಳು ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ನಾಲ್ಕನೆ ಸಮ್ಮೇಳನವು ನೆಲಮಂಗಲದಲ್ಲಿ ಮಲ್ಲೇಪುರಂ ಜಿ. ವೆಂಕಟೇಶ್‌ರವರ ಅಧ್ಯಕ್ಷತೆಯಲ್ಲಿ ನಡೆಯಿತು.ಹೀಗೆ ನೆಲಮಂಗಲದ ಕನ್ನಡ ಸಾಹಿತ್ಯ ಪರಿಷತ್ತು ಸಾಹಿತ್ಯದ ಪ್ರಸಾರಕ್ಕಾಗಿ ಸಮ್ಮೇಳನಗಳನ್ನು ನಡೆಸುತ್ತಿದೆ. ಇದರಡಿಯಲ್ಲಿ ನೆಲಮಂಗಲದ ಸಾಂಸ್ಕೃತಿಕ ಸಂಘಟಣೆಗಳು ನಾಡು,ನುಡಿ, ಭಾಷೆ, ಸಂಸ್ಕೃತಿಯನ್ನು ರಕ್ಷಿಸಿ ಬೆಳೆಸುವ ಕಾರ್ಯಗಳನ್ನು ಕೈಗೊಂಡಿವೆ.

ನೆಲಮಂಗಲ ಪ್ರದೇಶದಲ್ಲಿಯೂ ಕೂಡ ದಲಿತ ಎಂಬ ವರ್ಗವು ಮುಖ್ಯವಾಗಿ ಗುರುತಿಸಿಕೊಂಡಿದೆ. ಈ ವರ್ಗವು ಕಾಲ ಕಾಲಕ್ಕೆ ಅನುಗುಣವಾಗಿ ಶೋಷಣೆಗೆ ಒಳಗಾಗಿದೆ. ಯಾವುದೇ ಸೌಲಭ್ಯಗಳನ್ನು ನೀಡಿದರೂ ಅವರ ಸ್ಥಿತಿಗತಿಗಳು ಉತ್ತಮವಾಗುತ್ತಿಲ್ಲ. ಅವರ ಮೇಲೆ ದೌರ್ಜನ್ಯಗಳೇ ಹೆಚ್ಚಾಗುತ್ತಿವೆ. ಗ್ರಾಮಗಳಲ್ಲಂತು ದಲಿತರ ಸ್ಥಿತಿ ಅತ್ಯಂತ ಶೋಚನೀಯವಾಗಿದೆ. ಬ್ರಾಹ್ಮಣರು ರಸ್ತೆಯಲ್ಲಿ ಬರುತ್ತಿದ್ದರೆ ದಲಿತರರು ಅವರ ಎದುರಿಗಾಗಲಿ ನೋಡುವ ಮಾತನಾಡುವ ಆಗಿರಲಿಲ್ಲ. ದಲಿತರು ಬ್ರಾಹ್ಮಣರು, ಲಿಂಗಾಯಿತ, ಜನಾಂಗದವರ ಮನೆಯಲ್ಲಿ ಜೀತ, ಕೂಲಿ ಕೆಲಸ ಮಾಡಿ ಜೀವಿಸಬೇಕಾಗಿತ್ತು. ಇಂದು ಜೀತ ಪದ್ಧತಿಯನ್ನು ರದ್ದುಗೊಳಿಸಿದರೂ ದಲಿತರ ಬಡತನವನ್ನು ಅಸ್ತ್ರವನ್ನಾಗಿ ಮಾಡಿಕೊಂಡು ಉನ್ನತ ವರ್ಗದವರು ಅವರನ್ನು ಜೀತಕ್ಕೆ ಇಂದಿಗೂ ಬಳಸಿಕೊಂಡಿದ್ದಾರೆ.

ಮೊದಲು ನೆಲಮಂಗಲದ ಹಳ್ಳಿಯ ಹೋಟೆಲ್‌ಗಳಲ್ಲಿ ಹೊರಗೆ ದಲಿತರಿಗಾಗಿ ಪ್ರತ್ಯೇಕವಾದ ಲೋಟಗಳನ್ನು ಇಟ್ಟಿರುತ್ತಿದ್ದರು. ಅವರೇ ಲೋಟ ತೊಳೆದು ಹೋಟಲ್ ಹೊರಭಾಗದಲ್ಲಿ ಕುಳಿತು ಕುಡಿಯಬೇಕಾಗಿತ್ತು. ಇವರು ಒಕ್ಕಲಿಗರ ಹೊಲಗದ್ದಗಳಿಗೆ ಕೆಲಸಕ್ಕೆ ಹೋದರೆ ಅವರು ನೀರು ಕುಡಿಯಬೇಕಾದರೆ ಜೋಳದ ಕಡ್ಡಿಯ ಎಲೆಯನ್ನು ಕಿತ್ತು ಜೊಟ್ಟೆಯಾಗಿ ಕಟ್ಟಿ ಬಾಯಿಗೆ ಇಟ್ಟುಕೊಂಡರೆ ಒಕ್ಕಲಿಗರು ಮೇಲಿಂದ ನೀರನ್ನು ಉಯ್ಯುತ್ತಿದ್ದರು. ಊಟ ಮಾಡಬೇಕಾದರೆ ಅರಳು ಮರದ ಎಲೆಯನ್ನು ತಟ್ಟೆಯಾಗಿ ಬಳಸಿಕೊಂಡು ಊಟ ಮಾಡಬೇಕಾಗಿತ್ತು.ಶುಭ್ರವಾದ ಬಟ್ಟೆ ಧರಿಸುವಂತಿರಲಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಆಧುನಿಕತೆಯ ಪ್ರಭಾವದಿಂದಾಗಿ ಉಂಟಾದ ಕೈಗಾರಿಕೀಕರಣ, ನಗರೀಕರಣ, ಜಾಗತೀಕರಣ, ಮತ್ತು ಆಧುನಿಕ ಶಿಕ್ಷಣದಿಂದಾಗಿ ಜೀವನ ಶೈಲಿಯಲ್ಲಿ ಬದಲಾವಣೆಗಳಾದವು. ಉದ್ಯೋಗ, ವಸತಿ, ಆಹಾರ, ಉಡುಪುಗಳಲ್ಲಿ ಪರಿವರ್ತನೆಯಾದರೂ ಶೋಷಿತರಾಗಿಯೇ ಉಳಿಯಬೇಕಾಗಿದೆ. ಯಾವುದೇ ಸೌಲಭ್ಯಗಳು ಸರಿಯಾಗಿ ದೊರೆಯುತ್ತಿಲ್ಲ.

ನೆಲಮಂಗಲದಲ್ಲಿ ಕಾಲ ಬದಲಾದಂತೆ ಇಂದು ದಲಿತರು ಎಚ್ಚೆತ್ತುಕೊಂಡಿದ್ದಾರೆ. ತಮ್ಮ ಹಕ್ಕು ಅಧಿಕಾರಗಳಿಗೆ ಹೋರಾಟ ನಡೆಸುತ್ತಿದ್ದಾರೆ. ದಲಿತರು ಶಕ್ತಿಯಾಗಿ ರೂಪುಗೊಳ್ಳುತ್ತಿದ್ದಾರೆ ಈ ಹಿನ್ನೆಲೆಗೆ ಸರಿಯಾಗಿ ನೆಲಮಂಗಲದಲ್ಲಿ ಅನೇಕ ದಲಿತ ಸಂಘ ಸಂಸ್ಥೆಗಳು ಸ್ಥಾಪನೆಯಾಗಿವೆ.

೧. ಆದಿ ಜನಾಂಗ ಸಂಘ - ಮಾರಪ್ಪ ಜಿ - ೧೯೭೯

೨. ದಲಿತ ಸಂಘರ್ಷ ಸಮಿತಿ - ರಾಮಪ್ಪ - ೧೯೮೨

೩. ಛಲವಾದಿ ಸಂಘ - ವಿಜಯಕುಮಾರ್ - ೨೦೦೨

೪. ದಲಿತ ನಾಗರೀಕ ಹಿತರಕ್ಷಣಾ ಸಮಿತಿ - ರಾಜಗೋಪಾಲ್ - ೨೦೦೩

೫. ದಲಿತ ವಿಮೋಚನಾ ಸಂಘಟನೆ - ಮುನಿರಾಜ್ - ೨೦೦೩

೬. ದಲಿತ ಕ್ಷೇಮಾಭಿವೃದ್ಧಿ ವೇದಿಕೆ - ೨೦೦೪

೭. ದಲಿತ ಸಂಘಟನೆಗಳ ಒಕ್ಕೂಟ - ೨೦೦೪ - ಭಾಸ್ಕರ್ ಪ್ರಸಾದ್

೮. ದಲಿತ ಸಂಘರ್ಷ ಸಮಿತಿ - ೨೦೦೫ - ಎಂ. ವಿ. ನಾಗರಾಜು

೯. ಕರ್ನಾಟಕ ಬೋವಿ ಸಂಘ - ೨೦೦೫

೧೦. ದಲಿತ ಸಂಘರ್ಷ ಸಮಿತಿ - ಎನ್ ಮೂರ್ತಿ ಬಣ

೧೧. ಮಾದಿಗ, ಡೊಂಬರ ವೇದಿಕೆ - ಮಾರೇಪ್ಪ

೧೨.ದಲಿತ ಕೂಲಿ ಕಾರ್ಮಿಕ ಸಂಘ - ಗಂಗಬೈಲಪ್ಪ - ೨೦೦೭

**"ಎಲ್ಲಾ ಜಾತಿಯ ಬಡವರೇ ಒಂದಾಗಿ**

**ಸಮಾನತೆಗೆ ಮುಂದಾಗಿ"**

ಎಂಬುದು ದಲಿತ ಸಂಘಟನೆಗಳ ಘೋಷಣೆಯಾಗಿದೆ.

ಸಮಾಜದಲ್ಲಿ ಎಲ್ಲಾ ವರ್ಗಗಳಂತೆ ದಲಿತರಿಗೆ ಸಮಾನ ಸ್ಥಾನವನ್ನು ಒದಗಿಸಿಕೊಡುವುದು ಶಿಕ್ಷಣ ಉದ್ಯೋಗ ಇತರ ಕ್ಷೇತ್ರಗಳಲ್ಲಿನ ಮೀಸಲಾತಿಯ ಬಗ್ಗೆ ಜನರಿಗೆ ಜಾಗೃತಿ ಮೂಡಿಸುವುದು ಉದ್ಯೋಗದಲ್ಲಿನ ಕಾರ್ಮಿಕರ ತಾರತಮ್ಯವಾಗದಂತೆ ನೋಡಿಕೊಳ್ಳುವುದು ಒಟ್ಟಿನಲ್ಲಿ ಈ ಎಲ್ಲಾ ಸಂಘಟನೆಗಳು ನೆಲಮಂಗಲದಲ್ಲಿನ ದಲಿತರು ಸಾಮಾಜಿಕವಾಗಿ ಆರ್ಥಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಸಬಲರಾಗಲು ಸೌಲಭ್ಯಗಳನ್ನು ಒದಗಿಸುವುದಕ್ಕಾಗಿ ಹೋರಾಟ ನಡೆಸುತ್ತಿವೆ.

ನೆಲಮಂಗಲ ತಾಲ್ಲೂಕಿನ ಸಾಂಸ್ಕೃತಿಕ ಇತಿಹಾಸವನ್ನು ನೋಡಿದಾಗ ಆಚರಣೆಗಳು, ಕಲೆ, ವಾಸ್ತುಶಿಲ್ಪ, ಸಂಗೀತ, ನೃತ್ಯ, ಸಾಹಿತ್ಯ, ಕಲಾವಿದರು ಹೀಗೆ ಸಂಸ್ಕೃತಿಯ ಇತರೆ ಎಲ್ಲಾ ಅಂಶಗಳ ಚಟುವಟಿಕೆಯಲ್ಲಿ ಅತ್ಯಂತ ಮಹತ್ವದ ಪ್ರಾಮುಖ್ಯತೆಯನ್ನು ಪಡೆದುಕೊಂಡು ಸಾಂಸ್ಕೃತಿಕವಾಗಿ ಈ ಪ್ರದೇಶವು ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಒಂದು ನಾಡಿನ ಇತಿಹಾಸವೆಂದರೆ ಅಲ್ಲಿ ಆಳಿದ ರಾಜ ಮಹಾಗಾಜರ ಇತಿಹಾಸವಲ್ಲ, ಅಲ್ಲಿ ಬದುಕಿದ ಜನರ ಜೀವನ ಕ್ರಮ ಆಗಿದೆ. ಒಂದು ದೇಶದ ನಿಜವಾದ ಇತಿಹಾಸವೆಂದರೆ ಆ ಜನತೆಯ ಇತಿಹಾಸ. ಜನತೆಯ ಬದುಕಿನ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅವರ ಜೀವನ ಸಮಸ್ಯೆಗಳು, ಅವರ ಜೀವನ ಮೌಲ್ಯಗಳು ಇತ್ಯಾದಿಗಳ ವಿವರಣೆಯೇ ಆ ದೇಶದ ಇತಿಹಾಸ. ಜನ ಸಾಮಾನ್ಯರ ಜೀವನವನ್ನು ಕುರಿತಾದ ಇಂತಹ ಅಧ್ಯಯನವನ್ನು ಸಾಂಸ್ಕೃತಿಕ ಇತಿಹಾಸ ಎಂದು ಕರೆಯಬಹುದಾಗಿದೆ.

ಈ ನಿಟ್ಟಿನಲ್ಲಿ ನೆಲಮಂಗಲ ತಾಲ್ಲೂಕು ಕಾಲ ಕಾಲಕ್ಕೆ ತಕ್ಕಂತೆ ಇಲ್ಲಿನ ಅವಿಷ್ಕಾರಗಳಿಗೆ ಒಳಗಾಗಿ ತಮ್ಮದೆ ಆದ ಜನರ ಜೀವನ ಶೈಲಿಯನ್ನು ಹೊಂದಿದೆ. ಪ್ರಾಚೀನ ಕಾಲದಿಂದ ಹಿಡಿದು ಆಧುನಿಕ ಕಾಲದವರೆಗೂ ಇಲ್ಲಿನ ಜನತೆಯು ತಮ್ಮ ಜೀವನ ಯಾಂತ್ರಿಕವಾಗಿದ್ದರೂ ಕಲೆಗಳ ಮೂಲಕ ದಾಖಲಿಸಿರುವ ಪರಿಯನ್ನು ಇಲ್ಲಿ ತಿಳಿಯಬಹುದು. ಅಲ್ಲದೇ ಸಾಂಸ್ಕೃತಿಕವಾಗಿ ಈ ಪ್ರದೇಶ ಮುಂದುವರಿಯಲು ಎಲ್ಲಾ ಕ್ಷೇತ್ರಗಳಲ್ಲೂ ಕೊಡುಗೆಗಳನ್ನು ನೀಡಿದ ಕೀರ್ತಿಯು ಜನತೆಗೆ ಸಲ್ಲುತ್ತದೆ.

**ಟಿಪ್ಪಣಿಗಳು:**

೧.ದೇವರಕೊಂಡಾರೆಡ್ಡಿ, (ಸಂ.), ೨೦೦೪, ಶಾಸನ ಅಧ್ಯಯನ-೨, ಕನ್ನಡ ವಿಶ್ವವಿದ್ಯಾಲಯ, ಹಂಪಿ ಪು.೧೩

೨. ಮಂಗಳ ಗಂಗಾ,ಸ್ಮರಣ ಸಂಚಿಕೆ, ೨೦೦೦, ಪ್ರಕಾಶಕರು-ಅಧ್ಯಕ್ಷಕರು ಪದಾಧಿಕಾರಿಗಳು, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು.೭೩

೩. ರಾಮಚಂದ್ರೇಗೌಡ ಹಿ.ಶಿ., ೨೦೦೭, ಕನ್ನಡ ವಿಷಯ ವಿಶ್ವಕೋಶ, ಕರ್ನಾಟಕ (ಪರಿಷ್ಕೃತ) ಸಂಪುಟ ೨, ಕುವೆಂಪು ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪು. ೧೯೨

೪. ಮಂಗಳ ಗಂಗ,ಸ್ಮರಣ ಸಂಚಿಕೆ, ೨೦೦೨, ಪ್ರಕಾಶಕರು -ಅಧ್ಯಕ್ಷರು ಮತ್ತು ಪದಾಧಿಕಾರಿಗಳು, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು.೭

೫. ಅದೇ., ಪು. ೮

೬. ಗೋಪಾಲರಾವ್ ಎಚ್.ಎಸ್. (ಸಂ.), ನೆಲದ ಸಿರಿ,ನೆನಪಿನ ಸಂಚಿಕೆ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು. ೪೯

೭. ದೇವರಕೊಂಡಾ ರೆಡ್ಡಿ, ೧೯೯೪, ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ಪು. ೧೮೦

೮. ಗೋಪಾಲರಾವ್ ಎಚ್.ಎಸ್. (ಸಂ.), ೨೦೦೮, ಗಂಗ ಶಿಲ್ಪಕಲೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು, ಪು. ೫೦

೯. ಮಂಗಳಗಂಗಾ, ಸ್ಮರಣ ಸಂಚಿಕೆ, ೨೦೦೨, ಪ್ರಕಾಶಕರು-ಅಧ್ಯಕ್ಷಕರು ಪದಾಧಿಕಾರಿಗಳು, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು.೭೦

೧೦. ಗೋಪಾಲರಾವ್ ಎಚ್.ಎಸ್. (ಸಂ.), ೧೯೯೭,ನೆಲದ ಸಿರಿ, ನೆನಪಿನ ಸಂಚಿಕೆ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು.೬೦.

೧೧. ಶಿವಗಂಗಾ ಸಿರಿ, ಸ್ಮರಣ ಸಂಚಿಕೆ, ೨೦೦೦, ಪ್ರಕಾಶಕರು-ಶಿವಗಂಗಾ ಕ್ಷೇತ್ರೋತ್ಸವ ಸಮಿತಿ ಶಿವಗಂಗೆ, ಪು. ೬೪

೧೨. ಮಂಗಳ ಗಂಗಾ, ಸ್ಮರಣ ಸಂಚಿಕೆ, ೨೦೦೨, ಪ್ರಕಾಶಕರು- ಅಧ್ಯಕ್ಷರು ಮತ್ತು ಪದಾಧಿಕಾರಿಗಳು, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು. ೧೧

೧೩. ಮಂಗಳಗಂಗಾ, ಸ್ಮರಣ ಸಂಚಿಕೆ, ೨೦೦೨, ಪ್ರಕಾಶಕರು- ಅಧ್ಯಕ್ಷರು ಮತ್ತು ಪದಾಧಿಕಾರಿಗಳು, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು. ೫

೧೪. ಎಲ್ಲೇಗೌಡ ಬೆಸಗರಹಳ್ಳಿ (ಸಂ.), ೧೯೯೭, ನೆಲದ ಸಿರಿ,ನೆನಪಿನ ಸಂಚಿಕೆ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು. ೩೫

೧೫. ಅದೇ., ಪು. ೩೬-೩೭

೧೬. ಸುವರ್ಣ ನೆಲ, ಸ್ಮರಣ ಸಂಚಿಕೆ, ೨೦೦೭, ಪ್ರಕಾಶಕರು-ಅಧ್ಯಕ್ಷರು ಮತ್ತು ಪದಾಧಿಕಾರಿಗಳು, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು.೭.

೧೭. ಅದೇ., ಪು. ೮-೯

೧೮. ಸುವರ್ಣ ನೆಲ-ಸ್ಮರಣ ಸಂಚಿಕೆ, ೨೦೦೭, ಪ್ರಕಾಶಕರು- ಅಧ್ಯಕ್ಷರು ಮತ್ತು ಪದಾಧಿಕಾರಿಗಳು, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು.೨೧

೧೯. ಅದೇ., ಪು. ೨೨

೨೦. ಮಂಗಳಗಂಗ, ಸ್ಮರಣ ಸಂಚಿಕೆ, ೨೦೦೨, ಪ್ರಕಾಶಕರು-ಅಧ್ಯಕ್ಷರು ಮತ್ತು ಪದಾಧಿಕಾರಿಗಳು, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು. ೬೩

೨೧. ಶಿವಗಂಗಾ ಸಿರಿ, ಸ್ಮರಣ ಸಂಚಿಕೆ, ೨೦೦೦, ಪ್ರಕಾಶಕರು-ಶಿವಗಂಗಾ ಕ್ಷೇತ್ರೋತ್ಸವ ಸಮಿತಿ, ಶಿವಗಂಗೆ, ಪು. ೧೨೧

೨೨. ಎಲ್ಲೇಗೌಡ ಬೆಸಗರಹಳ್ಳಿ (ಸಂ.), ಶಿವಗಂಗೆ ಮಡಿಲು,ಸ್ಮರಣ ಸಂಚಿಕೆ, ನೆಲಮಂಗಲ ತಾಲ್ಲೂಕಿನ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ, ನೆಲಮಂಗಲ, ಪು. ೩೪

೨೩. ಅದೇ., ಪು. ೩೬

೨೪. ಅದೇ., ಪು. ೩೮

೨೫. ಎಲ್ಲೇಗೌಡ ಬೆಸಗರಹಳ್ಳಿ (ಸಂ.), ೧೯೯೦, ಶಿವಗಂಗೆ ಮಡಿಲು,ಸ್ಮರಣ ಸಂಚಿಕೆ, ನೆಲಮಂಗಲ ತಾಲ್ಲೂಕು ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ, ನೆಲಮಂಗಲ, ಪು. ೪೦-೪೪

೨೬. ಸೂರ್ಯನಾಥ ಯು. ಕಾಮತ್, ೧೯೮೬, ಕರ್ನಾಟಕ ರಾಜ್ಯ ಗೆಜೆಟಿಯರ್ ಭಾಗ-ಮೂರು, ಕರ್ನಾಟಕ ರಾಜ್ಯ ಸರಕಾರ ಬೆಂಗಳೂರು, ಪು.೫೮೯

೨೭. ಮಂಗಳ ಗಂಗ, ಸ್ಮರಣ ಸಂಚಿಕೆ, ೨೦೦೨, ಪ್ರಕಾಶಕರು-ಅಧ್ಯಕ್ಷರು ಮತ್ತು ಪದಾಧಿಕಾರಿಗಳು, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು. ೭೩

೨೮. ಸುರೇಶ ಭೀ. ಹೂಗಾರ., ೨೦೦೮, ಕರ್ನಾಟಕದ ಪ್ರಮುಖ ಐತಿಹಾಸಿಕ ಸ್ಥಳಗಳು, ವಾಸನ್ ಪಬ್ಲಿಕೇಷನ್ಸ್, ಬೆಂಗಳೂರು, ಪು. ೧೩೭

೨೯. ಕ್ಷಮಾ ಶಿವಕುಮಾರ್, ೨೦೦೬, ಶಿವಗಂಗಾ (ಕ್ಷೇತ್ರ ದರ್ಶನ) ವಾಗ್ವಿಲಾಸ ಪ್ರಕಾಶನ, ಬೆಂಗಳೂರು, ಪು.೪

೩೦. ಮಂಗಳ ಗಂಗ,ಸ್ಮರಣ ಸಂಚಿಕೆ, ೨೦೦೨, ಪ್ರಕಾಶಕರು-ಅಧ್ಯಕ್ಷರು ಮತ್ತು ಪದಾಧಿಕಾರಿಗಳು, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು. ೩೧

೩೧.ಎಲ್ಲೇಗೌಡ ಬೆಸಗರಹಳ್ಳಿ (ಸಂ.), ೧೯೯೦, ಶಿವಗಂಗೆ ಮಡಿಲು,ಸ್ಮರಣ ಸಂಚಿಕೆ, ನೆಲಮಂಗಲ ತಾಲ್ಲೂಕುನ ಪ್ರಥಮ ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು. ೨೮

೩೨. ಮಂಗಳ ಗಂಗ, ಸ್ಮರಣ ಸಂಚಿಕೆ, ೨೦೦೨, ಪ್ರಕಾಶಕರು-ಅಧ್ಯಕ್ಷರು ಮತ್ತು ಪದಾಧಿಕಾರಿಗಳು, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ. ಪು.೧೦೫

೩೩. ಎಲ್ಲೇಗೌಡ ಬೆಸಗರಹಳ್ಳಿ (ಸಂ.), ೧೯೯೦, ಶಿವಗಂಗೆ ಮಡಿಲು,ಸ್ಮರಣ ಸಂಚಿಕೆ, ನೆಲಮಂಗಲ ತಾಲ್ಲೂಕು ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ, ನೆಲಮಂಗಲ, ಪು.೩೮

೩೪. ಮಂಗಳ ಗಂಗ, ಸ್ಮರಣ ಸಂಚಿಕೆ, ೨೦೦೨, ಪ್ರಕಾಶಕರು-ಅಧ್ಯಕ್ಷರು ಮತ್ತು ಪದಾಧಿಕಾರಿಗಳು, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು. ೬೨

೩೫. ಅದೇ., ಪು.೬೩

೩೬. ಸುವರ್ಣನೆಲ, ಸ್ಮರಣ ಸಂಚಿಕೆ, ೨೦೦೭, ಪ್ರಕಾಶಕರು-ಅಧ್ಯಕ್ಷರು ಮತ್ತು ಪದಾಧಿಕಾರಿಗಳು, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು.೧೩-೧೪

೩೭. ಮಂಗಳ ಗಂಗ, ಸ್ಮರಣ ಸಂಚಿಕೆ, ೨೦೦೨, ಪ್ರಕಾಶಕರು-ಅಧ್ಯಕ್ಷರು ಮತ್ತು ಪದಾಧಿಕಾರಿಗಳು, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು. ೧೧೨

೩೮. ಅದೇ., ಪು. ೧೫

ಅಧ್ಯಾಯ ಆರು

# ಆಧುನಿಕತೆಯ ಪ್ರಭಾವ

೬.೧. ಕೈಗಾರಿಕೀಕರಣದ ಹಿನ್ನೆಲೆ

೬.೨. ನಗರೀಕರಣದ ಹಿನ್ನೆಲೆ

೬.೩. ಜಾಗತೀಕರಣದ ಹಿನ್ನೆಲೆ

೬.೪. ಆಧುನಿಕ ಶಿಕ್ಷಣದ ಹಿನ್ನೆಲೆ

ಪ್ರತಿಯೊಂದು ರಾಷ್ಟ್ರವು ಕೂಡ ಅಭಿವೃದ್ಧಿಯ ಪಥದೆಡೆಗೆ ಸಾಗಲು ಪೈಪೋಟಿ ನಡೆಸುತ್ತದೆ. ವಿಜ್ಞಾನ ಮತ್ತು ತಂತ್ರಜ್ಞಾನ ಮುಂದುವರಿದಂತೆ ಆಧುನಿಕತೆ ಆವರಿಸುತ್ತದೆ. ಆಧುನಿಕತೆಯ ನೆಪದಲ್ಲಿ ಕೈಗಾರೀಕರಣ, ಜಾಗತೀಕರಣ, ನಗರೀಕರಣ ಮತ್ತು ಆಧುನಿಕ ಶಿಕ್ಷಣದ ಪ್ರಕ್ರಿಯೆಗಳು ಆರಂಭವಾಗುತ್ತವೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯದ ರಾಜಧಾನಿಯಾದ ಬೆಂಗಳೂರು ವಾಸ್ತವವಾಗಿ ದೇಶದಲ್ಲಿ ಮಾತ್ರವಲ್ಲ, ಏಷ್ಯಾ ಖಂಡದಲ್ಲೇ ಅತ್ಯಂತ ವೇಗವಾಗಿ ಬೆಳೆಯುತ್ತಿರುವ ನಗರ ಎಂದು ಹೆಸರು ಪಡೆದಿದೆ. ವಿದ್ಯುನ್ಮಾನ ಯುಗದಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನಗಳು ನಾಗಾಲೋಟದಿಂದ ಹೊಸ ಅವಿಷ್ಕಾರಗಳನ್ನು ಕಂಡುಕೊಂಡು 'ಸಿಲಿಕಾನ್ ಸಿಟಿ' ಎಂಬ ಪ್ರಸಿದ್ಧಿ ಪಡೆದಿದೆ. ಇದೀಗ ಗ್ರೇಟರ್ ಬೆಂಗಳೂರು ಆಗಿ ಬೆಳೆಯಲು ಸನ್ನದ್ಧವಾಗಿರುವ 'ಕರ್ನಾಟಕದ ನ್ಯೂಯಾರ್ಕ್' ಎಂದೇ ಪ್ರಖ್ಯಾತವಾಗಿದೆ. ಒಂದರ್ಥದಲ್ಲಿ ಈ ಮಹಾನಗರ ವಿಶ್ವವನ್ನೇ ತನ್ನಲ್ಲಿ ಅಡಗಿಸಿಕೊಂಡಿರುವ ಪುಟ್ಟ ವಿಶ್ವವಾಗಿ ಮುಂದುವರಿಯುತ್ತಿದೆ ಎನ್ನಬಹುದು. ಈ ವಿದ್ಯಮಾನಗಳ ಬೆಳವಣಿಗೆಯಿಂದ ಇತ್ತೀಚಿನ ಚುನಾವಣಾ ಸಮೀಕ್ಷೆಯ ಪ್ರಕಾರ ಬೆಂಗಳೂರು ನಗರದ ಒಟ್ಟು ಜನಸಂಖ್ಯೆ ೯೦ ಲಕ್ಷ ಎಂದು ತಿಳಿದು ಬಂದಿದೆ. ಇದು ೨೦೧೦ ವೇಳೆಗೆ ಒಂದು ಕೋಟಿಯಾಗುವ ಲಕ್ಷಣವನ್ನು ಸೂಚಿಸಿದೆ. ಈ ಜನಸಂಖ್ಯೆಗೆ ಅನುಗುಣವಾಗಿ ಕಟ್ಟಡಗಳು, ವ್ಯಾಪಾರ, ವಾಣಿಜ್ಯ, ಸಾರಿಗೆ, ಸಂಪರ್ಕ ಮತ್ತು ಕೈಗಾರಿಕೆಗಳು ಸ್ಥಾಪನೆಯಾಗಬೇಕಾಗಿದೆ. ಈ ಎಲ್ಲಾ ಕ್ಷೇತ್ರಗಳಲ್ಲಿ ಬೆಂಗಳೂರು ಅತ್ಯಂತ ವೇಗವಾಗಿ ಮುಂದುವರಿಯುತ್ತದೆ. ಹೀಗೆ ಅತೀ ವೇಗದಲ್ಲಿ ಬೆಳೆಯುತ್ತಿರುವ ನಗರ ಸಂಸ್ಕೃತಿ ಹಾಗೂ ಆ ವೇಗಕ್ಕೆ ಓಡಲು ಸಾಧ್ಯವಾಗದೇ ಕುಂಟುತ್ತಾ ತೆವಳುತ್ತಾ ಸಾಗುವ ಪಕ್ಕದ ಗ್ರಾಮೀಣ ಸಂಸ್ಕೃತಿ ಮಾಸುತ್ತಿದೆ. ಈ ಹಂತದಲ್ಲಿ ಮೊದಲ ಬಲಿ ನೆಲಮಂಗಲ ತಾಲ್ಲೂಕು ಎನ್ನಬಹುದು.

**೬.೧. ಕೈಗಾರೀಕರಣ ಹಿನ್ನೆಲೆ**

ಕೈಗಾರಿಕೆಗಳ ಕ್ಷೇತ್ರದಲ್ಲಿ ಬೆಂಗಳೂರು ಭಾರತದಲ್ಲಿ ಐದನೆಯ ಸ್ಥಾನದಲ್ಲಿದೆ. ಬೆಂಗಳೂರಿಗೆ ಹತ್ತಿರವಿರುವ ನೆಲಮಂಗಲವು ಅನೇಕ ಬೃಹತ್ ಕೈಗಾರಿಕೆಗಳ ತಾಣವಾಗಿದೆ. ರಾಷ್ಟ್ರೀಯ ಹೆದ್ದಾರಿ - ೪ ಕ್ಕೆ ಹೊಂದಿಕೊಂಡಂತೆ ಇರುವ ನೆಲಮಂಗಲದ ರಸ್ತೆಯ ಪಕ್ಕದಲ್ಲಿನ ಕುಣಿಗಲ್ ದೊಡ್ಡಬಳ್ಳಾಪುರ ಬೇಗೂರು ಮತ್ತು ತ್ಯಾಮಗೊಂಡ್ಲು ರಸ್ತೆಗಳ ಬದಿಯಲ್ಲಿ ಬೃಹತ್ ಪ್ರಮಾಣದ ಕೈಗಾರಿಕೆಗಳು ತಲೆ ಎತ್ತಿವೆ. ವಿದೇಶಿ ಕಂಪನಿಗಳಾದ ಕಿರ್ಲೋಸ್ಕರ್, ಪೆಪ್ಸಿ, ಬಯೋಕಾನ್, ಬಿ.ಪಿ.ಎಲ್. ಇಂಡಸ್‌ಪಿಲಾ ಪೋಸಾರ್ಸ ಇವೇ ಮೊದಲಾದ ಬೃಹತ್ ಕೈಗಾರಿಕೆಗಳು ಸ್ಥಾಪನೆಯಾಗಿವೆ. ಈ ಕೈಗಾರಿಕೆಗಳು ಇಲ್ಲಿನ ಜನಜೀವನವನ್ನು ಅಗಾಧವಾಗಿ ಮಾರ್ಪಡಿಸಿವೆ.

ಕೈಗಾರಿಕೆಗಳ ಸ್ಥಾಪನೆಗಾಗಿ ಕೃಷಿಯ ಭೂಮಿಯನ್ನು ಒತ್ತುವರಿ ಮಾಡಿಕೊಳ್ಳಲಾಗುತ್ತಿದೆ. ರೈತರು ತಮ್ಮ ಕೃಷಿ ಭೂಮಿಯನ್ನು ಕಳೆದುಕೊಳ್ಳುತ್ತಿದ್ದಾರೆ. ಅಲ್ಲದೇ ರೈತರು ತಮ್ಮ ಕೃಷಿ ಭೂಮಿಯ ಮಾರಾಟದಿಂದ ಪಡೆದ ದುಡ್ಡು, ಮಧ್ಯಪಾನ, ಜೂಜಿನ ಪಾಲಾಗಿ ನಿರುದ್ಯೋಗಿಗಳಾಗಿ ಸಮಾಜ ಬಾಹಿರ ಚಟುವಟಿಕೆಗೆ ಮುಂದಾಗಿರುವುದು

ಕಂಡುಬರುತ್ತಿದೆ. ಹಣವನ್ನು ವಿಲಾಸಿ ಜೀವನ, ದುಂದುವೆಚ್ಚಗಳಿಗೆ ವ್ಯಯ ಮಾಡುತ್ತಿದ್ದಾರೆ. ಇವರಿಗೆ ಕೃಷಿವೊಂದೇ ಗೊತ್ತಿರುವುದರಿಂದ ಕೈಗಾರಿಕೆಗಳಲ್ಲಿ ಕೆಲಸ ಮಾಡಲು ಸಾಧ್ಯವಾಗುವುದಿಲ್ಲ. ಗ್ರಾಮೀಣ ಪ್ರದೇಶಗಳಲ್ಲಿ ತಮ್ಮದೇ ಆದ ಸಾಂಸ್ಕೃತಿಕ ಬದುಕು ಮತ್ತು ಸಂಬಂಧಗಳ ಜೋಡಣೆಯನ್ನು ಹೊಂದಿರುವಂತಹ ಜನರಿಗೆ ಬದುಕಿಗಾಗಿ ಉದ್ಯೋಗ ಹರಸಿ ಗ್ರಾಮಗಳನ್ನೇ ತೊರೆದು ಹೋಗುವ ಸ್ಥಿತಿಯೂ ಬಂದೊದಗಿದೆ. ಹೀಗೆ ಬೇರೆ ಕಡೆಗೆ ರೈತರು ವಲಸೆ ಹೋದಾಗ ಹಲವು ಸಂಕಷ್ಟಗಳಿಗೆ ಒಳಗಾಗಿ ಅವರ ಬದುಕೇ ದುಸ್ತರವಾಗುತ್ತಿದೆ. ಈ ರೀತಿಯಾಗಿ ಒಂದು ಕಡೆ ರೈತರು ತಮ್ಮ ಕೃಷಿ ಭೂಮಿಯನ್ನು ಕಳೆದುಕೊಂಡು ಸಂಕಷ್ಟಕ್ಕೆ ಒಳಗಾಗುತ್ತಿದ್ದಾರೆ. ಮತ್ತೊಂದೆಡೆಗೆ ಕೃಷಿ ಭೂಮಿ ಮಾರಾಟದಿಂದ ಹಣ ಪಡೆದ ರೈತರು ಅನುಭೋಗಿ ಸಂಸ್ಕೃತಿಗೆ ಮರುಳಾಗಿ ಕೈಯಲ್ಲೊಂದು ಮೊಬೈಲು, ಕಾರುಗಳಲ್ಲಿ ಓಡಾಡಿ, ಗೂಂಡಾಗಿರಿ ಮಾಡುತ್ತಾ ಹಣ ಪೋಲು ಮಾಡುತ್ತಿದ್ದಾರೆ. ಅಲ್ಲದೇ ರೈತರ ಭೂಮಿಯೆಲ್ಲ ವಿದೇಶಿ ಪಾಲಾಗಿದ್ದು ಭೂಮಿಯ ಬೆಲೆ ಹತ್ತುಪಟ್ಟು ಜಾಸ್ತಿಯಾಗಿ ಅಡಿ ಲೆಕ್ಕದ ಭೂಮಿಯ ಬೆಲೆ ನಿರ್ಧಾರವಾಗುತ್ತಿದೆ. ಭೂಮಿಯ ಮಾರಾಟದ ಕಾರ್ಯನಿರ್ವಹಣೆಗಾಗಿ ರಿಯಲ್ ಎಸ್ಟೇಟ್ ಏಜೆನ್ಸಿ ದಂಧೆಯಂತೂ ವಿಪರೀತವಾಗಿದೆ. ಇವರ ದುಷ್ಪರಿಣಾಮ ಸಮಾಜದ ಮೇಲೆ ಬೀರುತ್ತಿದೆ. ಹಣ ತನ್ನ ಮೌಲ್ಯವನ್ನು ಕಳೆದುಕೊಂಡು ಶ್ರೀಮಂತ ಅತೀ ಶ್ರೀಮಂತನಾಗುತ್ತಿದ್ದರೆ, ಬಡವ ಕಡು ಬಡವನಾಗುತ್ತಿದ್ದಾನೆ.

ತಾಲ್ಲೂಕಿನಲ್ಲಿ ಅನೇಕ ಬೃಹತ್ ಕೈಗಾರಿಕೆಗಳು ಸ್ಥಾಪನೆಯಾಗಿ ಕೃಷಿ ಭೂಮಿ ಒತ್ತುವರಿಯಾಗಿ ಅನೇಕ ಸಮಸ್ಯೆಗಳು ಉದ್ಭವಿಸುವುದರ ಹಿನ್ನಲೆಯಲ್ಲಿಯೇ ಬೆಂಗಳೂರಿನ ಐ.ಟಿ/ಬಿ.ಟಿ. ಉದ್ಯಮಗಳು ಮತ್ತು ರಾಸಾಯನಿಕ ಕೈಗಾರಿಕೆಗಳು ವಿಷಪೂರಿತ ತ್ಯಾಜ್ಯವಸ್ತುಗಳನ್ನು ನೆಲಮಂಗಲದ ದಾಬಸಪೇಟೆ ಸಮೀಪ ವಿಲೇವಾರಿ ಮಾಡುವ ಉದ್ದೇಶವನ್ನು ಹೊಂದಿವೆ. ಈ ರೀತಿಯಾಗಿ ನೆಲಮಂಗಲವು ಕೈಗಾರೀಕರಣದ ಪ್ರಭಾವದಿಂದಾಗಿ ಬೆಂಗಳೂರಿನ ಕಸದ ತೊಟ್ಟಿಯಾಗುತ್ತಿದೆ.

**೬.೨. ನಗರೀಕರಣದ ಹಿನ್ನೆಲೆ**

ತಾಲ್ಲೂಕಿನ ಜನರು ಮೂಲಭೂತ ಸೌಲಭ್ಯಗಳಿಗನುಗುಣವಾಗಿ ನಗರೀಕರಣದ ಪ್ರಭಾವಕ್ಕೆ ಒಳಗಾಗುತ್ತಿದ್ದಾರೆ. ಬೆಂಗಳೂರಿಗೆ ಹತ್ತಿರವಿರುವ ನೆಲಮಂಗಲದಲ್ಲಿನ ಜನರು ಮಕ್ಕಳ ವಿದ್ಯಾಭ್ಯಾಸ, ಉದ್ಯೋಗ ಇತ್ಯಾದಿ ನೆಪಗಳನ್ನು ಮುಂದು ಮಾಡಿ ನೆಲಮಂಗಲವನ್ನೇ ತೊರೆದು ಬೆಂಗಳೂರಿಗೆ ಹೋಗುತ್ತಿದ್ದಾರೆ. ಈ ಪರಿಸ್ಥಿತಿಯನ್ನು ಗಮನಿಸಿದರೆ ನೆಲಮಂಗಲ ಎಂದೋ ಒಂದು ದಿನ ಜನರಹಿತವಾಗಬಹುದು ಅಥವಾ ಸಂಪೂರ್ಣ ವ್ಯವಹಾರದ ಕೇಂದ್ರವಾಗಿ ತನ್ನ ಪಾರಂಪರಿಕ ಸಂಸ್ಕೃತಿಯನ್ನು ನಾಶಮಾಡಿಕೊಳ್ಳಬಹುದು ಎಂಬ ಆತಂಕವೂ ಕಾಡುತ್ತದೆ.

೧೯೨೧ ರ ಜನಗಣತಿಯ ಪ್ರಕಾರ ಇಡೀ ನೆಲಮಂಗಲ ತಾಲ್ಲೂಕು (ನಾಲ್ಕು ಹೋಬಳಿಗಳು ಸೇರಿ) ಜನಸಂಖ್ಯೆ ೭೦,೨೮೪ ಇದ್ದು, ಆಗ ನೆಲಮಂಗಲ ತಾಲ್ಲೂಕಿನ ವಿಸ್ತೀರ್ಣ ೨೫೫.೫೩೧ (೬೫೪.೧೬ ಚ.ಕಿ.ಮೀ.) ಚದುರ ಮೈಲಿಯನ್ನು ಹೊಂದಿದೆ. ಆ ಕಾಲಕ್ಕೆ ನೆಲಮಂಗಲ ತಾಲ್ಲೂಕಿನ ತ್ಯಾಮಗೊಂಡ್ಲು ಬೆಂಗಳೂರು ಜಿಲ್ಲೆಯ ಪ್ರಮುಖ ವ್ಯಾಪಾರ ಕೇಂದ್ರಗಳಲ್ಲಿ ಒಂದಾಗಿದ್ದಿತ್ತು. ಇಡೀ ಜಿಲ್ಲೆಯಲ್ಲಿ ಬೆಂಗಳೂರು ನಗರಸಭೆಯನ್ನು ಸೇರಿಸಿಕೊಂಡು ಪುರಸಭೆಯ ಆರಂಭ ಶಿಲ್ಕು (ಉಳಿತಾಯದ ಹಣ) ೬೦೮೭ ರೂ. ಆಗಿದ್ದು, ಹೆಚ್ಚು ಆರಂಭ ಶಿಲ್ಕು ಉಳಿಸಿಕೊಟ್ಟಿತ್ತು.[೧] ಆನಂತರದ ದಿನಗಳಲ್ಲಿ ನೆಲಮಂಗಲ ತಾಲ್ಲೂಕಿನ ಪ್ರದೇಶಗಳಿಗೆ ಉದ್ಯೋಗ ವಿದ್ಯಾಭ್ಯಾಸ ಇತರ ಅವಶ್ಯಕತೆಗಾಗಿ ಜನರು ವಲಸೆ ಬರಲಾರಂಭಿಸಿದರು. ಕೈಗಾರಿಕೆಗಳ ಸ್ಥಾಪನೆಯಿಂದಾಗಿ ಇಲ್ಲಿನ ಉದ್ಯೋಗಿಗಳು ಕೆಲಸಕ್ಕೆ ಬೆಂಗಳೂರಿನಿಂದ ಬರುತ್ತಿದ್ದರು. ಇದರಿಂದಾಗಿ ಹೆಚ್ಚಿನ ಸಮಯವನ್ನು

ವ್ಯರ್ಥಮಾಡಿಕೊಳ್ಳುತ್ತಿದ್ದರು. ಈ ಕಾರಣದಿಂದಾಗಿ ಕಾರ್ಮಿಕರು ಹಾಗೂ ಅಧಿಕಾರಿಗಳು ನೆಲಮಂಗಲದ ಪ್ರದೇಶಗಳಲ್ಲಿಯೇ ವಾಸಿಸಲು ಮುಂದಾದರು. ವಾಸಕ್ಕಾಗಿ ಹೊಸ ಹೊಸ ಕಟ್ಟಡಗಳನ್ನು ಕಟ್ಟಲಾಗಿ ಹೊಸ ಬಡಾವಣೆಗಳು ನಿರ್ಮಾಣವಾದವು. ಹೀಗೆ ನಿರ್ಮಾಣವಾದ ಹೊಸ ಬಡಾವಣೆಗಳಿಗೆ ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು, ಚರಂಡಿ ವ್ಯವಸ್ಥೆ, ರಸ್ತೆ ನಿರ್ಮಾಣ, ಸಾರಿಗೆ ಸಂಪರ್ಕ, ವ್ಯಾಪಾರ-ವಾಣಿಜ್ಯ, ಆಸ್ಪತ್ರೆ ಮೊದಲಾದ ಸೌಲಭ್ಯಗಳು ಸ್ಥಾಪಿತಗೊಂಡವು. ಇಂದಿನ ದಿನಗಳಲ್ಲಿ ಜನಸಂಖ್ಯೆ ಹೆಚ್ಚಾದಂತೆ ಇಲ್ಲಿನ ಉದ್ಯಮಿಗಳು, ಶ್ರೀಮಂತರು ಲಾಭಕ್ಕಾಗಿ ಬಾಡಿಗೆ ಮನೆಗಳ ನಿರ್ಮಾಣದಲ್ಲಿ ತೊಡಗಿದರು. ಅಲ್ಲದೇ ಅವಿಭಕ್ತ ಕುಟುಂಬಗಳು ಒಡೆದು ಹತ್ತು ಹಲವಾರು ಕುಟುಂಬಗಳಾದವು. ಅಪ್ಪನದೊಂದು ಮನೆ; ಮಗನದೊಂದು ಮನೆ; ಮೊಮ್ಮಗನದೊಂದು ಮನೆಗಳಾದವು. ಹೀಗೆ ಇಲ್ಲಿನ ಮನುಷ್ಯನ ಜೀವನ ಸಂಪೂರ್ಣವಾಗಿ ಸೋರಿ ವ್ಯವಹಾರಿಕವಾಗಿ ಮಾತ್ರ ಉಳಿಯಿತು.

ಅತ್ಯಂತ ವೇಗವಾಗಿ ಬೆಳೆಯುತ್ತಿರುವ ಬೆಂಗಳೂರು ನಗರದ ಮೇಲೆ ಹೆಚ್ಚಾಗುತ್ತಿರುವ ಒತ್ತಡವನ್ನು ಕಡಿತಗೊಳಿಸಲು ಹಿಂದಿನ ಸರ್ಕಾರಗಳು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರವನ್ನು ರಚಿಸಿತ್ತು. “೧೯೬೧ ರ ಕರ್ನಾಟಕ ನಗರ ಮತ್ತು ಪಟ್ಟಣ ಯೋಜನಾ ಕಾಯಿದೆ”ಯನ್ನು ಆಧಾರವಾಗಿಟ್ಟುಕೊಂಡು ನೆಲಮಂಗಲಕ್ಕೆ ಅನ್ವಯವಾಗುವಂತೆ ಯೋಜನಾ ವಿಮಾನ ವಲಯ, ಕೈಗಾರಿಕಾ ವಲಯ ಮತ್ತು ಸ್ಥಳೀಯ ರಸ್ತೆ ಪ್ರದೇಶಗಳೆಂಬ ವಿಭಾಗಗಳನ್ನು ರಚಿಸಿತು.

ಸ್ಥಳೀಯ ಪ್ರದೇಶದ ಯೋಜನೆಯಡಿಯಲ್ಲಿ ಅನೇಕಲ್ ಹೊಸಕೋಟೆ ಕನಕಪುರ ಮಾಗಡಿ ಮತ್ತು ನೆಲಮಂಗಲ ತಾಲ್ಲೂಕಿನ ೪೦ ರಿಂದ ೮೫ ಸಾವಿರ ಹೆಕ್ಟೇರ್ ಕೃಷಿ ಭೂಮಿಯನ್ನು ಸ್ವಾಧೀನ ಪಡಿಸಿಕೊಂಡು ಅಭಿವೃದ್ಧಿಗೆ ಬಳಸಲು ಪ್ರಾಥಮಿಕ ಆದ್ಯತೆ ನೀಡಲಾಯಿತು. ಒಟ್ಟು ೨೦೧೯೩ ಎಕರೆ ಕೃಷಿ ಭೂಮಿಯನ್ನು ಸರ್ಕಾರ ನಗರಾಭಿವೃದ್ಧಿಗಾಗಿ ನೀಡಿತು. ಇದರಿಂದ ರೈತರು ಕೂಲಿ ಕಾರ್ಮಿಕರು ತಮ್ಮ ಬದುಕನ್ನು ಕಳೆದುಕೊಂಡರು. ನೆಲಮಂಗಲವು ಕರ್ನಾಟಕದ ೧೮ ಜಿಲ್ಲಾಕೇಂದ್ರಗಳಿಗೆ ತನ್ಮೂಲಕ ಹಾದಿಯನ್ನು ಕೊಟ್ಟಿದೆ. ಬೆಂಗಳೂರಿನಿಂದ ಪುಣೆ ಮತ್ತು ಮಂಗಳೂರಿಗೆ ಸಂಪರ್ಕ ಕಲ್ಪಿಸಿರುವ ರಾಷ್ಟ್ರೀಯ ಹೆದ್ದಾರಿಗಳಾದ ನಂ. ೪ ಮತ್ತು ನಂ. ೪೮ ಈ ತಾಲ್ಲೂಕಿನ ಹೃದಯ ಭಾಗದಲ್ಲಿ ಹಾದು ಹೋಗಿವೆ. ಇದರಿಂದ ಈ ಪ್ರದೇಶಗಳ ವ್ಯಾಪಾರ-ವಾಣಿಜ್ಯ ಚಟುವಟಿಕೆಗಳು ಮುಂದುವರಿದಿವೆ. ಆದರೂ ಮೆಟ್ರೋ ಯೋಜನೆಗೆ ಈಗಾಗಲೇ ಚಾಲನೆ ನೀಡಿರುವ ರಾಜ್ಯ ಸರ್ಕಾರ ನಗರಗಳ ರಸ್ತೆ ಅಗಲೀಕರಣಕ್ಕಾಗಿ ಕಾಯ್ದೆಯನ್ನು ಬಳಸಿದೆ. ಇದು ಸೌಂದರ್ಯ, ಸ್ವಚ್ಛತೆ, ಕೈಗಾರಿಕೆಗಳು ಮತ್ತು ಪರಿಸರ ಮಾಲಿನ್ಯ ನಿಯಂತ್ರಣಕ್ಕಾಗಿ ಸ್ಲಂಗಳ ಸುಧಾರಣೆಗೆ ಆದ್ಯತೆ ನೀಡುತ್ತಿದ್ದೇವೆ ಎಂದು ಭೂಮಿಯನ್ನು ಕಬಳಿಸುತ್ತಿವೆ.

ಗ್ರೇಟರ್ ಬೆಂಗಳೂರು ಆಗಲು ಈ ಮಹಾನಗರ ಸಿದ್ಧವಾಗಿದೆ. ಗ್ರೇಟರ್ ಬೆಂಗಳೂರು ಯೋಜನೆಯ ಪ್ರಕಾರ ಗ್ರಾಮಾಂತರ ಜಿಲ್ಲೆಯ ಬಹುತೇಕ ಎಲ್ಲಾ ತಾಲ್ಲೂಕು ಮತ್ತು ಹಳ್ಳಿಗಳಿಗೆ ಈ ಮಾಯಾನಗರ ಮಣ್ಣುಮುಕ್ಕಿಸುತ್ತಿದೆ. ಅದರಂತೆ ನೆಲಮಂಗಲ ತಾಲ್ಲೂಕನ್ನು ನಗರಾಭಿವೃದ್ಧಿಯ ಯೋಜನೆಯಡಿಯಲ್ಲಿ ನಿಗಧಿಪಡಿಸಲಾಗಿದ್ದು, ಅಂತರ್ ಸಂಪರ್ಕ ಕಲ್ಪಿಸಲು ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದ ನೆರವಿನೊಂದಿಗೆ ೨೮೪ ಕಿ.ಮೀ. ಉಪನಗರ ವರ್ತುಲ ರಸ್ತೆ, ೧೮೪ ಕಿ.ಮೀ. ಮಧ್ಯಂತರ ವರ್ತುಲ ರಸ್ತೆಗಳನ್ನು ಸುಮಾರು ೪೦,೦೦೦ ಎಕರೆ ಕೃಷಿ ಭೂಮಿಯಲ್ಲಿ ನಿರ್ಮಿಸಲು ತೀರ್ಮಾನಿಸಲಾಗಿದೆ. ಈ ರಸ್ತೆಯಲ್ಲಿ ಗಂಟೆಗೆ ೧೮೦ ಕಿ.ಮೀ. ವೇಗದಲ್ಲಿ ವಾಹನಗಳು ಸಂಚರಿಸಬಹುದಾಗಿದೆ. ಆದರೆ ಸಾರ್ವಜನಿಕರು ಈ ರಸ್ತೆಯಲ್ಲಿ ಓಡಾಡುವ ಹಾಗೆ ಇಲ್ಲವಂತೆ.

ಆದರೆ ಸಾರ್ವಜನಿಕರಿಗೆ ಪಕ್ಕದಲ್ಲಿ ಏಳೂವರೆ ಮೀ. ಅಗಲದ ರಸ್ತೆಯನ್ನು ನಿರ್ಮಿಸುತ್ತಾರೆ. ಅಲ್ಲಿ ಸ್ಥಳೀಯ ಜನರು ಸಂಚರಿಸಬೇಕು.[೧] ವರ್ತುಲ ರಸ್ತೆಗಳ ಎರಡು ಬದಿಗಳಿಗೆ ತಡೆ ಗೋಡೆಗಳನ್ನು ನಿರ್ಮಿಸಿ ಟೌನ್‌ಶಿಫ್‌ನಿಂದ ಟೌನ್‌ಶಿಫ್‌ಗೆ ಮತ್ತು ವಿಮಾನ ನಿಲ್ದಾಣಕ್ಕೆ ನೇರ ಸಂಪರ್ಕ ಕಲ್ಪಿಸುವ ಉದ್ದೇಶವಿದೆ ಎಂದು ಹೇಳಲಾಗಿದೆ. ಇದರಿಂದ ನೆಲಮಂಗಲ ತನ್ನ ಸಂಪೂರ್ಣ ಗ್ರಾಮೀಣ ಸೊಗಡನ್ನು ಮರೆಯುವುದರಲ್ಲಿ ದೂರವಿಲ್ಲ.

ಬೆಂಗಳೂರಿನ ಕೇಂದ್ರಭಾಗವನ್ನು ಹಿಗ್ಗಿಸಲು ಗ್ರಾಮಾಂತರ ಪ್ರದೇಶಗಳನ್ನು ಕಬಳಿಸುತ್ತಿದೆ. ಗ್ರೇಟರ್ ಯೋಜನೆಯು ಪೂರ್ಣವಾಗಲು ೧೦ ರಿಂದ ೧೫ ಲಕ್ಷ ಎಕರೆಗಳಷ್ಟು ಕೃಷಿ ಭೂಮಿ ಅಗತ್ಯವಿದೆ. ನೆಲಮಂಗಲ ತಾಲ್ಲೂಕಿನಲ್ಲಿ ೭೩,೪೮೦ ಎಕರೆ ಕೃಷಿ ಭೂಮಿಯನ್ನು ಈ ಯೋಜನೆಯಲ್ಲಿ ತರಲಾಗುತ್ತಿದೆ. ಮೇಲ್ನೋಟಕ್ಕೆ ಸರ್ಕಾರಿ ಭೂಮಿಯನ್ನೇ ಹೆಚ್ಚಾಗಿ ಈ ಯೋಜನೆಗಳಿಗೆ ಬಳಸಲಾಗುತ್ತಿದೆ ಎಂಬ ವದಂತಿಗಳು  ಕೇಳಿಬರುತ್ತಿವೆ. ಇವರು ಸರ್ಕಾರಿ ಭೂಮಿಯೆಂದು ಹೇಳುತ್ತಿರುವ ಭೂಮಿಯಲ್ಲಿ ಶೇ.೫೦ ರಷ್ಟು ಭಾಗ ಭೂರಹಿತ ದಲಿತ ಮತ್ತು ಹಿಂದುಳಿದ ವರ್ಗಕ್ಕೆ ಸೇರಿದ್ದು, ಸರ್ಕಾರ ಹಂಚಿಕೆ ಮಾಡಿದ್ದ ಜಮೀನು ಇಂದು ಸರ್ಕಾರಿ ಜಮೀನು ಎಂದು ಹೇಳುವ ಮೂಲಕ ಆ ಜನರಿಗೆ ವಂಶಪಾರಂಪರಿಕವಾಗಿ ಅದೇ ಭೂಮಿಯಲ್ಲಿ ೨೦-೩೦ ವರ್ಷಗಳಿಂದ ಕೃಷಿ ಮಾಡುತ್ತಾ ಬಂದಿರುವ ಜನರಿಗೆ ಮತ್ತು ಕೂಲಿ ಕಾರ್ಮಿಕರಿಗೆ ಯಾವುದೇ ಪರಿಹಾರಗಳನ್ನು ನೀಡದೇ ಅವರ ಬದುಕನ್ನು ಬಂಡವಾಳಿಗರ ಅಭಿವೃದ್ಧಿ ಹೆಸರಿನಲ್ಲಿ ಕೊಲ್ಲಲ್ಪಡುತ್ತಿದೆ. ಹೀಗೆ ನಗರಾಭಿವೃದ್ಧಿಯ ಯೋಜನೆಯಡಿಯಲ್ಲಿ ಇಂದು ಪಟ್ಟಣವಾಗಿರುವ ನೆಲಮಂಗಲವು ಮುಂದಿನ ದಿನಗಳಲ್ಲಿ ನಗರವಾಗಿ ಬೆಂಗಳೂರಿನ ಮಹಾನಗರಕ್ಕೆ ಸೇರಿಕೊಳ್ಳುತ್ತದೆ ಎಂದರೆ ಅತಿಶಯೋಕ್ತಿಯಾಗಲಾರದು.

**೬.೩. ಜಾಗತೀಕರಣದ ಹಿನ್ನೆಲೆ**

ಆಧುನಿಕ ಮಾಹಿತಿ ತಂತ್ರಜ್ಞಾನದ ಬೆಳವಣಿಗೆ, ಸಂಪರ್ಕ ಕ್ರಾಂತಿಯ ಅಭಿವೃದ್ಧಿಯ ಪರಿಣಾಮವಾಗಿ ಅಖಂಡ ವಿಶ್ವವು ಒಂದೇ ಘಟಕವಾಗಿ ಪರಿವರ್ತನೆಯಾಗುವ ಪ್ರಕ್ರಿಯೇ ಜಾಗತೀಕರಣ. ಅಂದರೆ ಜಗತ್ತೇ ಒಂದು ಗ್ರಾಮವಾಗಿ, ಜಗತ್ತಿನಲ್ಲಿ ಒಂದಾಗುವುದು ಎಂದರ್ಥ. “ಆಧುನಿಕತೆ ಸಾಂಸ್ಕೃತಿಕ ಚಿಂತನೆ ಬದುಕನ್ನು ಮೃದುಗೊಳಿಸುವುದಕ್ಕೆ ಪ್ರೀತಿ ವಿಶ್ವಾಸಗಳ ಸಾಧ್ಯತೆಯನ್ನು ತೋರುವುದಕ್ಕೆ ಅವಕಾಶ ಕಲ್ಪಿಸುತ್ತದೆ. ಆರ್ಥಿಕ ಬದುಕು ಬದಲಾವಣೆಯಾದಾಗ ಸಾಂಸ್ಕೃತಿಕ ಅಭಿವ್ಯಕ್ತಿ ಕಳೆದುಹೋಗುವುದಿಲ್ಲ. ಆಧುನಿಕತೆ ಹೊಂದಿರುವ ವಿಶಾಲ ವ್ಯಾಪ್ತಿ ಮನುಷ್ಯನ ಮೂಲಭೂತ ಅವಶ್ಯಕತೆಗಳನ್ನು ಸದಾ ಕಾಲ ಸಂರಕ್ಷಿಸುತ್ತದೆ. ಆದರೆ ಜಾಗತೀಕರಣ ಹೀಗಲ್ಲ. ಆಧುನೀಕರಣದಲ್ಲಿನ ಆರ್ಥಿಕ ಹಿತಾಸಕ್ತಿ ಎನ್ನುವುದನ್ನು ಪ್ರತ್ಯೇಕಿಸಲು ಅದನ್ನೊಂದೇ ಜಾರಿಗೊಳಿಸಿ, ಆಧುನೀಕತೆಯ ಇತರ ಅಂಶಗಳನ್ನು ಗೌಣವಾಗಿಸುತ್ತದೆ.”[೨] ಜಾಗತೀಕರಣ ಸಾಂಸ್ಕೃತಿಕವಾಗಿ ಏಕರೂಪಿ ಆಕ್ರಮಣಕಾರಿ ಸಾಂಸ್ಕೃತಿಕ ವೈವಿಧ್ಯವುಳ್ಳ ನಮ್ಮ ಬಹುರೂಪಿ ಸಂಸ್ಕೃತಿಗಳನ್ನು ನಾಶಪಡಿಸುತ್ತಿದೆ. ಜಾಗತೀಕರಣವು ಭೋಗ ಸಂಸ್ಕೃತಿಯಾಗಿರುತ್ತದೆ. ಅದು ಬಡವರಲ್ಲಿ ಭೋಗ ಸಂಸ್ಕೃತಿಗೆ ಪ್ರೇರಣೆ ಮಾಡಿ ದುಃಖಕ್ಕೆ ಕಾರಣವಾಗಿದೆ. ನೆಲಮಂಗಲವು ಕೂಡ ಭೋಗ ಸಂಸ್ಕೃತಿಯ ಜಾಗತೀಕರಣದ ಪ್ರಭಾವಕ್ಕೆ ಒಳಗಾಗಿದೆ. ಇಲ್ಲಿನ ಜನರ ಜೀವನದ ಎಲ್ಲಾ ಕ್ಷೇತ್ರಗಳ ಮೇಲೂ ಪ್ರಭಾವ ಬೀರಿದೆ. ಜಾಗತೀಕರಣದ ಪರಿಣಾಮವಾಗಿ ಜೀವನ ಒಂದು ರೀತಿ ಯಾಂತ್ರೀಕರಣವಾಗುತ್ತಿದೆ. ಮಾನವೀಯ ಸಂಬಂಧಗಳನ್ನೆಲ್ಲ ವ್ಯವಹಾರಿಕವಾಗಿ ನೋಡಲಾಗಿ ಭಾವುಕ ವಾತಾವರಣವೇ ಹೊರಟು ಹೋಗುತ್ತಿದೆ. ನೆಲಮಂಗಲದ ಜನರು ಜಾಗತೀಕರಣದ ಹಿನ್ನೆಲೆಯಲ್ಲಿ ಮುಂದುವರಿದಂತೆ ತಂದೆ-ತಾಯಿ, ಬಂಧು-ಬಳಗದಿಂದ ದೂರವಿದ್ದು, ನಮ್ಮ ಸಂಸ್ಕೃತಿಯನ್ನು ಕೈಬಿಟ್ಟು

ಪಾಶ್ಚಿಮಾತ್ಯ ಜೀವನ ಶೈಲಿಯನ್ನು ಅಳವಡಿಸಿಕೊಳ್ಳುತ್ತಿದ್ದಾರೆ. ಒಂದು ರೀತಿಯ 'Generation gap' ಉಂಟಾಗುತ್ತಿದೆ.

ಗ್ರಾಮೀಣ ಸಂಸ್ಕೃತಿಯನ್ನು ಹೊಂದಿರುವ ನೆಲಮಂಗಲದ ಜನರ ಮುಖ್ಯ ಕಸುಬು ಕೃಷಿ. ಈ ಕೃಷಿಯ ಮೇಲೆ ಜಾಗತೀಕರಣ ಪ್ರಭಾವವನ್ನು ಬೀರಿದೆ. ರೈತರು ಕೃಷಿಯಲ್ಲಿ ಸಾಂಪ್ರದಾಯಿಕವಾಗಿ ಮರದ ನೇಗಿಲು ಬಳಸುತ್ತಿದ್ದು, ತದನಂತರದಲ್ಲಿ ಕಬ್ಬಿಣದ ನೇಗಿಲು ಬಳಸಿ, ಇತ್ತೀಚಿಗೆ ಟ್ರ್ಯಾಕ್ಟರ್, ಟ್ರಿಲ್ಲರ್‌ಗಳ ಸಹಾಯದಿಂದ ಭೂಮಿಯನ್ನು ಉತ್ತು ವ್ಯವಸಾಯ ಮಾಡುವ ಹಂತಕ್ಕೆ ಜಾಗತೀಕರಣ ಪ್ರಭಾವ ಬೀರಿದೆ. ಅಲ್ಲದೇ ಸಾವಯವ ಗೊಬ್ಬರ ಮತ್ತಿತರ ಬೀಜಗಳನ್ನು ಬಳಸಿ ಬೇಸಾಯ ಮಾಡುತ್ತಿದ್ದರು. ಆದರೆ ಜಾಗತೀಕರಣದ ಹಿನ್ನೆಲೆಯಲ್ಲಿ ಕೃಷಿಗೆ ರಸಗೊಬ್ಬರ ಮತ್ತು ಹೈಬ್ರಿಡ್ ಬೀಜಗಳ ಹಾವಳಿ ಹೆಚ್ಚಾಗಿದೆ. ಇವುಗಳನ್ನು ಪಡೆಯಲು ರೈತರಿಗೆ ಹಣದ ಕೊರತೆಯಿದ್ದು, ಬ್ಯಾಂಕುಗಳು ಬೇಸಾಯಕ್ಕೆ ಸಂಬಂಧಿಸಿದ ಸಾಲವನ್ನು ಒದಗಿಸಲು ಹಿಂದೆ ಮುಂದೆ ನೋಡುತ್ತಿವೆ. ಹೆಚ್ಚು ಇಳುವರಿ ಕೊಡುವ ಹೈಬ್ರಿಡ್ ಬೀಜಗಳ ಹೆಚ್ಚಿನ ಬಳಕೆಯಿಂದ ಉತ್ಪಾದನೆ ಹೆಚ್ಚೇನೊ ಆಗಿದೆ ಆದರೆ ಬೆಳೆಯುವ ಭೂಮಿಯ ವಿಸ್ತೀರ್ಣ ಕಡಿಮೆಯಾಗಿದೆ. ಇದರಿಂದ ರೈತರು ಬೆಳೆದ ಬೆಳೆಗಳಿಗೆ ಬೆಲೆ ಕುಸಿತ ಉಂಟಾಗಿ, ಸಾಲ ತೀರಿಸಲಾಗದೇ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ.[5] ಅಲ್ಲದೇ ಹಿಂದೆ ಗ್ರಾಮೀಣ ಜೀವನವು ಸರಳವಾಗಿತ್ತು. ಕುಟಂಬಕ್ಕೆ ಬೇಕಾದ ಪದಾರ್ಥಗಳನ್ನು ಸ್ಥಳೀಯವಾಗಿ ಬೇಸಾಯವು ಪೂರೈಸುತ್ತಿತ್ತು. ಇತರರಿಂದ ಪಡೆದ ಸಹಾಯವನ್ನು ಸುಗ್ಗಿಯ ಸಂದರ್ಭದಲ್ಲಿ ದವಸಧಾನ್ಯಗಳನ್ನು ಕೊಟ್ಟು ತೀರಿಸುವ ಪದ್ಧತಿ ಇತ್ತು. ಇಂದು ನೆಲಮಂಗಲದ ಗ್ರಾಮಗಳಲ್ಲಿನ ರೈತರು ನಗರ ಶೈಲಿಗೆ ಮಾರು ಹೋಗಿದ್ದಾರೆ. ಇದಕ್ಕಾಗಿ ರೈತನು ಹೆಚ್ಚಿನ ಹಣವನ್ನು ಪಡೆಯಲು ಆಧುನಿಕ ಬೇಸಾಯವನ್ನು ಕೈಗೊಂಡಿದ್ದಾರೆ. ಜಾಗತೀಕರಣದ ಪ್ರಭಾವದಿಂದಾಗಿ ಕೃಷಿಯಲ್ಲಿ ಪೇಟೆಂಟ್ ವ್ಯವಸ್ಥೆಯು ಬಂದಿದ್ದು, ಕೃಷಿಯ ವಸ್ತುಗಳ ಮಾರಾಟಕ್ಕೆ ಮಾರುಕಟ್ಟೆಯ ಎ.ಪಿ.ಎಂ.ಸಿ. ಕಾಯಿದೆಯು ಜಾರಿಗೊಂಡು ರೈತರನ್ನು ಬಲಿತೆಗೆದುಕೊಳ್ಳುತ್ತಿದೆ. ಜಾಗತೀಕರಣದ ಹಿನ್ನೆಲೆಯಲ್ಲಿ ರೈತರು ಜಾನುವಾರುಗಳನ್ನು ಸಾಕುವುದನ್ನು ನಿಲ್ಲಿಸಿದ್ದಾರೆ. ನಗರ ಸಂಸ್ಕೃತಿಯಲ್ಲಿ ಅವುಗಳ ಪಾಲನೆ ಕಷ್ಟವಾಗಿದ್ದು, ಹಣದ ಸಂಪಾದನೆಗಾಗಿ ರೈತನು ಬಿಡುವಿನ ವೇಳೆಯಲ್ಲಿ ಕೈಗಾರಿಕೆಯಲ್ಲಿ ದುಡಿಯುತ್ತಿದ್ದಾರೆ.

ಕೈಗಾರೀಕರಣದ ಒಂದು ಪರಿಣಾಮಕ್ಕೆ ಜಾಗತೀಕರಣ ರೆಕ್ಕೆ ಪುಕ್ಕಗಳನ್ನು ನೀಡಿದೆ. ನೆಲಮಂಗಲದಲ್ಲಿ ಸಣ್ಣ ಕೈಗಾರಿಕೆಗಳು ನಾಶವಾಗಿ ಬೃಹತ್ ಮತ್ತು ವಿದೇಶಿ ಕೈಗಾರಿಕೆಗಳು ಪ್ರಾರಂಭವಾಗಿವೆ. ಈ ಕೈಗಾರಿಕೆಯಲ್ಲಿ ಕೆಲಸ ನಿರ್ವಹಿಸುವ ಕಾರ್ಮಿಕರ ಮೇಲೂ ಪ್ರಭಾವ ಬೀರಿದೆ. ಬಂಡವಾಳ ಹೂಡಿಕೆ, ಉತ್ಪಾದನೆ ಬಳಕೆ, ಅನುಭೋಗ ಇವೆಲ್ಲ ಸ್ವಾತಂತ್ರ್ಯ ಗಳಿಸಿವೆ. ನೆಲಮಂಗಲ ತಾಲ್ಲೂಕಿನಲ್ಲಿ ಸ್ಥಾಪನೆಯಾಗಿರುವ ವಿದೇಶಿ ಕಂಪನಿಗಳಲ್ಲಿ ಕಾರ್ಮಿಕರನ್ನು ವಿವಿಧ ವರ್ಗಗಳಾಗಿ ವಿಂಗಡಿಸಲಾಗಿದೆ. ಅವುಗಳಲ್ಲಿ ಬಿಳಿಕಾಲರ್ ಮತ್ತು ನೀಲಿಕಾಲರ್ ಕಾರ್ಮಿಕರೆಂದು ಗುರುತಿಸಲಾಗಿದೆ. ಕೈಗಾರಿಕೆಗಳ ಎಲ್ಲಾ ಸೌಲಭ್ಯಗಳು ವಿದೇಶಿ ಕೆಲಸಗಾರರಿಗೆ ಲಭಿಸುತ್ತಿವೆ. ಅಲ್ಲದೇ ಇಲ್ಲಿನ ವಿದೇಶಿ ಕೈಗಾರಿಕೆಗಳು ಕಂಟ್ರಾಕ್ಟ್ ಪದ್ಧತಿಯಲ್ಲಿ ಕೆಲಸ ಮಾಡಲು ನೆಲಮಂಗಲದ ಕಾರ್ಮಿಕರನ್ನು ಬಳಸಿಕೊಳ್ಳುತ್ತಿದ್ದು, ಇವರನ್ನು ದಿನಗೂಲಿಯ ಆಧಾರದ ಮೇಲೆ ನೇಮಿಸಿಕೊಳ್ಳಲಾಗುತ್ತಿದೆ. ಇದರಿಂದ ಕಾರ್ಮಿಕರ ಸಾಂಘಿಕ ಶಕ್ತಿಯ ಹರಣವಾಗುತ್ತದೆ. ಅಲ್ಲದೇ ನಿರುದ್ಯೋಗವು ಹೆಚ್ಚಾಗುತ್ತಿದೆ.

ಜಾಗತೀಕರಣದ ಹಿನ್ನೆಲೆಯಲ್ಲಿ ನೆಲಮಂಗಲವನ್ನು ಗಮನಿಸಿದರೆ ಭೂಮಿಯನ್ನು 'ತಾಯಿ' ಎಂದು ನಂಬಿ ಗೌರವಿಸುತ್ತಿದ್ದ ಗ್ರಾಮಗಳ ಜನತೆ ಆ ಭೂಮಿಯನ್ನು ಹಿಂದು-ಮುಂದು ನೋಡದೇ ಜಾಗತಿಕ ಬಹುರಾಷ್ಟ್ರೀಯ

ಕಂಪನಿಗಳಿಗೆ ಮಾರಾಟ ಮಾಡುತ್ತಿದ್ದಾರೆ. ಹಳ್ಳಿಗಳಲ್ಲಿ ಹಬ್ಬ, ಜಾತ್ರೆಗಳು, ಈ ಸಂದರ್ಭದಲ್ಲಿ ನಡೆಯುತ್ತಿದ್ದ ಹಾಡು, ಕುಣಿತ, ಉತ್ಸವ ಇವೆಲ್ಲವೂ ಇಂದು ಜಾಗತೀಕರಣದ ಕರಿನೆರಳಲ್ಲಿ ಕಣ್ಮರೆಯಾಗುತ್ತಿವೆ. ನೆಲಮಂಗಲದಲ್ಲಿ ಕೈಗಾರಿಕೆಗಳ ಹೆಚ್ಚಿನ ಸ್ಥಾಪನೆಗಾಗಿ ಕೃಷಿ ಭೂಮಿ ಒತ್ತುವರಿಯಾಗುತ್ತಿದೆ. ಇದರಿಂದ ನೆಲಮಂಗಲದ ವ್ಯಾಪ್ತಿಯಲ್ಲಿ ಬರುವ ಅರಣ್ಯ, ಜಲ, ವನ್ಯಸಂಪತ್ತು ಸರ್ವನಾಶವಾಗುತ್ತಿದೆ. ನೆಲಮಂಗಲದಲ್ಲಿ ಮೊದಲು ಕೆರೆಗಳ ಸಂಖ್ಯೆಯೂ ಹೆಚ್ಚಾಗಿದ್ದವು. ಜಾಗತೀಕರಣದ ಪ್ರಭಾವದಿಂದಾಗಿ ರಸ್ತೆಗಳ ವಿಸ್ತರಣೆ, ವಾಸಗೃಹಗಳ ನಿರ್ಮಾಣಕ್ಕಾಗಿ ಕೆರೆಗಳು ನಾಶವಾಗಿವೆ. ಬಿಲ್ಲಿನಕೋಟೆ, ಹನುಮಂತಪುರ, ಕುಲುವನಹಳ್ಳಿ ಮತ್ತು ಬೇಗೂರು ಕೆರೆಗಳೆಲ್ಲ ಈಗ ಹೆಸರಿಗಷ್ಟೇ ಉಳಿದಿವೆ. ಮೊದಲು ರಸ್ತೆಗಳ ಪಕ್ಕದಲ್ಲಿ ಸಾಲು ಮರಗಳಿದ್ದವು. ಹೆಚ್ಚಿನ ರಸ್ತೆ ಅಗಲೀಕರಣವಾಗಿ ಜೋಡಿ ರಸ್ತೆಯ ನಿರ್ಮಾಣದಿಂದಾಗಿ ಲಕ್ಷಾಂತರ ಮರಗಳು ನಾಶವಾಗಿವೆ. ಜಾಗತೀಕರಣವು ನೆಲಮಂಗಲದ ಸಾಂಸ್ಕೃತಿಕ ಕ್ಷೇತ್ರದ ಮಹತ್ವವನ್ನು ಗೌಣಗೊಳಿಸಿದೆ. ಜಾಗತೀಕರಣದ ಹಿನ್ನೆಲೆಯಲ್ಲಿ ಹಳೆಯ ವಾಸ್ತುಶಿಲ್ಪಗಳು ಮರೆಯಾಗಿ ಹೊಸ ಕಲ್ಪನೆಯ ಹೊಸ ಮಹಲುಗಳು ಕಾಣುತ್ತಿವೆ. ಜಾಗತೀಕರಣದಿಂದಾಗಿ ಇಲ್ಲಿನ ಸಂಸ್ಕೃತಿ ಪರಂಪರೆ, ಇತಿಹಾಸದ ದ್ಯೋತಕಗಳಾದ ಸ್ಮಾರಕಗಳು, ದೇವಾಲಯಗಳು ನಾಶವಾಗುತ್ತಿವೆ. ಬೆಂಗಳೂರಿಗೆ ಸಮೀಪವೇ ಇರುವ ನೆಲಮಂಗಲದ ಶಿವಗಂಗೆಯು ತೀರ್ಥಕ್ಷೇತ್ರವಷ್ಟೇ ಅಲ್ಲದೇ ಐತಿಹಾಸಿಕ ಸ್ಥಳವೂ ಆಗಿದೆ. ಇಲ್ಲಿ ಐತಿಹಾಸಿಕ ಸ್ವರೂಪಕ್ಕೆ ಧಕ್ಕೆ ತರುವಂತಹ ಕಟ್ಟಡಗಳನ್ನು ನಿರ್ಮಾಣ ಮಾಡಲಾಗುತ್ತಿದೆ. ವಿಗ್ರಹಗಳು/ಮೂರ್ತಿಗಳ ಸೌಂದರ್ಯವನ್ನು ಹಾಳು ಮಾಡುವಂತಹ ಢಾಳಾದ ಬಣ್ಣವನ್ನು ಬಳಿಯುತ್ತಿದ್ದಾರೆ. ಗಂಗರ ರಾಜಧಾನಿಯಾದ ಮಣ್ಣೆ, ಹೊಯ್ಸಳರ ದೊರೆ ವಿಷ್ಣುವರ್ಧನನ ಪಟ್ಟಮಹಿಷಿ ಶಾಂತಲೆ ಸಲ್ಲೇಖನ ವ್ರತದ ಮೂಲಕ ಸದ್ಗತಿಯನ್ನು ಪಡೆದ ಶಿವಗಂಗೆ, ಇಡೀ ಕರ್ನಾಟಕದಲ್ಲೇ ಭೂಕಂಪದ ಉಲ್ಲೇಖವಿರುವ ಬಿಲ್ಲಿನಕೋಟೆ, ಮೈಸೂರು ಸಂಸ್ಥಾನದ ಗಡಿಕೋಟೆಯಾಗಿದ್ದ ನಿಜಗಲ್ಲು - ಇವುಗಳು ನೆಲಮಂಗಲ ತಾಲ್ಲೂಕಿನ ಇತಿಹಾಸ ಮತ್ತು ಸಂಸ್ಕೃತಿಯ ನೆನಪಿಗೆ ಉಳಿದಿವೆ. ಆದರೆ ಜಾಗತೀಕರಣದ ಒತ್ತಡದಿಂದ ಅವು ಕಣ್ಮರೆಯಾಗುತ್ತಿವೆ. ನಗರಾಭಿವೃದ್ಧಿಯ ಯೋಜನೆಯಡಿಯಲ್ಲಿ ಈ ಸ್ಮಾರಕಗಳು ನಾಶವಾಗುವ ಸಂಭವವುಂಟು.

ಜಾಗತೀಕರಣದ ಹಿನ್ನೆಲೆಯಲ್ಲಿ ಶಿಕ್ಷಣ ಕ್ಷೇತ್ರವು ಖಾಸಗೀಕರಣವಾಗುತ್ತಿದೆ. ಶಿಕ್ಷಣವನ್ನು ಲಾಭದಾಯಕ ಉದ್ಯಮವನ್ನಾಗಿ ಪರಿವರ್ತಿಸಲಾಗಿದೆ. ಸಾಮಾನ್ಯ ಶಿಕ್ಷಣಕ್ಕಿಂತ ವೃತ್ತಿ ಶಿಕ್ಷಣಕ್ಕೆ ಪ್ರಾಮುಖ್ಯತೆ ದೊರಕಿದೆ. ಶಿಕ್ಷಣ ಕ್ಷೇತ್ರದಲ್ಲಾಗುವ ಪಲ್ಲಟಗಳ ಪ್ರಭಾವ ಸಾಹಿತ್ಯದ ಕ್ಷೇತ್ರದ ಮೇಲೆ ಬೀರಿದೆ. ಸಾಹಿತ್ಯ ಸೃಜನಶೀಲತೆಗಿಂತ ಯಾಂತ್ರಿಕತೆಗೆ ಗಮನ ಕೊಡುತ್ತಿದೆ. ಲಾಭವೊಂದೇ ಜಾಗತೀಕರಣದ ಗುರಿಯಾಗಿದೆ.

ಜಾಗತೀಕರಣವು ಮಾಹಿತಿ ತಂತ್ರಜ್ಞಾನದ ಮುಂದುವರಿಕೆಯಾಗಿದೆ. ಒಂದೆಡೆ ಮಾಹಿತಿ ತಂತ್ರಜ್ಞಾನದಿಂದ ಮುನ್ನೆಡೆಯುತ್ತಿರುವ ಜಾಗತೀಕರಣ ನಮ್ಮ ಸಂಸ್ಕೃತಿ ಸಮಾಜಕ್ಕೆ ಅಘಾತಾಕಾರಿ ಸಮಸ್ಯೆಗಳನ್ನೊಡ್ಡಿರುವಾಗಲೇ ತಂತ್ರಜ್ಞಾನ ನಮ್ಮ ಯುವ ಜನತೆಯಲ್ಲಿ, ಮಕ್ಕಳಲ್ಲಿ ವಿಶ್ವಾಸ, ಹೆಮ್ಮೆ ಛಲವನ್ನು ಮೂಡಿಸಿ ಅಭಿವೃದ್ಧಿಯ ಪಥದೆಡೆಗೆ ಸಾಗುವಂತೆ ಮಾಡಿದೆ. ಪ್ರತಿಯೊಂದು ಕ್ಷೇತ್ರದಲ್ಲೂ ಪೈಪೋಟಿ ಪ್ರಾರಂಭವಾಗಿದೆ. ಜಾಗತೀಕರಣದ ಪ್ರಕ್ರಿಯೆ ಹರಡಲು ಕಂಪ್ಯೂಟರ್ ಒಂದು ಕಾರಣವಾಗಿದೆ. ಪ್ರತಿಯೊಂದು ಅಭಿವೃದ್ಧಿಯ ಕೆಲಸಕ್ಕೆ ಕಂಪ್ಯೂಟರ್ ಬಳಕೆಯಾಗುತ್ತಿದೆ. ಮೊದಲು ಆಧುನಿಕ ಶಿಕ್ಷಣ ಪಡೆದ ಉನ್ನತ ವರ್ಗದವರಿಗೆ ಇದರ ಉಪಯೋಗ ದೊರಕುತ್ತಿತ್ತು. ಆದರೆ ಇತ್ತೀಚಿಗೆ ಸರ್ಕಾರ ಕಂಪ್ಯೂಟರ್‌ನಲ್ಲಿ ಕನ್ನಡ ತಂತ್ರಾಂಶವನ್ನು ಬಳಸಿದ್ದರಿಂದ ಸಾಮಾನ್ಯ ಜನರಿಗೆ ಇದರ ಉಪಯೋಗ ದೊರಕುತ್ತಿದೆ. ಕೃಷಿ, ಕೈಗಾರಿಕೆ, ವ್ಯಾಪಾರ, ವಾಣಿಜ್ಯ, ಹೀಗೆ ಪ್ರತಿಯೊಂದು ಕ್ಷೇತ್ರವು ಇದರ ಲಾಭ ಪಡೆಯುವಂತಾಗಿ ಜನರ ಶ್ರಮವು ಕಡಿಮೆಯಾಗುತ್ತಿದೆ. ನೆಲಮಂಗಲದಲ್ಲಿ ಇಂದು ಅನೇಕ

ಕಂಪ್ಯೂಟರ್ ಕೇಂದ್ರಗಳು ಸ್ಥಾಪನೆಯಾಗಿವೆ. ಇವುಗಳ ಮೂಲಕ ನೆಲಮಂಗಲದ ಎಲ್ಲಾ ಕ್ಷೇತ್ರಗಳ ಅಭಿವೃದ್ಧಿಗೆ ಪೂರಕ ಸಹಾಯ ಪಡೆದುಕೊಳ್ಳಬಹುದಾಗಿದೆ.

ಇಡೀ ಜಗತ್ತನ್ನು ಎಲೆಕ್ಟ್ರಾನಿಕ್ ಸಂಪರ್ಕ ಸಾಧನಗಳಿಂದ ಒಂದು ಸೂರಿನಡಿ ತಂದಿರುವುದು ಜಾಗತೀಕರಣದ ಮಹತ್ಸಾಧನೆಗಳಲ್ಲಿ ಒಂದಾಗಿದೆ. ಟೆಲಿಫೋನ್, ಟೆಲಿವಿಷನ್, ಇಂಟರ್‌ನೆಟ್, ಮೊಬೈಲ್ ಇತ್ಯಾದಿ ಹೈಟೆಕ್ ಸಾಧನಗಳು ನೆಲಮಂಗಲಕ್ಕೆ ಎಲ್ಲಾ ಕಡೆಗಳಿಂದ ಸಂಪರ್ಕ ಏರ್ಪಡಿಸಿವೆ. ಆದರೆ ಜನರ ಜೀವನ ಯಾಂತ್ರೀಕರಣಗೊಂಡಿದೆ. ಟೆಲಿವಿಷನ್‌ನಲ್ಲಿ ನೂರಾರು ಚಾನಲ್‌ಗಳು ಬಂದಿದ್ದು ಪಾಶ್ಚಿಮಾತ್ಯ ಸಂಸ್ಕೃತಿಗೆ ಒಳಗಾಗಿ ನಮ್ಮ ಸಾಂಸ್ಕೃತಿಕ ಕಾರ್ಯಕ್ರಮಗಳಾದ ಜಾನಪದ, ನಾಟಕ, ಸಂಗೀತ, ನೃತ್ಯಗಳ ಮೇಲಿನ ಒಲವು ಕಡಿಮೆಯಾಗಿದೆ.

ಒಟ್ಟಿನಲ್ಲಿ ಜಾಗತೀಕರಣದ ಪ್ರಭಾವದಿಂದಾಗಿ ನೆಲಮಂಗಲದ ಪ್ರದೇಶಗಳಲ್ಲಿನ ಜನರು ತಮ್ಮ ಭೂಮಿಯನ್ನು ವಿದೇಶಿ ಕಂಪನಿಗಳಿಗೆ ಮಾರಿ ಮೂಲ ನೆಲೆಯನ್ನು ಕಳೆದುಕೊಂಡು ಅತಂತ್ರರಾಗುತ್ತಿದ್ದಾರೆ. ನೆಲಮಂಗಲದ ಸುತ್ತಮುತ್ತ ಕೃಷಿ ಪದ್ಧತಿ ಕುರುಹೂ ಇಲ್ಲದಂತೆ ನಾಶವಾಗುತ್ತಿದೆ. ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆಗಳು ಅಪ್ರಸ್ತುತವಾಗುತ್ತಿವೆ.

### ೬.೪. ಆಧುನಿಕ ಶಿಕ್ಷಣದ ಹಿನ್ನೆಲೆ

ನೆಲಮಂಗಲದ ಇತಿಹಾಸ ಪುಟಗಳನ್ನು ತಿರುವಿ ಹಾಕಿದಾಗ ಅನಾದಿ ಕಾಲದಿಂದಲೂ ಇಲ್ಲಿ ಮಠ, ಮಂದಿರ, ಗುಡಿ, ಗುಡಿಸಲುಗಳಲ್ಲಿ ವಿದ್ಯಾದಾನ ಮಾಡುವ ಪದ್ಧತಿ ಇದ್ದುದು ತಿಳಿದುಬರುತ್ತದೆ. ಆದರೆ ಈ ಎಲ್ಲಾ ಶಿಕ್ಷಣ ಸೌಲಭ್ಯಗಳು ಕೇವಲ ಮೇಲ್ಜಾತಿಯವರಿಗೆ ಮೀಸಲಾಗಿದ್ದು, ಮಹಿಳಾ ಮತ್ತು ಇತರೆ ಹಿಂದುಳಿದ ಕೆಳಜಾತಿಯ ವಿದ್ಯಾರ್ಥಿಗಳು ವಂಚಿತರಾಗುತ್ತಿದ್ದರು. ಒಂದು ಶತಮಾನಕ್ಕಿಂತಲೂ ಹಿಂದೆಯೇ ಇಲ್ಲಿ ಪ್ರಾಥಮಿಕ ಶಾಲೆಗಳು ಸ್ಥಾಪನೆಯಾಗಿದ್ದು, ೧೯೦೦ ರಲ್ಲಿ ಪ್ರತಿ ಹೋಬಳಿಗೆ ಒಂದು ಪ್ರೈಮರಿ ಸ್ಕೂಲ್ ಮತ್ತು ತಾಲ್ಲೂಕಿನಲ್ಲಿ ಒಂದು ಮಿಡ್ಲ್‌ಸ್ಕೂಲ್ ಅನ್ನು ತೆರೆಯಲಾಯಿತು. ಗ್ರಾಮಾಂತರ ಪ್ರದೇಶದ ಮಕ್ಕಳು ವಿದ್ಯಾಭ್ಯಾಸಕ್ಕಾಗಿ ಹೋಬಳಿ ಅಥವಾ ತಾಲ್ಲೂಕುಗಳಿಗೆ ಬರಬೇಕಾಗಿತ್ತು. ಶಿಕ್ಷಣದ ಕಾಯ್ದೆಗಳಿಗೆ ಅನುಗಣವಾಗಿ ಶಾಲೆಗಳು ಪ್ರಾರಂಭವಾಗಿ ಕಾರ್ಯನಿರತವಾದವು. ಮೊದಲು ಇಡೀ ನೆಲಮಂಗಲ ತಾಲ್ಲೂಕಿನಲ್ಲಿದ್ದ ಪ್ರೌಢಶಾಲೆಗಳು ಕೇವಲ ಎರಡು, ಒಂದು ನೆಲಮಂಗಲದಲ್ಲಿದ್ದರೆ, ಮತ್ತೊಂದು ತ್ಯಾಮಗೊಂಡ್ಲುವಿನಲ್ಲಿದ್ದು, ಇವರೆಡೂ ಮುನ್ಸಿಪಾಲ್ ಹೈಸ್ಕೂಲ್‌ಗಳಾಗಿದ್ದವು. ಮೊದಲು ತಾಲ್ಲೂಕಿನ ಎಲ್ಲಾ ಹಳ್ಳಿಗಳಲ್ಲೂ ಪ್ರಾಥಮಿಕ ಶಾಲೆಗಳು ಇರಲಿಲ್ಲ. ವಿದ್ಯಾರ್ಥಿಗಳು ವಿದ್ಯಾಭ್ಯಾಸಕ್ಕಾಗಿ ಪ್ರತಿದಿನ ೩ ರಿಂದ ೮ ಕಿ.ಮೀ. ನಡೆದು ಹೋಗಬೇಕಾಗಿತ್ತು. ನೆಲಮಂಗಲದ ಸಾರ್ವಜನಿಕರಲ್ಲಿ ಅಷ್ಟಾಗಿ ಶೈಕ್ಷಣಿಕ ಪ್ರಜ್ಞೆ ಇರಲಿಲ್ಲ. ಆನಂತರದ ದಿನಗಳಲ್ಲಿ ತಾಲ್ಲೂಕಿನ ಶೈಕ್ಷಣಿಕ ಸಾಧನೆಯನ್ನು ಅವಲೋಕಿಸಿದಾಗ ಹೆಚ್ಚಿನ ಸಾಕ್ಷರತೆಯು ಕಂಡುಬಂದಿದೆ. ಪ್ರಸ್ತುತ ನೆಲಮಂಗಲ ತಾಲ್ಲೂಕಿನಲ್ಲಿ ಒಟ್ಟು ೨೦೯ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗಳಿವೆ. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳು ೮೫, ಅನುದಾನ ರಹಿತ ಖಾಸಗೀ ಪ್ರಾಥಮಿಕ ಶಾಲೆಗಳಲ್ಲಿ ಕಿರಿಯ ಪ್ರಾಥಮಿಕ ಶಾಲೆಗಳು ೧೭, ಹಿರಿಯ ಪ್ರಾಥಮಿಕ ಶಾಲೆಗಳು ೧೬ ಇರುತ್ತವೆ. ಉರ್ದು ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗಳು ೧೦, ಉರ್ದು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳು ೫೫, ತಾಲ್ಲೂಕಿನಲ್ಲಿರುವ ಖಾಸಗಿ ಕಿರಿಯ ಹಾಗೂ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಒಟ್ಟು ೫,೦೨೭ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. ಅದರಂತೆ ಸುಮಾರು ೩೦,೮೬೩ ವಿದ್ಯಾರ್ಥಿಗಳು ಸರ್ಕಾರಿ ಶಾಲೆಗಳಲ್ಲಿ

ಅಭ್ಯಾಸ ಮಾಡುತ್ತಿದ್ದಾರೆ. ಸರ್ಕಾರಿ ಪ್ರೌಢಶಾಲೆಗಳು ೧೧, ಅನುದಾನಿತ ಪ್ರೌಢಶಾಲೆಗಳು ೧೩, ಅನುದಾನ ರಹಿತ ಶಾಲೆಗಳು ೧೭ ಇರುತ್ತವೆ. ಹಾಗಾಗಿ ತಾಲ್ಲೂಕಿನ ಎಲ್ಲಾ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳಲ್ಲಿ ಒಟ್ಟು ೩೩,೫೪೮ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. ಕಾಲೇಜು ಹಂತದ ಶಿಕ್ಷಣಕ್ಕೆ ಸಂಬಂಧಿಸಿದಂತೆ ೨ ಸರ್ಕಾರಿ, ೬ ಖಾಸಗೀ ಪದವಿಪೂರ್ವ ಕಾಲೇಜುಗಳಿವೆ. ೩ ಪ್ರಥಮದರ್ಜೆ ಕಾಲೇಜು ಇವೆ. ಇವಲ್ಲದೆ ವೃತ್ತಿ ತರಬೇತಿ ಕೇಂದ್ರಗಳು, ತಾಂತ್ರಿಕ ತರಬೇತಿ ಕೇಂದ್ರಗಳೂ ಇವೆ.[೪] ಬೆಂಗಳೂರು ನಗರ, ತುಮಕೂರು, ಪಟ್ಟಣಗಳು ಹತ್ತಿರವಾಗಿರುವ ಈ ತಾಲ್ಲೂಕಿನ ವಿದ್ಯಾರ್ಥಿಗಳ ಆಶೋತ್ತರ ಈಡೇರಿಸಲು ಸೌಲಭ್ಯಗಳು ಹೆಚ್ಚಾಗಿವೆ.

ಅತೀ ಹೆಚ್ಚಿನ ಕನ್ನಡ ಮಾಧ್ಯಮ ಶಾಲೆಗಳೇ ಇರುವುದರಿಂದ ಉನ್ನತ ವಿದ್ಯಾಭ್ಯಾಸಕ್ಕೆ ತೆರಳುತ್ತಿರುವ ಗರಿಷ್ಠರಲ್ಲಿ ಕನ್ನಡ ಮಾಧ್ಯಮದಲ್ಲಿಯೇ ವಿದ್ಯಾಭ್ಯಾಸ ಮಾಡಿರುವವರಾಗಿರುತ್ತಾರೆ. ಇತ್ತೀಚಿನ ದಿನಗಳಲ್ಲಿ ಆಂಗ್ಲ ಮಾಧ್ಯಮ ಶಾಲೆಗಳು ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿವೆ. ICSE, CBSE ಪಠ್ಯಕ್ರಮ ಹೊಂದಿರುವ ಶಾಲೆಯೊಂದು ಬೆಂಗಳೂರು ನಗರದಿಂದ ಹೊರಕ್ಕೆ ಸಿಡಿದು ಬಂದು ತನ್ನ ನೆಲೆಗಾಗಿ ನೆಲಮಂಗಲದಲ್ಲಿ ಐಷಾರಾಮಿ ಕಟ್ಟಡ, ವಾಹನ ಸೌಲಭ್ಯ ಹೊಂದಿ ಪ್ರಚಾರದಲ್ಲಿ ತೊಡಗಿದೆ.

ನೆಲಮಂಗಲದಲ್ಲಿ ವೃತ್ತಿ ಮಾಧ್ಯಮ ಶಿಕ್ಷಣಕ್ಕೆ ಒತ್ತು ಕೊಡುವ ದಿಸೆಯಲ್ಲಿ ನರ್ಸಿಂಗ್ ಕಾಲೇಜುಗಳು ಹೆಚ್ಚಾಗಿ ತಾಲ್ಲೂಕಿನಲ್ಲಿ ಕಂಡುಬರುತ್ತಿದ್ದರೂ ವಿದ್ಯಾರ್ಥಿಗಳೆಲ್ಲರೂ ಅನ್ಯ ರಾಜ್ಯದವರೇ ಆಗಿದ್ದಾರೆ. ಈ ನೆಲಮಂಗಲದ ವಿದ್ಯಾರ್ಥಿಗಳಿಗೆ ಅನುಕೂಲವಾಗಿಲ್ಲ. ಏಕೆಂದರೆ ಹೆಚ್ಚಿನ ಡೊನೇಷನ್ ತೆತ್ತಬೇಕಾಗಿದೆ. ನೆಲಮಂಗಲದಲ್ಲಿನ ಶಿಕ್ಷಣ ಕ್ಷೇತ್ರವು ಇಂದಿನ ದಿನಗಳಲ್ಲಿ ವ್ಯಾಪಾರೀಕರಣಗೊಳ್ಳತೊಡಗಿದೆ. ಖಾಸಗೀ ಒಡೆತನಕ್ಕೆ ಶಿಕ್ಷಣವು ಒಳಗಾಗಿದ್ದು, ಹೆಚ್ಚಿನ ಲಾಭಕ್ಕಾಗಿ ಮುನ್ನೆಡೆದಿದೆ. ಮೊದಲು ಪದವಿ ಪೂರ್ವ ಕಾಲೇಜ್‌ವೊಂದು ಗ್ರಾಮೀಣ ಪ್ರದೇಶದಲ್ಲಿ ಸ್ಥಾಪನೆಗೊಂಡಿತ್ತು. ಆನಂತರ ಹೆಚ್ಚಿನ ಲಾಭಕ್ಕಾಗಿ ನೆಲಮಂಗಲದ ಕೇಂದ್ರ ಸ್ಥಾನಕ್ಕೆ ಸ್ಥಳಾಂತರಗೊಂಡಿದೆ. ಇಲ್ಲಿ ಹೇಗೆ ಶಿಕ್ಷಣ ವ್ಯಾಪಾರದ ಮಾಧ್ಯಮವಾಗಿ ಮಾನವೀಯ ಮೌಲ್ಯಕ್ಕಿಂತ ಲಾಭವೊಂದೇ ಗುರಿಯಾಗಿ ಹೊಂದಿದೆ ಎಂಬುದನ್ನು ತಿಳಿಯಬಹುದು. ಶಿಕ್ಷಣದಲ್ಲಿನ ಖಾಸಗೀ ಒಡೆತನವು ಆರ್ಥಿಕ ಹಿತಾಸಕ್ತಿಯನ್ನು ಆಧರಿಸಿದೆ. ಇದರಿಂದ ಶಿಕ್ಷಣ ಶುಲ್ಕ ಏರುತ್ತಿದೆ. ಆದರೆ ಬಹುತೇಕ ಹಿಂದುಳಿದ ಜನರು ಖಾಸಗೀ ಶಾಲೆಗಳು ಬಯಸುವ ಶುಲ್ಕ ನೀಡಲು ವಿಫಲರಾಗಿದ್ದಾರೆ. ಮೇಲ್ಜಾತಿಯವರು ಮಾತ್ರ ಆಧುನಿಕ ಶಿಕ್ಷಣವನ್ನು ಪಡೆದುಕೊಳ್ಳುತ್ತಿದ್ದಾರೆ. ಮತ್ತೊಂದು ಕಡೆ ಗ್ರಾಮಾಂತರ ಬಡಮಕ್ಕಳಿಗೆ ಆಧುನಿಕ ಶಿಕ್ಷಣ ಗಗನಕುಸುಮವಾಗಿ ಪರಿಣಮಿಸಿದೆ.

ವೃತ್ತಿಪರ ಶಿಕ್ಷಣವು ವಿದ್ಯಾರ್ಥಿಯನ್ನು ಉದ್ಯೋಗಕ್ಕೆ ಅನುವುಮಾಡಲು ಹೆಚ್ಚಿನ ಸಾಮರ್ಥ್ಯ ನೀಡುವ ಗುರಿ ಹೊಂದಿದೆ. ಅದರಂತೆ ನೆಲಮಂಗಲದಲ್ಲಿ ವೃತ್ತಿಪರ ಶಿಕ್ಷಣಕ್ಕಾಗಿ ನರ್ಸಿಂಗ್ ಕಾಲೇಜುಗಳು, ಕೈಗಾರಿಕಾ ತರಬೇತಿ ಕೇಂದ್ರಗಳು, ತಾಂತ್ರಿಕ ತರಬೇತಿ ಕೇಂದ್ರಗಳು, ಕಂಪ್ಯೂಟರ್ ತರಬೇತಿ ಕೇಂದ್ರಗಳು, ಡಿ.ಎಡ್. ಮತ್ತು ಬಿ.ಎಡ್. ಕಾಲೇಜುಗಳು ಸ್ಥಾಪನೆಗೊಂಡಿವೆ. ವಿದ್ಯಾರ್ಥಿಗಳು ಕನಿಷ್ಠಮಟ್ಟದ ಕಡ್ಡಾಯ ಕಲಿಕೆ ಮುಗಿಸಿದ ನಂತರ ಹಲವಾರು ಕಾರಣಗಳಿಂದ ಈ ಕೋರ್ಸ್‌ಗಳನ್ನು ಆರಿಸಿಕೊಳ್ಳಬಹುದು.

ಜೀವನದ ಎಲ್ಲಾ ಕ್ಷೇತ್ರಗಳಲ್ಲೂ ಕಂಪ್ಯೂಟರ್ ಪ್ರಮುಖ ಸ್ಥಾನ ಪಡೆದಿದೆ. ನೆಲಮಂಗಲದಲ್ಲಿ ಕಂಪ್ಯೂಟರ್ ಕಲಿಕೆಯಾಗಿ ಅನೇಕ ಕಂಪ್ಯೂಟರ್ ತರಬೇತಿ ಕೇಂದ್ರಗಳಿವೆ. ಇವುಗಳ ಮೂಲಕ ತರಬೇತಿ ಪಡೆದ ತರಬೇತಿದಾರರು ಕೈಗಾರಿಕೆಗಳಲ್ಲಿ ಒಳ್ಳೆಯ ಉದ್ಯೋಗಗಳನ್ನು ಪಡೆದಿದ್ದಾರೆ. ಆದರೆ ಈ ಕೇಂದ್ರಗಳು ವಿಧಿಸುವ ಶುಲ್ಕ ಹೆಚ್ಚಾಗಿರುವುದರಿಂದ ಗ್ರಾಮೀಣ ಜನರು ಕಂಪ್ಯೂಟರ್ ತರಬೇತಿಯನ್ನು ಪಡೆಯಲು ಸಾಧ್ಯವಾಗುತ್ತಿಲ್ಲ.

ನೆಲಮಂಗಲದ ಜನರು ಆಧುನಿಕ ಶಿಕ್ಷಣವನ್ನು ಪಡೆಯಲು ಮಾಹಿತಿ ತಂತ್ರಜ್ಞಾನದ ರಾಜಧಾನಿಯಾದ ಬೆಂಗಳೂರಿಗೆ ಹೋಗುತ್ತಿದ್ದು, ಅಲ್ಲಿಯೇ ನೆಲೆಗೊಳ್ಳುತ್ತಿದ್ದಾರೆ. ಅಲ್ಲದೇ ವ್ಯಕ್ತಿಯ ಬುದ್ಧಿಶಕ್ತಿಯು ಇಂದು ಮಾರಾಟದ ವಸ್ತುವಾಗಿ ಪರಿಣಮಿಸಿದೆ. ತಮ್ಮ ಪ್ರತಿಭೆಗೆ ತಕ್ಕ ಬೆಲೆ ತಾನು ಹುಟ್ಟಿ ಬೆಳೆದ ಪ್ರದೇಶಗಳಲ್ಲಿ ಸಿಗಲಿಲ್ಲವೆಂದು ನೆಲಮಂಗಲದ ಬುದ್ಧಿವಂತ ಪ್ರತಿಭೆಗಳು ಬೆಂಗಳೂರು ಇತರ ಕಡೆಗಳಿಗೆ ವಲಸೆ ಹೋಗುತ್ತಿದ್ದಾರೆ. ಒಟ್ಟಿನಲ್ಲಿ ಆಧುನಿಕ ಶಿಕ್ಷಣವು ಪ್ರತಿಭಾ ಪಲಾಯನಕ್ಕೆ ದಾರಿ ಮಾಡಿಕೊಟ್ಟಂತಾಗಿದೆ.

ಅತ್ಯಂತ ವೇಗವಾಗಿ ಅಭಿವೃದ್ಧಿಯಾಗುತ್ತಿರುವ ಬೆಂಗಳೂರಿನ ಮೇಲೆ ಆಧುನಿಕತೆಯ ಪ್ರಭಾವ ಹೆಚ್ಚಾಗಿದೆ. ಅದರಂತೆ ಇದರ ಪಕ್ಕದಲ್ಲೇ ಇರುವ ನೆಲಮಂಗಲವು ಕೂಡ ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿದೆ. ಆಧುನಿಕತೆಯ ಪ್ರಭಾವದಿಂದಾಗಿ ಅನುಕೂಲತೆಗಳಿಗಿಂತ ಅನಾನುಕೂಲಗಳೇ ಹೆಚ್ಚಾಗಿವೆ. ನೆಲಮಂಗಲವು ಆಧುನಿಕತೆಯ ಪ್ರಕ್ರಿಯೆಗಳಾದ ಕೈಗಾರೀಕರಣ, ನಗರೀಕರಣ, ಜಾಗತೀಕರಣ, ಆಧುನಿಕ ಶಿಕ್ಷಣ ಇವೇ ಮೊದಲಾದವುಗಳಿಂದ ಅನುಕೂಲ ಪಡೆದರೂ ಹೆಚ್ಚಿನ ಅನಾನುಕೂಲಗಳನ್ನು ಅನುಭವಿಸಿದೆ. ಕೈಗಾರೀಕರಣದ ಹಿನ್ನೆಲೆಯಲ್ಲಿ ನೆಲಮಂಗಲದಲ್ಲಿ ಅನೇಕ ಕೈಗಾರಿಕೆಗಳು ಸ್ಥಾಪನೆಯಾಗಿ ಹೆಚ್ಚಿನ ಉದ್ಯೋಗವಕಾಶಗಳನ್ನು ಒದಗಿಸಿದ್ದರೂ, ಸ್ಥಳೀಯರಿಗೆ ಉದ್ಯೋಗವಕಾಶಗಳು ದೊರೆತಿಲ್ಲ. ಅಲ್ಲದೇ ಕೈಗಾರಿಕೆಗಳ ಸ್ಥಾಪನೆಗೆ ಕೃಷಿ ಭೂಮಿ ಒತ್ತುವರಿಯಾಗುತ್ತಿದೆ. ಐ.ಟಿ./ಬಿ.ಟಿ ಕಂಪನಿಗಳ ತ್ಯಾಜ್ಯವಸ್ತುಗಳ ವಿಲೇವಾರಿಯ ಕಸದ ತೊಟ್ಟಿಯಾಗಿದೆ. ನಗರೀಕರಣದ ಹಿನ್ನೆಲೆಯಲ್ಲಿ ಜನಸಂಖ್ಯೆಗನುಗುಣವಾಗಿ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗುತ್ತಿದ್ದು ಕಟ್ಟಡ, ರಸ್ತೆ ಅಗಲೀಕರಣ ಇವೇ ಮೊದಲಾದವುಗಳಿಂದ ಅರಣ್ಯ, ಕೃಷಿಭೂಮಿ, ಐತಿಹಾಸಿಕ ಸ್ಮಾರಕಗಳು ನಾಶವಾಗುತ್ತಿವೆ. ಜಾಗತೀಕರಣದ ಹಿನ್ನೆಲೆಯಲ್ಲಿ ಪ್ರತಿಯೊಂದು ಕ್ಷೇತ್ರದಲ್ಲಿ ಆರ್ಥಿಕ ಹಿತಾಸಕ್ತಿಗೆ ಅನುಗಣವಾಗಿ ಲಾಭವೊಂದೇ ಗುರಿಯಾಗಿದೆ. ಆಧುನಿಕ ಶಿಕ್ಷಣ ಹಿನ್ನೆಲೆಯಲ್ಲಿ ಕನ್ನಡ ಭಾಷೆಗಿಂತ ಇಂಗ್ಲಿಷ್ ಭಾಷೆಯಲ್ಲಿ ಶಿಕ್ಷಣವನ್ನು ಪಡೆಯಲಾಗುತ್ತಿದೆ. ಕನ್ನಡ ಭಾಷೆಯ ಉಳಿವಿಗೆ ನಮ್ಮ ಗ್ರಾಮೀಣ ಸಂಸ್ಕೃತಿಯೇ ಮೂಲ ಬೇರಾಗಿದೆ. ಆದರೆ ಇಂಥ ನಗರೀಕರಣದಿಂದಾಗಿ ಕನ್ನಡ ಭಾಷೆ ತನ್ನ ನೆಲೆಯನ್ನು ಕಳೆದುಕೊಳ್ಳುತ್ತಿದೆ. ಇಂದು ನೆಲಮಂಗಲದ ಪ್ರತಿಯೊಬ್ಬ ಕೂಲಿ ಕಾರ್ಮಿಕನೂ ಸಹ ತನ್ನ ಮಕ್ಕಳನ್ನು ಇಂಗ್ಲಿಷ್ ಶಾಲೆಗೆ ಸೇರಿಸುತ್ತಿದ್ದಾನೆ. ಹಾಗೆಯೇ ಇರಬೇಕೆಂದು ಬಯಸುತ್ತಿದ್ದಾರೆ. ಅಲ್ಲದೇ ಜನರ ಜ್ಞಾನದ ಬೆಳವಣಿಗೆ ಸಾಮಾನ್ಯ ಶಿಕ್ಷಣಕ್ಕಿಂತ ಉದ್ಯೋಗ ಚಟುವಟಿಕೆಗಳ ವೃತ್ತಿ ಆಧಾರಿತ ಶಿಕ್ಷಣ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಇಂತಹ ಸ್ಥಿತಿಯಲ್ಲಿ ಇಂದು ನೆಲಮಂಗಲ ತಾಲ್ಲೂಕು ಸಂದಿಗ್ಧ ಸ್ಥಿತಿಗೆ ಸಿಲುಕಿದೆ. ಈ ಸಂಕೋಲೆಯಿಂದ ಹೊರಬರಲಾಗದಿದ್ದರೂ ಇವುಗಳ ಪರಿಹಾರೋಪಾಯಗಳಿಗೆ ಸಾಧ್ಯತೆ ಇದೆ.

**ಅಡಿ ಟಿಪ್ಪಣಿಗಳು**

೧. ಚಂದ್ರಶೇಖರ ಆರ್.ವಿ., ೨೦೦೭, ಅಭಿವೃದ್ಧಿಯ ಕೊಡಲಿಗೆ ಒಕ್ಕಲುತನದ ಕೊರಳು, ಪ್ರಕಾಶಕರು, ಪಿ ಯು ಸಿ ಎಲ್ ಕರ್ನಾಟಕ, ಬೆಂಗಳೂರು, ಪು. ೩೩

೨. ಅರವಿಂದ ಚೊಕ್ಕಾಡಿ, ೨೦೦೩, ಆಧುನೀಕರಣ ಮತ್ತು ಜಾಗತೀಕರಣ, ಅಭಿವೃದ್ಧಿ ಅಧ್ಯಯನ ಸಮಾಜವಿಜ್ಞಾನ ಪತ್ರಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೪೮

೩. ಲಿಂಗಯ್ಯ ಡಿ., ಸಂ., ೨೦೦೫, ಜಾಗತೀಕರಣ - ಬೆಂಗಳೂರು, ಉದಯಭಾನು ಕಲಾಸಂಘ, ಬೆಂಗಳೂರು, ಪು. ೫೬

೪. ಸುವರ್ಣನೆಲ ಸ್ಮರಣ ಸಂಚಿಕೆ, ೨೦೦೭, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ಪು. ೨೪

ಕರ್ನಾಟಕದ ರಾಜಧಾನಿಯಾದ ಬೆಂಗಳೂರು ಜಿಲ್ಲೆಯ ನೆಲಮಂಗಲ ತಾಲ್ಲೂಕು ಪ್ರಾಚೀನ ಕಾಲದಿಂದಲೂ ಪ್ರಾಮುಖ್ಯತೆ ಹೊಂದಿ ನಾಡಿನ ಸಂಸ್ಕೃತಿಗೆ ಮಹತ್ತರ ಕಾಣಿಕೆಯನ್ನು ನೀಡಿರುವ ಸಂಗತಿ ವಿವಿಧ ಚಾರಿತ್ರಿಕ ಮಾಹಿತಿಗಳಿಂದ ತಿಳಿದುಬರುತ್ತದೆ. ಭೌಗೋಳಿಕವಾಗಿ ನೆಲಮಂಗಲ ಪ್ರದೇಶದ ವೈಶಿಷ್ಟ್ಯತೆ ಮತ್ತು ಅದರ ಒರೆಕೋರೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಭೌಗೋಳಿಕ ಪರಿಸರವು ಅಲ್ಲಿನ ಸಂಸ್ಕೃತಿಯನ್ನು ರೂಪಿಸುವಲ್ಲಿ ವಹಿಸಿರುವ ಪಾತ್ರವನ್ನು ನೆಲಮಂಗಲ ತಾಲ್ಲೂಕಿಗೆ ಸಂಬಂಧಿಸಿ ಭೌತಿಕವಾಗಿ ವಿವರಿಸಲಾಗಿದೆ. ಇತಿಹಾಸ ಪೂರ್ವದ ಮಾನವನು ಈ ಪ್ರದೇಶದಲ್ಲಿ ತನ್ನ ಅಲೆಮಾರಿ ಜೀವನವನ್ನು ನಡೆಸುತ್ತಿದ್ದನೆಂಬ ಸಂಗತಿ ಇಲ್ಲಿ ದೊರಕಿರುವ ಪ್ರಾಗೈತಿಹಾಸಿಕ ಸಂಸ್ಕೃತಿಯ ಅವಶೇಷಗಳಿಂದ ತಿಳಿದುಕೊಳ್ಳಬಹುದು. ಬೃಹತ್ ಚರಿತ್ರೆಯಿರುವ ನಾಡಿನಲ್ಲಿ ಒಂದು ನಿರ್ದಿಷ್ಟ ಪ್ರದೇಶದ ಚಾರಿತ್ರಿಕ ಸಂಗತಿಗಳನ್ನು ಕಟ್ಟಿಕೊಳ್ಳುವುದು ಅಗತ್ಯವೆಂಬ ಕಾರಣಕ್ಕೆ ನೆಲಮಂಗಲ ತಾಲ್ಲೂಕಿನ ಚಾರಿತ್ರಿಕ ವಿಷಯಗಳನ್ನು ಒಂದೆಡೆ ಚರ್ಚಿಸಲಾಗಿದೆ.

ಮೊದಲನೇ ಅಧ್ಯಾಯದಲ್ಲಿ ನೆಲಮಂಗಲ ತಾಲ್ಲೂಕು ಸ್ಥಳೀಯ ಇತಿಹಾಸದೊಂದಿಗೆ ಪ್ರಾಮುಖ್ಯತೆ ಹೊಂದಿ ಹೆಮ್ಮರವಾಗಿ ಬೆಳೆಯುತ್ತಿರುವ ಹಿನ್ನೆಲೆಯಲ್ಲಿಯೇ ಆಧುನಿಕತೆಯ ಪ್ರಕ್ರಿಯೆಗಳಾದ ಕೈಗಾರಿಕೀಕರಣ, ನಗರೀಕರಣ, ಜಾಗತೀಕರಣ, ಆಧುನಿಕ ಶಿಕ್ಷಣದಿಂದಾಗಿ ಇಲ್ಲಿನ ಸ್ಥಳೀಯ ಭಾಷೆ ಮತ್ತು ಚಾರಿತ್ರಿಕ ವಿವರಗಳು ಆಚಾರ ವಿಚಾರಗಳು ನಾಶವಾಗುತ್ತಿದ್ದು, ಅವುಗಳನ್ನು ಹೇಗೆ ರಕ್ಷಿಸಿಕೊಳ್ಳಬೇಕೆಂಬುದನ್ನು ವಿವರಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಕರ್ನಾಟಕ ಚರಿತ್ರೆಯಲ್ಲಿ ನೆಲಮಂಗಲ ತಾಲ್ಲೂಕು ಸುಮಾರು ಎರಡು ಸಾವಿರ ವರ್ಷಗಳಷ್ಟು ಹಿಂದಿನ ಚರಿತ್ರೆಯನ್ನು ಹೊಂದಿದ್ದು, ಭೌಗೋಳಿಕವಾಗಿ ಉತ್ತಮ ಸಂಪನ್ಮೂಲಗಳು ಇಲ್ಲಿನ ಜನರ ಸಂಸ್ಕೃತಿಯನ್ನು ರೂಪಿಸಲು ಸಹಾಯಕವಾಗಿವೆ. ಐತಿಹಾಸಿಕ ಸಂಸ್ಕೃತಿಯ ಪರಂಪರೆಯು ಆದರ್ಶಗುಣಗಳ ಸಹಬಾಳ್ವೆಗೆ ಮಾದರಿಯಾಗಿವೆ.

ರಾಜಕೀಯವಾಗಿ, ಧಾರ್ಮಿಕವಾಗಿ ಮತ್ತು ಸಾಂಸ್ಕೃತಿಕವಾಗಿ ವಿವಿಧ ಅರಸುಮನೆತನಗಳಿಂದ ಆಳ್ವಿಕೆಗೆ ಒಳಗಾಗಿ ತನ್ನ ಭವ್ಯವಾದ ಐತಿಹಾಸಿಕ ಶ್ರೀಮಂತಿಕೆಯನ್ನು ಕೊಂಡುಕೊಂಡು ಇಂದಿಗೂ ಸಂಶೋಧಕರ ಉತ್ಖನನ ಹಾಗೂ ಸಂಶೋಧನೆಯ ಅಧ್ಯಯನಕ್ಕೆ ಆಸರೆಯಾಗಿದೆ. ಒಂದು ಪ್ರದೇಶದ ಸಾಂಸ್ಕೃತಿಕ ಕೊಡುಗೆಗೆ ಆಳ್ವಿಕೆ ನಡೆಸಿದ ಅರಸು ಮನೆತನಗಳು ಹಾಗೂ ಸಾಮಾನ್ಯ ಜನರ ಪಾತ್ರ ಮಹತ್ವದ್ದಾಗಿದೆ. ಇಲ್ಲಿ ಮುಖ್ಯವಾಗಿ ಗಂಗರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರಿನ ಒಡೆಯರು ಮುಂತಾದ ಅರಸು ಮನೆತನಗಳು ಆಳ್ವಿಕೆ ನಡೆಸಿ ನೆಲಮಂಗಲ ತಾಲ್ಲೂಕು ಸೇರಿದಂತೆ ಕರ್ನಾಟಕದ ಸಾಂಸ್ಕೃತಿಕ ಇತಿಹಾಸಕ್ಕೆ ತಮ್ಮದೇ ಆದ ಕೊಡುಗೆಗಳನ್ನು ನೀಡಿವೆ. ನೆಲಮಂಗಲದ ಚಾರಿತ್ರಿಕ ಹಿನ್ನೆಲೆಯನ್ನು ತಿಳಿಸುವ ಶಾಸನಗಳು ಅಧಿಕ ಪ್ರಮಾಣದಲ್ಲಿವೆ. ಈ ಶಾಸನಗಳ ಅಧ್ಯಯನದಿಂದ ಇಲ್ಲಿ ಆಳ್ವಿಕೆ ಮಾಡಿದ ಅರಸು ಮನೆತನಗಳ ರಾಜಕೀಯ ವಿವರಗಳು, ದೇವಲಾಯಗಳ ಅಭಿವೃದ್ಧಿಗೆ ದಾನ ಕೊಟ್ಟ ಸಂಗತಿಗಳನ್ನು ತಿಳಿಯುವುದರ ಜೊತೆಗೆ ಕಲೆ ಮತ್ತು ವಾಸ್ತುಶಿಲ್ಪದ ಶ್ರೀಮಂತಿಕೆ, ಇಲ್ಲಿನ ಸಾಹಿತ್ಯಿಕ ಮಹತ್ವಗಳನ್ನು ಗುರುತಿಸಬಹುದಾಗಿದೆ.

ಮೂರನೆಯ ಅಧ್ಯಾಯದಲ್ಲಿ ರಾಜಕೀಯ ಚರಿತ್ರೆಯನ್ನು ನೋಡಿದರೆ ಸ್ವಾತಂತ್ರ್ಯ ಹೋರಾಟದಿಂದ ಹಿಡಿದು ಸರ್ಕಾರದ ಆಡಳಿತದವರೆಗೂ ನೆಲಮಂಗಲ ತಾಲ್ಲೂಕನ್ನು ವಿಶೇಷ ಕೇಂದ್ರವನ್ನಾಗಿ ಮಾರ್ಪಡಿಸಲಾಗಿದೆ. ಸ್ವಾತಂತ್ರ್ಯ ಚಳವಳಿಯ ವಿವರಗಳಲ್ಲಿ ದ್ವಂದ್ವಗಳು ಉಂಟಾದರೂ ಸಮರ್ಥವಾಗಿ ಅವುಗಳನ್ನು ನಿಭಾಯಿಸಲು ಮಾಹಿತಿಗಳನ್ನು ಕ್ರೋಢೀಕರಿಸಲಾಯಿತು. ಸ್ವಾತಂತ್ರ್ಯಾನಂತರದ ಚುನಾವಣೆಗಳನ್ನು ಚರ್ಚಿಸಿ ಆಡಳಿತದ ಸುಧಾರಣೆಗಳನ್ನು ಗಮನಿಸಲಾಯಿತು.

ನಾಲ್ಕನೆಯ ಅಧ್ಯಾಯದ ಧಾರ್ಮಿಕ ಇತಿಹಾಸ ಶೀರ್ಷಿಕೆಯಡಿಯಲ್ಲಿ ನೆಲಮಂಗಲ ತಾಲ್ಲೂಕಿನಲ್ಲಿ ಅನೇಕ ಧರ್ಮಗಳು ನೆಲೆಗೊಂಡು ಸಮಾಜದ ಮೇಲೆ ಪ್ರಭಾವ ಬೀರಿದ ನಿದರ್ಶನಗಳನ್ನು ಚರ್ಚಿಸಲಾಗಿದೆ. ಧರ್ಮವು ಬಹುಸೂಕ್ಷ್ಮವಾದ ವಿಷಯವಾಗಿದ್ದು, ಅಲ್ಲೋಲ-ಕಲ್ಲೋಲವಾಗುವ ಸಾಧ್ಯತೆಗಳೂ ಇರುತ್ತವೆ. ಪ್ರಾಚೀನ ಕಾಲದಿಂದಲೂ ಇಲ್ಲಿ ಅನೇಕ ಧರ್ಮಗಳು ನೆಲೆಗೊಂಡಿವೆ. ತಮ್ಮದೇ ಆದ ತತ್ವ ಮತ್ತು ನಿಯಮಗಳನ್ನು ರೂಢಿಸಿಕೊಂಡು ಅಸ್ತಿತ್ವಕ್ಕೆ ಬಂದ ಬೌದ್ಧ ಜೈನ ವೈಷ್ಣವ ಶೈವ ವೀರಶೈವ ಧರ್ಮಗಳು ಇಲ್ಲಿ ಅಚ್ಚಳಿಯದ ಪ್ರಭಾವವನ್ನು ಬೀರಿವೆ. ಆದರೂ ಕೆಲವು ಧರ್ಮಗಳು ಕಾಲ ಬದಲಾದಂತೆ ನಶಿಸುತ್ತಾ ಹೋಗಿವೆ. ಈ ಪ್ರದೇಶವು ವಿಭಿನ್ನ ಸಂಸ್ಕೃತಿಯನ್ನು ಹೊಂದಿದ್ದು ಹಬ್ಬ, ಉತ್ಸವ, ಜಾತ್ರೆಗಳನ್ನು ಎಲ್ಲಾ ಧರ್ಮೀಯರು ಆಚರಿಸುವ ಪದ್ಧತಿಯನ್ನು ಇಂದಿಗೂ ರೂಢಿಸಿಕೊಂಡಿದ್ದಾರೆ.

ಐದನೆಯ ಅಧ್ಯಾಯದ ಸಾಂಸ್ಕೃತಿಕ ಇತಿಹಾಸದಲ್ಲಿ ಈ ಪ್ರದೇಶದ ಸಾಂಸ್ಕೃತಿಕ ನೋಟದಲ್ಲಿ ವಿಭಿನ್ನ ಸಂಸ್ಕೃತಿಯ ಪರಂಪರೆಯು ನಮ್ಮ ಜೀವನಕ್ಕೆ ಮಾದರಿ ಹಾಗೂ ಇಂದಿನ ಯುವ ಪೀಳಿಗೆಗೆ ಆದರ್ಶ ಗುಣಗಳ ಒಂದು ಪಾಠವಾಗಿ ಉಳಿದಿದೆಯೆಂಬುದನ್ನು ವಿಶ್ಲೇಷಿಸಲಾಗಿದೆ. ಹೀಗೆ ಈ ತಾಲ್ಲೂಕಿನ ವಿವಿಧ ಪ್ರದೇಶಗಳ ಸಂಸ್ಕೃತಿಯನ್ನು ಆತ್ಮಾವಲೋಕನ ಮಾಡಿಕೊಳ್ಳಲಾಗುತ್ತಿದೆ. ತಮ್ಮ ಪ್ರದೇಶದ ಭವ್ಯ ಸಂಸ್ಕೃತಿಯ ಪರಂಪರೆಯನ್ನು ಸಾರುವ ಆಚಾರ ವಿಚಾರಗಳು, ಕಲೆ ಮತ್ತು ವಾಸ್ತುಶಿಲ್ಪದ ದೇವಾಲಯಗಳು, ಸಂಗೀತ, ಸಾಹಿತ್ಯ, ಐತಿಹಾಸಿಕ ಸ್ಥಳಗಳ ಮಹತ್ವ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ ಮಹನೀಯರು ಮುಖ್ಯರೆನಿಸಿದ್ದಾರೆ. ಸಂಸ್ಕೃತಿಯನ್ನು ಪೋಷಿಸುವುದು ಅಥವಾ ಬೆಳೆಸುವುದೆಂದರೆ ಬದುಕನ್ನು ಸಮೃದ್ಧಗೊಳಿಸುವುದೆಂದೇ ಪರಿಗಣಿಸಬೇಕಾದ ಅಗತ್ಯವಿದೆ. ಮಾನವ ಸಂಬಂಧಿತವಾದ ರಾಜಕೀಯ, ಧಾರ್ಮಿಕ ಮತ್ತು ಸಾಂಸ್ಕೃತಿಕ ಸಂಗತಿಗಳು ಅಧ್ಯಯನಕ್ಕೆ ಪೂರಕವಾಗಿ ಅಂತರ್‌ಸಂಬಂಧಗಳನ್ನು ಪಡೆದುಕೊಂಡು ಸುವ್ಯವಸ್ಥೆಯನ್ನು ಹೊಂದಬೇಕಾದ ಅಗತ್ಯವಿದೆ. ಇಲ್ಲಿ ಸ್ಥಳದ ಹೆಸರುಗಳು ಪುನರಾವರ್ತನೆಯಾದರೂ ಅವುಗಳನ್ನು ವಿಭಿನ್ನ ದೃಷ್ಟಿಕೋನದಿಂದ ನೋಡಲಾಗಿದೆ.

ಆಧುನಿಕತೆಯ ಪ್ರಭಾವದಲ್ಲಿ ಉಂಟಾದ ಕೈಗಾರಿಕೀಕರಣದ ಬೆಳವಣಿಗೆಯಿಂದಾಗಿ ಕೈಗಾರಿಕೆಗಳ ಸಂಖ್ಯೆ ಹೆಚ್ಚಾಗುತ್ತಾ ಕೃಷಿ ಭೂಮಿ ಕೈಗಾರಿಕೆಗಳಿಗೆ ಒತ್ತುವರಿಯಾಗಿ ಕೃಷಿ ನಶಿಸುತ್ತಾ ಹೋಗುತ್ತಿದೆ. ನಗರೀಕರಣದ ಒತ್ತಡದಿಂದ ಹೆಚ್ಚಿದ ಜನಸಂಖ್ಯೆಗೆ ಅನುಗುಣವಾಗಿ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಕಟ್ಟಡ, ರಸ್ತೆಗಳ ನಿರ್ಮಾಣ ಮಾಡಲಾಗಿದೆ. ಜಾಗತೀಕರಣವು ಮಾನವೀಯ ಮೌಲ್ಯಕ್ಕಿಂತ ಆರ್ಥಿಕ ಲಾಭವೊಂದೇ ಗುರಿ ಎಂದು ವಾದಿಸುತ್ತದೆ. ಜಾಗತೀಕರಣ ಭೋಗ ಸಂಸ್ಕೃತಿಯಾಗಿ ಜನರ ಜೀವನದ ಎಲ್ಲಾ ಕ್ಷೇತ್ರಗಳ ಮೇಲೂ ಪ್ರಭಾವ ಬೀರಿದೆ. ಕಲೆ ಮತ್ತು ವಾಸ್ತುಶಿಲ್ಪವು ಆಧುನಿಕ ಶೈಲಿಯಲ್ಲಿ ಮಿಶ್ರವಾಗುತ್ತಿದೆ. ಸಂಗೀತವು ಪಾಶ್ಚಿಮಾತ್ಯ ಸಂಗೀತಕ್ಕೆ ಮರುಳಾಗಿದೆ. ನಾಟಕ, ನೃತ್ಯಗಳು ಪಾಶ್ಚಿಮಾತ್ಯದ ಸಂಸ್ಕೃತಿಗೆ ಒಳಗಾಗಿವೆ. ಸಾಹಿತ್ಯವು ವ್ಯಾಪಾರದ ಉದ್ಯಮವಾಗುತ್ತಿದೆ. ಆಧುನಿಕ ಶಿಕ್ಷಣದ ಹಿನ್ನೆಲೆಯಲ್ಲಿ ಸ್ಥಳೀಯ ಭಾಷೆಗಿಂತ ಇಂಗ್ಲಿಷ್ ಭಾಷೆಯ ಮೂಲಕ ಶಿಕ್ಷಣ ಪಡೆಯಲಾಗುತ್ತಿದೆ. ಸಾಮಾನ್ಯ ಶಿಕ್ಷಣಕ್ಕಿಂತ ವೃತ್ತಿ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ದೊರಕಿದೆ. ಆಧುನಿಕತೆಯ

ಪ್ರಭಾವಕ್ಕೆ ನೆಲಮಂಗಲ ತಾಲ್ಲೂಕು ಗ್ರಾಮೀಣ ಪ್ರದೇಶವಾಗಿ ಹೊಂದಿಕೊಳ್ಳುವುದು ಕಷ್ಟವಾದರೂ ಅದಕ್ಕೆ ಮಾರುಹೋಗಿ ಅನೇಕ ದುಃಖ ದುಮ್ಮಾನಗಳನ್ನು ಎದುರಿಸುತ್ತಿದೆ. ಯಾವುದೇ ಪ್ರದೇಶವಾಗಲೀ ಅದು ಸ್ವಾಭಾವಿಕವಾಗಿ ಬೆಳೆದರೆ ಅದರಿಂದ ಯಾರಿಗೂ ತೊಂದರೆಯಾಗುವುದಿಲ್ಲ. ನಗರಕ್ಕೆ ಸಮೀಪವಿರುವಂತಹ ಹಳ್ಳಿಗಳು ಆ ವಾತಾವರಣಕ್ಕೆ ಹೊಂದಿಕೊಂಡು ಹೋಗುವ ಪರಿಸ್ಥಿತಿ ಸ್ವಾಭಾವಿಕವಾಗಿರಬೇಕು. ಅದನ್ನು ಬಿಟ್ಟು ಬಲವಂತವಾಗಿ ನೆಲಮಂಗಲವನ್ನು ಗುರುತಿಸಿ ಭೂಸ್ವಾಧೀನ ಪಡಿಸಿಕೊಂಡು, ರೈತರನ್ನು ಒಕ್ಕಲೆಬ್ಬಿಸಿ ಕಡಿಮೆ ಬೆಲೆಗೆ ಭೂಮಿಯನ್ನು ಮಾರಾಟ ಮಾಡುತ್ತಿರುವುದು ಮತ್ತು ಬಂಡವಾಳಿಗರ ಹಿತಾಸಕ್ತಿಯನ್ನು ಪೋಷಿಸುವುದು ಜನರ ಅಸ್ತಿತ್ವವನ್ನೇ ಪ್ರಶ್ನಿಸುವಂತಿದೆ. ಆದ್ದರಿಂದ ಇಲ್ಲಿ ಅಪಾಯವಾಗುವ ಮುನ್ನ ಜನರು ಎಚ್ಚೆತ್ತುಕೊಳ್ಳಬೇಕಾಗಿರುವುದು ಅಗತ್ಯ. ತಮ್ಮ ಸಂಸ್ಕೃತಿಯನ್ನು ತಾವು ಸಂರಕ್ಷಿಸಿಕೊಳ್ಳಬೇಕು. ಈ ದೃಷ್ಟಿಯಲ್ಲಿ ನನ್ನ ಸಂಶೋಧನ ವಿಷಯವನ್ನು ಕೇಂದ್ರೀಕರಿಸಿಕೊಂಡು ಮುನ್ನೆಡೆದಿದೆ. ಸ್ಥಳೀಯ ಚರಿತ್ರೆಗೆ ಹೆಚ್ಚು ಒತ್ತು ನೀಡುತ್ತಿರುವ ಇಂದಿನ ಸನ್ನಿವೇಶದಲ್ಲಿ ಇಂತಹ ಅಧ್ಯಯನಗಳು ಹೆಚ್ಚು ಮಹತ್ವವೆನಿಸುತ್ತವೆ. ನೆಲಮಂಗಲ ತಾಲ್ಲೂಕಿನ ಸಂಸ್ಕೃತಿಯ ಕುರಿತು ಇದುವರೆಗೂ ಬಂದಿರುವ ಸಂಶೋಧನಾತ್ಮಕ ಉಲ್ಲೇಖವಾದ ವ್ಯಕ್ತಿಗಳನ್ನು ಸಂಶೋಧನಾ ಅವಧಿಯಲ್ಲಿ ಸಂದರ್ಶಿಸಿ ಮತ್ತು ಸ್ಥಳಗಳಿಗೆ ಭೇಟಿ ನೀಡಿ ವಿಶ್ಲೇಷಣೆಗೆ ಪ್ರಯತ್ನಿಸಲಾಗಿದೆ. ಈ ವಿಷಯ ಕುರಿತು ಅಧ್ಯಯನ ಮಾಡುವ ದೃಷ್ಟಿಕೋನಗಳು ಇನ್ನೂ ಹಲವಾರು. ಇಲ್ಲಿ ಅಧ್ಯಯನ ಮತ್ತು ಕಾಲದ ಮಿತಿಯಿಂದಾಗಿ ಇಷ್ಟಕ್ಕೆ ಸೀಮಿತಗೊಳಿಸಿಕೊಂಡು ಅಧ್ಯಯನ ಕೈಗೊಳ್ಳಲಾಗಿದೆ.

# ನೆಲಮಂಗಲ ತಾಲ್ಲೂಕಿನ ನಕ್ಷೆ



# ಪರಾಮರ್ಶನ ಗ್ರಂಥಗಳು

ಅಪರ್ಣ ಕೂ.ಸ., **ದೇವಾಲಯ ವಾಸ್ತುಶಿಲ್ಪ ಪರಿಚಯ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೯

ಅನಂತರಾಮ ರಾವ್ ಕೆ., **ಸುವರ್ಣ ಕರ್ನಾಟಕ ದರ್ಶನ**, ವಿದ್ಯಾ ಪಬ್ಲಿಷಿಂಗ್ ಹೌಸ್, ಮಂಗಳೂರು, ೨೦೦೬

ಇಂದಿರಾ ಬಿ.ಪಿ., **ಸಾಧನೆಯ ಹಾದಿಯಲ್ಲಿ ಬಿ.ಆರ್. ಪ್ರಾಣೇಶರಾವ್ ಬದುಕು ಚಿತ್ರಣ**, ಭಾರತೀ ಪ್ರಕಾಶನ, ಮೈಸೂರು ೨೦೦೩

ಕವಿತಾ ಕೃಷ್ಣ, **ಗಂಗರ ಮಾನ್ಯಪುರ**, ಕವಿತಾ ಪ್ರಕಾಶನ, ಕ್ಯಾತಸಂದ್ರ, ತುಮಕೂರು, ೨೦೦೧

ಗೋಪಾಲ ರಾವ್ ಎಚ್.ಎಸ್., **ನಮ್ಮ ನಾಡು ಕರ್ನಾಟಕ**, ನವಕರ್ನಾಟಕ ಪ್ರಕಾಶನ ಬೆಂಗಳೂರು, ೧೯೯೩

ಗೋಪಾಲ ರಾವ್ ಎಚ್.ಎಸ್. (ಸಂ.), **ಗಂಗ ಶಿಲ್ಪಕಲೆ**, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು, ೨೦೦೮

ಗೋಪಾಲ ಬಾ.ರಾ. **ಕರ್ನಾಟಕದ ಕಲೆಗಳು**, ಸಂಪುಟ - ೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೧

ಗೋವಿಂದ ರಾಜು ಸಿ.ಆರ್. (ಸಂ.), **ಇತಿಹಾಸ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ಚಿದಾನಂದ ಮೂರ್ತಿ ಎಂ., **ಕನ್ನಡ ಶಾಸನಗಳ: ಸಾಂಸ್ಕೃತಿಕ ಅಧ್ಯಯನ**, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೩

ಚಿನ್ನಸ್ವಾಮಿ ಸೋಸಲೆ ಎನ್., **ನಮ್ಮ ಗ್ರಾಮಗಳು ಅಂದು-ಇಂದು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ಚಿನ್ನಸ್ವಾಮಿ ಸೋಸಲೆ ಎನ್., ದಲಿತರ ಮೇಲೆ ದೌರ್ಜನ್ಯ : **ಒಂದು ನೋಟ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,೨೦೦೬

ಚಿನ್ನಸ್ವಾಮಿ ಸೋಸಲೆ ಎನ್., **ಸಾಮ್ರಾಜ್ಯ ಮತ್ತು ಸಂಸ್ಥಾನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ಚಂದ್ರಶೇಖರಯ್ಯ ಬಿ. ಎಂ. **ಕರ್ನಾಟಕ ಸಾಂಸ್ಕೃತಿಕ ಪರಂಪರೆ**, ಸಿ. ವಿ. ಜಿ. ಪ್ರಕಾಶನ, ಬೆಂಗಳೂರು, ೨೦೦೫

ಚಂದ್ರಮೌಳಿ ಕೆ., **ಬೆಂಗಳೂರಿನ ನೋಟಗಳು ಅಂದು-ಇಂದು**, ಪ್ರಿಸಮ್ ಬುಕ್ಸ್ ಪ್ರೈ. ಲಿ., ಬೆಂಗಳೂರು, ೨೦೦೨

ಚಂದ್ರಪೂಜಾರಿ ಎಂ. **ದೇಶಿಯತೆಯ ನೆರಳಿನಲ್ಲಿ ವಿಕೇಂದ್ರಿಕರಣ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ಚಂದ್ರಶೇಖರ ರಾ. ನಂ., **ಇದು ನಮ್ಮ ಕರ್ನಾಟಕ ಆಗು-ಹೋಗುಗಳು,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೫

ದೇ. ಜವರೇಗೌಡ, ಕಮಲೇಶ್ ಕೆ.ಆರ್. (ಸಂ.), **ಕರ್ನಾಟಕ ರಾಜಕೀಯ ಚಿಂತನೆ,** ಎಸ್. ನಿಜಲಿಂಗಪ್ಪ ರಾಷ್ಟ್ರೀಯ ಪ್ರತಿಷ್ಠಾನ, ಬೆಂಗಳೂರು.

ದೇವರಕೊಂಡರೆಡ್ಡಿ (ಸಂ.), **ತಲಕಾಡಿನ ಗಂಗರ ದೇವಾಲಯಗಳು : ಒಂದು ಅಧ್ಯಯನ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೪

ದೇವರಕೊಂಡರೆಡ್ಡಿ (ಸಂ.), **ಶಾಸನ ಅಧ್ಯಯನ - ೨,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ದೇವರಾಜ್, **ಕರ್ನಾಟಕ ಪರಿಚಯ,** ಚಂದನ ಪ್ರಕಾಶನ, ಬೆಂಗಳೂರು, ೨೦೦೮

ನಾಗರಾಜರಾವ್ ಎಂ. ಜಿ. (ಸಂ.), **ಕನ್ನಡ ನಾಡು-ನುಡಿ-ಸಂಸ್ಕೃತಿ** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬

ನಾಗಭೂಷಣ ಸಿ, **ಗುಬ್ಬಿ: ಒಂದು ಸಾಂಸ್ಕೃತಿಕ ದರ್ಶನ,** ಸಿರಿಗನ್ನಡ ಪ್ರಕಾಶನ, ಬೆಂಗಳೂರು, ೧೯೯೧

ನಂಜುಂಡ ಸ್ವಾಮಿ ಎ.ಎಸ್., **ಕರ್ನಾಟಕ ಇತಿಹಾಸ ಮಾಲಿಕೆ: ಕದಂಬ ಗಂಗರ ಇತಿಹಾಸ,** ಮನೋಹರ ಘಣೇಕರ ಪಬ್ಲಿಕೇಷನ್ಸ್, ಧಾರವಾಡ

ನಂಜುಂಡ ಸ್ವಾಮಿ ಎ. ಎಸ್., **ರಾಷ್ಟ್ರಕೂಟರ ಇತಿಹಾಸ,** ಮನೋಹರ ಘಣೇಕರ ಪ್ರಕಾಶನ, ಧಾರವಾಡ,೨೦೦೪

ಬರಗೂರು ರಾಮಚಂದ್ರಪ್ಪ, **ಕರ್ನಾಟಕ ಸಂಗಾತಿ,** ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ೨೦೦೨

ಬೇಂದ್ರೆ ಮಂಜುನಾಥ, **ಸುವರ್ಣ ಕರ್ನಾಟಕ ಜಿಲ್ಲಾ ದರ್ಶನ,** ದಿಕ್ಸೂಚಿ ಪ್ರಕಾಶನ, ಬೆಂಗಳೂರು, ೨೦೦೭

ಮಹೇಶನ್ ಮ., **ಜಾಗತೀಕರಣ,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೨

ಮೂರ್ತಿ ಎಸ್., **ಭಾರತದ ರಾಜಕೀಯ ಸುಧಾರಣೆ,** ದಲಿತ ಸಂಘರ್ಷ ಸಮಿತಿ ಪ್ರಕಾಶನ, ೨೦೦೬

ಮೋಹನ್ ಕೃಷ್ಣ ರೈ, **ಪ್ರಭುತ್ವ ಮತ್ತು ಜನತೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,೨೦೦೪

ಮೋಹನ್ ಕೃಷ್ಣ ರೈ, **ವಸಾಹತು ಶಾಹಿ ಮತ್ತು ನಗರೀಕರಣ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೭

ಮಂಜೇಶ್ವರ ಗಣಪತಿ ರಾವ್ ಐಗಳ, **ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ,** ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ೨೦೦೪

ರವಿ ಎನ್. ಕದಂಬ, ಒಡೆಯರ್ ಡಿ. ಹೆಗ್ಗಡೆ, **ಜಾಗತೀಕರಣ ಸಮಗ್ರ ಪರಿಣಾಮಗಳ ವಿಶ್ಲೇಷಣೆ,** ಅರ್ಜುನ್ ಪಬ್ಲಿಷಿಂಗ್ ಹೌಸ್, ಮೈಸೂರು, ೨೦೦೬

ರಾಮಚಂದ್ರಗೌಡ ಹಿ.ಶಿ., ೨೦೦೭, **ಕನ್ನಡ ವಿಷಯ ವಿಶ್ವಕೋಶ : ಕರ್ನಾಟಕ (ಪರಿಷ್ಕೃತ)** ಸಂಪುಟ - ೨ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

ರಹಮತ್ ತರೀಕೆರೆ, **ಸಾಂಸ್ಕೃತಿಕ ಅಧ್ಯಯನ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಬೆಂಗಳೂರು, ೨೦೦೮

ರಹಮತ್ ತರೀಕೆರೆ, **ಕರ್ನಾಟಕದ ನಾಥಪಂಥ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

ರಮೇಶ ನಾಯಕ (ಸಂ.), **ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರುಚಿಂತನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

ರಹಮತ್ ತರೀಕೆರೆ (ಸಂ.), **ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ - ೩ ಧರ್ಮ,** ಪ್ರಸಾರಾಂಗ, ಹಂಪಿ, ೨೦೦೦

ಲಕ್ಷ್ಮಣ್ ತೆಲಗಾವಿ (ಸಂ.), **ಸ್ಥಳೀಯ ಚರಿತ್ರೆ ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

ಲಿಂಗಯ್ಯ ಡಿ. (ಸಂ.), **ಜಾಗತೀಕರಣ ಮತ್ತು ಬೆಂಗಳೂರು,** ಉದಯಭಾನು ಕಲಾ ಸಂಘ, ಬೆಂಗಳೂರು, ೨೦೦೩

ವಸು ಎಂ.ವಿ, **ಮೌಖಿಕ ಇತಿಹಾಸ,** ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು, ೨೦೦೪

ವಿದ್ಯಾನಂದ ಶೆಣೈ ಬಿ. ವಿ., **ಭಾರತ ದರ್ಶನ-ಭಾರತದ ಸಾಂಸ್ಕೃತಿಕ ಇತಿಹಾಸ ಕಥನ,** ರಾಷ್ಟ್ರೋತ್ಥಾನ ಮುದ್ರಣಾಲಯ, ಬೆಂಗಳೂರು, ೨೦೦೩

ಶಿವತಾರಕ ಕೆ. ಬಿ., **ಕರ್ನಾಟಕದ ಪುರಾತತ್ವ ನೆಲೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ಶಿವಕುಮಾರ ಸ್ವಾಮಿ ಎಲ್. ಎಸ್., ಸತೀಶ್ ಬಿ. ಸಿ., **ಪ್ರಾಚೀನ ಭಾರತದ ಇತಿಹಾಸ,** ವನಿತಶಶಿ ಪ್ರಕಾಶನ, ಬೆಂಗಳೂರು, ೧೯೯೯

ಶೇಷಶಾಸ್ತ್ರಿ ಆರ್., ಶಿವಪ್ಪ ಕೆ.ಸಿ., **ಶಾಸನ ಪರಿಚಯ,** ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು, ೧೯೯೯

ಶೇಷಗಿರಿರಾವ್ ಎಲ್.ಎಸ್. (ಸಂ.), **ಬೆಂಗಳೂರು ದರ್ಶನ, ಸಂಪುಟ ೧ ಮತ್ತು ೨,** ಉದಯಭಾನು ಕಲಾ ಸಂಘ, ಬೆಂಗಳೂರು, ೨೦೦೫

ಶ್ರೀಧರ ಅಡಿಡ, **ಕರ್ನಾಟಕದ ಪ್ರೇಕ್ಷಣೀಯ ಸ್ಥಳಗಳು,** ಪ್ರವಾಸಿ ಮಾರ್ಗದರ್ಶಿ, ಕೃಷಿ ವಿಕಾಸ್ ಪಬ್ಲಿಕೇಷನ್, ಬೆಂಗಳೂರು, ೨೦೦೬

ಸಿದ್ಧಗಂಗಯ್ಯ ಬಿ., ಶ್ರೀ ಶಿವಗಂಗಾ ಐತಿಹಾಸಿಕ ದಾಖಲೆಗಳು (೧೮೧೬-೧೮೯೩), ಕರ್ನಾಟಕ ಸರ್ಕಾರ, ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯ, ವಿಧಾನಸೌಧ, ಬೆಂಗಳೂರು, ೨೦೦೦

ಸುರೇಶ ಭೀ ಹೂಗಾರ, **ಕರ್ನಾಟಕದ ಪ್ರಮುಖ ಐತಿಹಾಸಿಕ ಸ್ಥಳಗಳು,** ವಾಸನ್ ಪಬ್ಲಿಕೇಷನ್ಸ್ ಬೆಂಗಳೂರು, ೨೦೦೮

ಸೂರ್ಯನಾಥ ಕಾಮತ್, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, **೧,೨ ಮತ್ತು ೩ ಸಂಪುಟಗಳು,** ಗೀತಾ ಬುಕ್ ಹೌಸ್, ಮೈಸೂರು, ೧೯೭೭

ಸೂರ್ಯನಾಥ ಕಾಮತ್, **ಕರ್ನಾಟಕದ ಸಂಕ್ಷಿಪ್ತ ಇತಿಹಾಸ** , ಎಂ. ಸಿ. ಸಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೫

ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ - ೨ ಕರ್ನಾಟಕ ಸರ್ಕಾರ, ಬೆಂಗಳೂರು, ೧೯೮೫

ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ-೩ ಕರ್ನಾಟಕ ಸರ್ಕಾರ, ಬೆಂಗಳೂರು, ೧೯೮೬

ಸುಂದರ್‌ರಾವ್ ಬ.ನ. (ವನವಿಹಾರಿ) ಬೆಂಗಳೂರಿನ ಇತಿಹಾಸ, ವಸಂತ ಸಾಹಿತ್ಯ ಗ್ರಂಥ ಮಾಲಾ, ಬೆಂಗಳೂರು, ೧೯೮೫

ಯಳನಾಡು ಅಂಜಿನಪ್ಪ, ಧರ್ಮ ಮತ್ತು ಮುಕ್ತವಿಚಾರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

ಕ್ಷಮಾ ಶಿವಕುಮಾರ್, ಶಿವಗಂಗಾ (ಕ್ಷೇತ್ರ ದರ್ಶನ), ವಾಗ್ವಿಲಾಸ ಪ್ರಕಾಶನ, ಬೆಂಗಳೂರು, ೨೦೦೬.

**ಇಂಗ್ಲೀಷ್ ಗ್ರಂಥಗಳು**

ಅಪರಂಜಿ ಎನ್. ಆರ್., ಏನ್‌ಷಿಯಂಟ್ ಡಿಸ್ಕವರಿ ಆಫ್ ಇಂಡಿಯಾ, ಕೇಂಬ್ರಿಡ್ಜ್ ಪಬ್ಲಿಕೇಷನ್, ಬೆಂಗಳೂರು, ೧೯೮೦

ರಾಬರ್ಟ್ ಸಿವೆಲ್, ದಿ ಹಿಸ್ಟಾರಿಕಲ್ ಇನ್‌ಸ್ಕ್ರಿಪ್ಷನ್ಸ್ ಆಫ್ ಸೌತೇರಿಯನ್ ಇಂಡಿಯಾ, ಏಷ್ಯಾನ್ ಎಜುಕೇಷನಲ್ ಸರ್ವೀಸ್, ನ್ಯೂಡೆಲ್ಲಿ, ೧೯೮೦

ರಾಜಕುಮಾರ್, ಏಷ್ಯನ್ ಆನ್ ಇಂಡಿಯನ್ ಆರ್ಟ್ ಅಂಡ್ ಆರ್ಕಿಟೆಕ್ಚರ್, ಡಿಸ್ಕವರಿ ಪಬ್ಲಿಕೇಷಿಂಗ್ ಹೌಸ್,ನ್ಯೂಡೆಲ್ಲಿ, ೨೦೦೩

ಕರ್ನಾಟಕ ಸ್ಟೇಟ್ ಗೆಜೆಟಿಯರ್, ಬೆಂಗಳೂರು ರೂರಲ್ ಡಿಸ್ಟ್ರಿಕ್ ಗೌರ್ನಮೆಂಟ್ ಆಫ್ ಕರ್ನಾಟಕ ಪಬ್ಲಿಕೇಷನ್, ಬೆಂಗಳೂರು, ೧೯೮೯

**ಅಪ್ರಕಟಿತ ಗ್ರಂಥಗಳು**

ಪಾರ್ಥ ಎ.ಸಿ., ರಾಮನಗರ : ಒಂದು ಸಾಂಸ್ಕೃತಿಕ ಅಧ್ಯಯನ, ಪಿಎಚ್.ಡಿ ಪ್ರಬಂಧ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೭

ಮುನಿರಾಜು ಕೆ. ಎಂ., ಹುಲುಕಡಿನಾಡು : ಒಂದು ಸಾಂಸ್ಕೃತಿಕ ಅಧ್ಯಯನ, ಎಂ.ಫಿಲ್. ಸಂಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೨

ಶಂಕರ ಕೆ., ಕುಡುತಿನಿ : ಸಾಂಸ್ಕೃತಿಕ ಅಧ್ಯಯನ, ಎಂ.ಫಿಲ್. ಸಂಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

ಗವಿಸಿದ್ಧಪ್ಪ ಪಾಟೀಲ, ಕುಕನೂರು : ಒಂದು ಸಾಂಸ್ಕೃತಿಕ ಅಧ್ಯಯನ, ಪಿಎಚ್.ಡಿ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

**ಲೇಖನಗಳು**

ಕೃಷ್ಣಮೂರ್ತಿ ಪಿ.ವಿ., ಕುಕ್ಕಲ ನಾಡು ಒಂದು ಪ್ರಾಚೀನ ವಿಭಾಗ, [ಸೂರ್ಯನಾಥ ಕಾಮತ್ (ಸಂ.), ಇತಿಹಾಸ ದರ್ಶನ ಸಂಪುಟ-೧] ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೧೯೮೬

ರಂಗರಾಜು ಎನ್. ಎಸ್., ಗಂಗರ ಕಾಲದ ಜೈನಧರ್ಮದ ಮೇಲೆ ಹೊಸ ಬೆಳಕು [ಸೂರ್ಯನಾಥ

ಕಾಮತ್ ದೇವರ ಕೊಂಡ ರೆಡ್ಡಿ (ಸಂ.), ಇತಿಹಾಸ ದರ್ಶನ ಸಂಪುಟ-೯] ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೧೯೯೪

ಮಂಜುನಾಥ ಎಂ. ಜಿ., ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನವಶೋಧಿತ ಬೃಹತ್ ಶಿಲಾ ನಿವೇಶನಗಳು, [ಸೂರ್ಯನಾಥ ಕಾಮತ್ ಕೃಷ್ಣಮೂರ್ತಿ ಪಿ.ವಿ. (ಸಂ.), ಇತಿಹಾಸ ದರ್ಶನ ಸಂಪುಟ-೧೦] ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರು,೧೯೯೫

ಲೋಕೇಶ್ ಎಂ., ಮರಿದೇವರು ಎಂ. ಎಸ್., ಅರವಿಂದ್ ಎಸ್., ಬೃಹತ್ ಶಿಲಾಯುಗದ ನೆಲೆಯಾಗಿ ಮೋಟಗಾನಹಳ್ಳಿ, [ಸೂರ್ಯನಾಥ ಕಾಮತ್, ಕೃಷ್ಣಮೂರ್ತಿ ಪಿ.ವಿ. (ಸಂ.), ಇತಿಹಾಸ ದರ್ಶನ ಸಂಪುಟ-೧೩] ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೧೯೯೮

ಜಯರಾಮಯ್ಯ ಜೆ. ಟಿ., ಬಂಡೆಚಿಕ್ಕನಹಳ್ಳಿಯ ಶಿಲಾಯುಗದ ಸಮಾಧಿಗಳು ಶೋಧನೆ [ಅದೇ.]

ನಿರ್ಮಲ ಎಸ್. ವೈ., ಶ್ರೀನಿವಾಸಪುರ ಮತ್ತು ಮಾದೀಪುರದ ಬೃಹತ್ ಶಿಲಾಯುಗದ ಸಮಾಧಿಗಳು [ಅದೇ.]

ಗೋಪಾಲರಾವ್ ಎಚ್. ಎಸ್., ಮಣ್ಣೆಯಲ್ಲಿ ಇತ್ತೀಚಿನ ಶೋಧಗಳು, [ಸೂರ್ಯನಾಥ ಕಾಮತ್ ಕೃಷ್ಣಮೂರ್ತಿ ಪಿ.ವಿ. (ಸಂ.), ಇತಿಹಾಸ ದರ್ಶನ ಸಂಪುಟ-೧೫] ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರು, ೨೦೦೦

ರಾಜಗೋಪಾಲ್ ಕ.ವೆಂ., ಮಣ್ಣೆಯ ಅಹರ್ಪ್ರತಿ ಮಂದಿರ ಕಪಿಲ, ಸೂರ್ಯ, [ನಾಗರಾಜ್ ಎಂ.ಜಿ. ಕೃಷ್ಣಮೂರ್ತಿ, (ಸಂ.), ಇತಿಹಾಸ ದರ್ಶನ ಸಂಪುಟ-೧೬] ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರು, ೨೦೦೩

ಗೋಪಾಲರಾವ್ ಎಚ್. ಎಸ್., ಮಣ್ಣೆಯಲ್ಲೊಂದು ವೀರಬಲ್ಲಾಳನ ಶಾಸನ, ನಾಗರಾಜ್ ಎಂ. ಜಿ. ಕೃಷ್ಣಮೂರ್ತಿ ಪಿ.ವಿ. (ಸಂ.), ಇತಿಹಾಸ ದರ್ಶನ-೧೮] ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೨೦೦೩

ಗೋಪಾಲರಾವ್ ಎಚ್. ಎಸ್., ಶಿವಮಾರನ ಮರಳುಕುಂಟ ಶಾಸನ ಮತ್ತು ಮಣ್ಣೆಯ ಯುದ್ಧನೆಲೆ, [ನಾಗರಾಜ್ ಎಂ.ಜಿ., ಕೃಷ್ಣಮೂರ್ತಿ ಪಿ.ವಿ. (ಸಂ.), ಇತಿಹಾಸ ದರ್ಶನ ಸಂಪುಟ-೧೯] ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೨೦೦೪

ಸೂರ್ಯನಾಥ ಕಾಮತ್, ಇತಿಹಾಸ, ಶೇಷಗಿರಿರಾವ್ ಎಲ್. ಎಸ್. (ಸಂ.), ಬೆಂಗಳೂರು ದರ್ಶನ ಸಂಪುಟ-೧ ಉದಯ ಭಾನು ಕಲಾಸಂಘ ನೋಂ. ಬೆಂಗಳೂರು, ೨೦೦೫

ಗೋಪಾಲರಾವ್ ಎಚ್. ಎಸ್., ಮಣ್ಣೆಯಲ್ಲಿ ವರ್ತಕ ಶ್ರೇಣಿ ಮತ್ತು ವೈಷ್ಣವ ಧರ್ಮ, [ನಾಗರಾಜ್ ಎಂ.ಜಿ., ಕೃಷ್ಣಮೂರ್ತಿ ಪಿ.ವಿ. ಸಂ., ಇತಿಹಾಸ ದರ್ಶನ ಸಂಪುಟ-೨೨] ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೨೦೦೭

**ಸ್ಮರಣ ಸಂಚಿಕೆಗಳು**

೧. ಅಧಿಪ್ ಚೌದರಿ, ಬೆಂಗಳೂರು ಜಿಲ್ಲಾಧಿಕಾರಿಗಳು (ಪ್ರ. ಸಂ.) ಅ.ರಾ.ಮಿತ್ರ (ಸಂ.),ಅಂಬಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಎರಡನೇ ಕನ್ನಡ ಸಾಹಿತ್ಯ ಸಮ್ಮೇಳನದ ನೆನೆಪಿನ ಸಂಚಿಕೆ, ಅನೇಕಲ್, ೧೯೮೧

೨. ಗೋಪಾಲರಾವ್ ಎಚ್.ಎಸ್. (ಸಂ.),ನೆಲದ ಸಿರಿ ನೆನಪಿನ ಸಂಚಿಕೆ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ೧೯೯೭
೩. ಎಲ್ಲೇಗೌಡ ಬೆಸಗರಹಳ್ಳಿ (ಸಂ.), ಶಿವಗಂಗೆ ಮಡಿಲು, ಸ್ಮರಣ ಸಂಚಿಕೆ, ನೆಲಮಂಗಲ ತಾಲ್ಲೂಕು ಪ್ರಥಮ ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ ೧೯೯೦
೪. ವೀರಭದ್ರಯ್ಯ ಎಚ್.ವಿ. ಶಾಂತವೀರಯ್ಯ ಹೀ ,ಚಿ. (ಸಂ.), ಹಾಲುಬಾವಿ, ವಿಶೇಷ ಸಂಚಿಕೆ, ಪ್ರಕಾಶಕರು- ಬಲಮುರಿ ಸಿದ್ಧಿವಿನಾಯಕ ಹಾಗೂ ಗಂಗಮ್ಮದೇವಿಯವರ ದೇವಸ್ಥಾನ ಸೇವಾ ಸಮಿತಿ ಟ್ರಸ್ಟ್, ಬ್ಯಾಲಕೆರೆ ದಾಖಲೆ, ಮಾಗಡಿ, ೨೦೦೦,
೫. ಶಿವಗಂಗಾ ಸಿರಿ, ಸ್ಮರಣ ಸಂಚಿಕೆ, ಪ್ರಕಾಶಕರು- ಶಿವಗಂಗಾ ಕ್ಷೇತ್ರೋತ್ಸವ ಸಮಿತಿ, ಶಿವಗಂಗೆ, ೨೦೦೦
೬. ಮಗಂಳ ಗಂಗ, ಸ್ಮರಣ ಸಂಚಿಕೆ , ಪ್ರಕಾಶಕರು-ಅಧ್ಯಕ್ಷರು ಮತ್ತು ಪದಾಧಿಕಾರಿಗಳು, ನೆಲಮಂಗಲ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ೨೦೦೭
೭. ಸುವರ್ಣ ನೆಲ, ಸ್ಮರಣ ಸಂಚಿಕೆ, ಪ್ರಕಾಶಕರು-ಅಧ್ಯಕ್ಷರು ಮತ್ತು ಪದಾಧಿಕಾರಿಗಳು, ನೆಲಮಂಗಲ ತಾಲ್ಲೂಕು ಕನಕ್ನಡ ಸಾಹಿತ್ಯ ಪರಿಷತ್ತು, ನೆಲಮಂಗಲ, ೨೦೦೭
೮. ಸುಶೀಲಾ ಸುಬ್ರಹ್ಮಣ್ಯ (ಸಂ.) , ಕರ್ನಾಟಕ ಸ್ವಾತಂತ್ರ್ಯ ಹೋರಾಟಗಾರರು, ಕ್ವಿಟ್ ಇಂಡಿಯಾ ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ, ಸ್ವಾತಂತ್ರ್ಯ ಯೋಧರ ಮತ್ತು ಉತ್ತಾರಾಧಿಕಾರಿಗಳ ಸಂಸ್ಥೆ, ಬೆಂಗಳೂರು ೧೯೯೩.
ಶ್ರೀಕ್ಷೇತ್ರ ಮಹಿಮೆ ಒಂದು ಪಕ್ಷಿನೋಟ, ರಂಭಾಪುರಿ ಬೆಳಗು
ತ್ಯಾಮಗೊಂಡ್ಲು ಅಂಬರೀಶ್ (ಸಂ.), ಶತಮಾನದ 'ರಾಜಾ' ಅಭಿನಂದನಾ ಕಿರುಹೊತ್ತಿಗೆ, ಶ್ರೀರಾಜಾ ಶ್ರೀಕಂಠ ಶ್ರೇಷ್ಠಿ, ಜನ್ಮಶತಮಾನೋತ್ಸವ ಸಮಿತಿ, ತ್ಯಾಮಗೊಂಡ್ಲು, ೨೦೦೮

**ನಿಯತಕಾಲಿಕೆಗಳು**

ಹೊಸತು
ದಿಕ್ಸೂಚಿ
ಸುಧಾ
ತರಂಗ

**ದಿನಪತ್ರಿಕೆಗಳು**

ಪ್ರಜಾವಾಣಿ
ಕನ್ನಡ ಪ್ರಭ
ಉದಯವಾಣಿ
ಸಂಯುಕ್ತ ಕರ್ನಾಟಕ

**ಸ್ಥಳೀಯ ಪತ್ರಿಕೆಗಳು**

ಸೆಲೆ
ನೆಲೆಮಂಗಲ ನಗಾರಿ
ನೆಲಮಂಗಲ ನ್ಯೂಸ್
ಧೂತ
ಬಹುಜನ ದಿಗಂತ
ತ್ರಿವರ್ಣ ವಾರ್ತೆ
ನಿರಂತರ



ಶಿವಗಂಗೆ ಬೆಟ್ಟ



ಬೃಹತ್ ಶಿಲಾಯುಗದ ನೆಲೆ–ಶಿವಗಂಗೆ



ವೀರಬಲ್ಲಾಳನ ಶಿಲಾ ಶಾಸನ–ಮಣ್ಣೆ



ವೀರಗಲ್ಲು– ಮಣ್ಣೆ



ಶ್ರೀ ವಿಜಯ ಜಿನಾಲಯ



ಕಪಿಲೇಶ್ವರ ದೇವಾಲಯ– ಮಣ್ಣೆ



ಕಪಿಲೇಶ್ವರ ದೇಗುಲದ ಜಾಲಾಂದ್ರ- ಮಣ್ಣೆ



ಅಕ್ಕ-ತಂಗಿಯರ ಗುಡಿ- ಮಣ್ಣೆ



ಸಪ್ತ ಮಾತೃಕೆಯರು-ಮಣ್ಣೆ



ಭಗ್ನಗೊಂಡಿರುವ ಬಹುಹಸ್ತಗಳುಳ್ಳ ಮರ್ದಿನಿಯ ಪ್ರತಿಮೆ - ಮಣ್ಣೆ



ಸೋಮೇಶ್ವರ-ಮಣ್ಣೆ




ಗಂಗರ ಮತ್ತು ರಾಷ್ಟ್ರಕೂಟರ ಯುದ್ಧದ ನೆಲೆ-ಮಣ್ಣೆ



ಸೂರ್ಯ ವಿಗ್ರಹ- ಮಣ್ಣೆ


ಗಂಗಾಧರೇಶ್ವರ ಗುಹಾಂತರ ದೇವಾಲಯ– ಶಿವಗಂಗೆ


ಸ್ತಂಭ ಶಿಲ್ಪ– ಶಿವಗಂಗೆ


ಗಂಗಾಧರೇಶ್ವರ ವಿಗ್ರಹ– ಶಿವಗಂಗೆ


ಹೊನ್ನಾದೇವಿ ವಿಗ್ರಹ– ಶಿವಗಂಗೆ


ಶಿವಗಂಗೆ ಬೆಟ್ಟದ ಪ್ರವೇಶದ್ವಾರದ ಬಸವ


ಸಂಕೋಲೆ ವೀರಭದ್ರ– ಶಿವಗಂಗೆ


ಪಾತಾಳಗಂಗೆ_ ಶಿವಗಂಗೆ



ಬೌದ್ಧ ಚೈತ್ಯದ ಮಾದರಿ– ಶಿವಗಂಗೆ



ಕೋಡಗಲ್ಲು ಬಸವಣ್ಣ– ಶಿವಗಂಗೆ



ಮುಕ್ತಿ ನಾಥೇಶ್ವರ ದೇವಾಲಯ–ಭಿನ್ನಮಂಗಲ



ಭೈರವನಮೂರ್ತಿ–ಭಿನ್ನಮಂಗಲ



ವೇಣುಗೋಪಾಲ– ಭಿನ್ನಮಂಗಲ



ದೀಪದ ಕಂಬ, ಭಿನ್ನಮಂಗಲ



ವೆಂಕಟೇಶ್ವರ ಶಿಲ್ಪ, ಭಿನ್ನಮಂಗಲ



ರುದ್ರೇಶ್ವರ ಸ್ವಾಮಿ ದೇವಾಲಯ, ನೆಲಮಂಗಲ




ಸ್ವಾತಂತ್ರ್ಯ ಹೋರಾಟಗಾರರು–ರಾಜಾ ಶ್ರೀಕಂಠ ಶ್ರೇಷ್ಠಿ, ಬಿ.ಆರ್.ಪ್ರಾಣೇಶ ರಾವ್, ಕೆ.ಕೃಷ್ಣಪ್ಪ, ಬಿ.ಎಸ್.ರಾಜರತ್ನಂ, ಶ್ರೀಮತಿ. ಪಾರ್ವತಮ್ಮ. ಮತ್ತು ಅನ್ನಪೂರ್ಣಮ್ಮ




ನಗರೀಕರಣದ ಹಿನ್ನೆಲೆಯಲ್ಲಿ ನೆಲಮಂಗಲ ರಸ್ತೆಯ ಅಗಲೀಕರಣ
ಕೃಪೆ : ಪ್ರಜಾವಾಣಿ, ೩ನೇ ಮೇ ೨೦೦೮



ನೆಲಮಂಗಲ ರಸ್ತೆಗೆ ಹೊಂದಿಕೊಂಡಂತೆ ಮೈಸೂರು
ಬೆಂಗಳೂರು ಕಾರಿಡಾರು ಯೋಜನೆಯ ವರ್ತುಲ ರಸ್ತೆ









ಬಹುರಾಷ್ಟ್ರೀಯ ಕಂಪನಿಗಳು : ಪೆಪ್ಸಿ, ಇಂಡಸ್ ಪಿಲಾ, ಪೋರ್ಸ್‌ರಾಕ್ ಕೈಗಾರಿಕೆಗಳು ನೆಲಮಂಗಲ




ಮೃತ್ಯಂಜಯ ತಾಂತ್ರಿಕ ಕಾಲೇಜ್, ನೆಲಮಂಗಲ



ನರ್ಸಿಂಗ್ ಕಾಲೇಜ್, ನೆಲಮಂಗಲ